# ಕನ್ನಡ ಕಥನ ಪರಂಪರೆ ಮತ್ತು ಕುವೆಂಪು ಕಥಾಸಾಹಿತ್ಯ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕ

ಉದ್ದಂಡಯ್ಯ

ಮಾರ್ಗದರ್ಶಕರು

ಡಾ. ಕರೀಗೌಡ ಬೀಚನಹಳ್ಳಿ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಭಾಷಾಂತರ ವಿಭಾಗ



ಭಾಷಾನಿಕಾಯ

ಭಾಷಾಂತರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬




೨೦೦೨

# ಕನ್ನಡ ಕಥನ ಪರಂಪರೆ ಮತ್ತು ಕುವೆಂಪು ಕಥಾಸಾಹಿತ್ಯ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ

**ಉದ್ದಂಡಯ್ಯ**

ಪ್ರಾಚಾರ್ಯರು
ಶ್ರೀಗಂಧದ ಕಾವಲು ಪ್ರಥಮ ದರ್ಜೆ ಕಲಾ ಮಹಾವಿದ್ಯಾಲಯ
ಮಾಗಡಿ ರಸ್ತೆ, ಶ್ರೀಗಂಧದ ಕಾವಲು
ಬೆಂಗಳೂರು - ೫೬೦ ೦೯೧

ಮಾರ್ಗದರ್ಶಕರು

**ಡಾ. ಕರೀಗೌಡ ಬೀಚನಹಳ್ಳಿ**

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಭಾಷಾಂತರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬



ಭಾಷಾನಿಕಾಯ

**ಭಾಷಾಂತರ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

**೨೦೦೨**

## ದೃಢೀಕರಣ ಪತ್ರ

ಶ್ರೀ ಉದ್ದಂಡಯ್ಯ ಇವರು 'ಕನ್ನಡ ಕಥನ ಪರಂಪರೆ ಮತ್ತು ಕುವೆಂಪು ಕಥಾಸಾಹಿತ್ಯ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಭಾಷಾಂತರ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೮.೦೮.೨೦೦೨

ಸ್ಥಳ : ವಿದ್ಯಾರಣ್ಯ

(ಡಾ. ಬಿ.ಕೆ.ಕರೀಗೌಡ)
ಮಾರ್ಗದರ್ಶಕರು
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಭಾಷಾಂತರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಪ್ರಮಾಣ ಪತ್ರ

'ಕನ್ನಡ ಕಥನ ಪರಂಪರೆ ಮತ್ತು ಕುವೆಂಪು ಕಥಾಸಾಹಿತ್ಯ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಬಿ.ಕೆ.ಕರೀಗೌಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಭಾಷಾಂತರ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೮.೬.೨೦೦೨

(ಉದ್ದಂಡಯ್ಯ)
ಪ್ರಾಚಾರ್ಯರು
ಶ್ರೀಗಂಧದ ಕಾವಲು ಪ್ರಥಮ ದರ್ಜೆ ಕಲಾ ಮಹಾವಿದ್ಯಾಲಯ
ಮಾಗಡಿ ರಸ್ತೆ, ಶ್ರೀಗಂಧದ ಕಾವಲು
ಬೆಂಗಳೂರು - ೫೬೦ ೦೯೧

# ನೆನಕೆ

ಕನ್ನಡ ವಿಶ್ವವಿದ್ಯಾಲಯದಲ್ಲಿ ಬಾಹ್ಯ ವಿದ್ಯಾರ್ಥಿಯಾಗಿ ಪಿಎಚ್.ಡಿ. ಅಧ್ಯಯನ ಕೈಗೊಳ್ಳಲು ನನಗೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಅವರು ಮತ್ತು ನನ್ನ ಆತ್ಮೀಯ ಗುರುಗಳೂ ಕುಲಸಚಿವರೂ ಆದ ಡಾ. ಕೆ.ವಿ.ನಾರಾಯಣ ಅವರಿಗೆ ಹೃದಯಪೂರ್ವಕವಾಗಿ ಕೃತಜ್ಞನಾಗಿದ್ದೇನೆ.

ನನ್ನ ಅಧ್ಯಯನದ ಉದ್ದಕ್ಕೂ ಮಾರ್ಗದರ್ಶನ ನೀಡಿ ಈ ಮಹಾಪ್ರಬಂಧವನ್ನು ರೂಪಿಸಲು ಪ್ರೋತ್ಸಾಹಿಸಿದ ನೆಚ್ಚಿನ ಗುರುಗಳಾದ ಡಾ. ಕರೀಗೌಡ ಬೀಚನಹಳ್ಳಿ ಹಾಗೂ ಕತೆಗಾರ್ತಿ ಶ್ರೀಮತಿ ಕುಸುಮಾ ಕರೀಗೌಡ ಬೀಚನಹಳ್ಳಿ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಮಹಾಪ್ರಬಂಧದ ಕಾರ್ಯದಲ್ಲಿ ಆರಂಭದಿಂದ ಕೊನೆಯವರೆಗೂ ನನಗೆ ನೆರವಾಗಿ ನಿಂತು ವಿಶೇಷವಾದ ಮಾರ್ಗದರ್ಶನ ಮಾಡಿದ ಭಾಷಾಂತರ ವಿಭಾಗದ ಅಧ್ಯಾಪಕರು ಹಾಗೂ ಗೆಳೆಯರಾದ ಡಾ.ಕೆ.ಸಿ.ಶಿವಾರೆಡ್ಡಿಯವರನ್ನು ಮತ್ತು ಎಲ್ಲಾ ರೀತಿಯಲ್ಲೂ ಸಲಹೆಗಳನ್ನಿತ್ತು ಅಧ್ಯಯನಕ್ಕೆ ವಿಶೇಷವಾಗಿ ಸಹಾಯ ಮಾಡಿದ ವಿಜ್ಞಾನಗಳ ಇತಿಹಾಸ ವಿಭಾಗದ ಮುಖ್ಯಸ್ಥರಾದ ಶ್ರೀ ಕೆ.ಪುಟ್ಟಸ್ವಾಮಿಯವರನ್ನು ಸ್ಮರಿಸುವುದು ನನ್ನ ಕರ್ತವ್ಯವಾಗಿದೆ.

ನನ್ನ ಅಧ್ಯಯನದ ಅವಧಿಯಲ್ಲಿ ಪ್ರೋತ್ಸಾಹಿಸಿದ ಹಿರಿಯರೂ ಗುರುಗಳೂ ಆದ ಪ್ರೊ. ಕಿ.ರಂ.ನಾಗರಾಜ ಅವರಿಗೆ, ನನ್ನ ಅಧ್ಯಯನದಲ್ಲಿ ನೆರವಾದ ಪ್ರೊ. ಕಾಳೇಗೌಡ ನಾಗವಾರ, ಕವಿ ಪ್ರೊ. ಸಿದ್ದಲಿಂಗಯ್ಯ, ಪ್ರೊ. ಹಿ.ಚಿ.ಬೋರಲಿಂಗಯ್ಯ, ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಡಾ. ಸ.ಚಿ.ರಮೇಶ್, ಡಾ. ಮೋಹನ ಕುಂಟಾರ್, ಡಾ. ವಿಠಲರಾವ್ ಗಾಯಕ್ವಾಡ್, ಡಾ. ವಿ.ಬಿ.ತಾರಕೇಶ್ವರ, ಡಾ. ಅಶೋಕ ಕುಮಾರ ರಂಜೇರೆ, ಶ್ರೀ ಕಲವೀರ ಮನ್ವಾಚಾರ್, ಶ್ರೀ ಕೆ.ಪ್ರೇಮಕುಮಾರ ಅವರುಗಳನ್ನು ಈ ಸಂದರ್ಭದಲ್ಲಿ ಹೃದಯಪೂರ್ವಕವಾಗಿ ನೆನೆಯುತ್ತೇನೆ.

ಸದಾಕಾಲ ನನಗೆ ಬೆಂಬಲವಾಗಿ ನಿಂತು ಸಹಕಾರ ನೀಡುತ್ತಿರುವ ಸ್ನೇಹಿತರು ಹಾಗೂ ರಾಜರಾಜೇಶ್ವರಿ ನಗರಸಭೆಯ ಅಧ್ಯಕ್ಷರಾದ ಶ್ರೀಮಾನ್ ಹನುಮಂತರಾಯಪ್ಪನವರನ್ನು, ಕೇಂದ್ರ ಒಕ್ಕಲಿಗರ ಸಂಘದ ಸಹಾಯಕ ಕಾರ್ಯದರ್ಶಿಗಳು ಹಾಗೂ ಗೆಳೆಯರಾದ ಶ್ರೀ ಬಿ.ಎಚ್. ಜಗದೀಶ್ ಅವರನ್ನು, ಗೆಳೆಯರಾದ ಶ್ರೀ ಎಸ್.ಬಿ.ಕುಮಾರಸ್ವಾಮಿ, ಶ್ರೀ ಎಚ್.ವೆಂಕಟೇಶ್, ಶ್ರೀ ಬಿ.ಎನ್.ರಮೇಶ್, ಶ್ರೀ ಎ.ರಂಗಸ್ವಾಮಿ, ಶ್ರೀ ಮುನಿಯಪ್ಪ, ಶ್ರೀ ಎಂ.ಆರ್.ಹನುಮೇಗೌಡ, ಶ್ರೀ ಚಂದ್ರು, ಶ್ರೀ ಆನಂದ್, ಶ್ರೀ ಶಂಕರರೆಡ್ಡಿ, ಶ್ರೀ ಜಿ.ಎಲ್. ವಿಜಯೇಂದ್ರ ಕುಮಾರ್, ಕು.ಸಂಗೀತಾ ಇವರುಗಳನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಸ್ಮರಿಸುತ್ತೇನೆ.

ಈ ನನ್ನ ಅಧ್ಯಯನಕ್ಕೆ ಅತ್ಯಂತ ಉತ್ಸಾಹದಿಂದ ಪ್ರೋತ್ಸಾಹಿಸಿ, ಹುರಿದುಂಬಿಸಿ ಸಹಕರಿಸಿದ ಶ್ರೀ ಗಂಧದ ಕಾವಲು ವಿದ್ಯಾಸಂಸ್ಥೆಗಳ ಬೋಧಕ ಸ್ನೇಹಿತರಾದ ಶ್ರೀ ವೈ.ಜಯರಾಮ್, ಶ್ರೀ ಶ್ರೀನಿವಾಸಮೂರ್ತಿ, ಶ್ರೀ ರವಿಶಂಕರ್, ಶ್ರೀ ಎ.ಆರ್.ರಂಗಸ್ವಾಮಿ, ಶ್ರೀ ಬಿ.ತಿಮ್ಮೇಗೌಡರು, ಶ್ರೀ ಕೆ.ಎಂ.ಕೆಂಚಯ್ಯ, ಶ್ರೀ ಜಿ.ಎಸ್.ಮೋಹನ್ ಕುಮಾರ್, ಶ್ರೀ ಎಚ್.ವಿ.ಹೊನ್ನೇಗೌಡರು, ಶ್ರೀ ಬಿ.ಎಸ್.ರಾಜಶೇಖರ್ ಹಾಗೂ ನಮ್ಮ ಕಾಲೇಜಿನ ನನ್ನ ಹಿತೈಷಿಗಳಾದ ಶ್ರೀ ಎಂ.ನಾಗರಾಜಯ್ಯ, ಶ್ರೀಮತಿ ಕೆ.ನಾಗರತ್ನಮ್ಮ, ಶ್ರೀ ಎನ್.ನರಸಿಂಹಮೂರ್ತಿ ಇವರುಗಳನ್ನು ವಿಶೇಷವಾಗಿ ನೆನೆಯುತ್ತೇನೆ.

ನನ್ನನ್ನು ಹೆತ್ತು ಹೊತ್ತು ಸಾಕಿ ಸಲುಹಿದ ನನ್ನ ತಾಯಿ ದಿವಂಗತ ನಂಜಮ್ಮನವರಿಗೆ ಈ ಸಂದರ್ಭದಲ್ಲಿ ಪ್ರೀತಿಭಾವದ ನಮನಗಳನ್ನು ಅರ್ಪಿಸುತ್ತಿದ್ದೇನೆ. ನನ್ನ ಈ ಪಿಎಚ್.ಡಿ. ಅಧ್ಯಯನಕ್ಕೆ ನೆರವಾಗಿ ನಿಂತು ಎಲ್ಲ ರೀತಿಯಲ್ಲೂ ಸಹಕರಿಸಿದ ತಂದೆ ಶ್ರೀ ಮುನಿಶಾಮಪ್ಪನವರು, ಅತ್ತೆ ಮಾವಂದಿರಾದ ಶ್ರೀಮತಿ ನಾಗಮ್ಮ ಕರೇಗೌಡರು, ಈ ಅಧ್ಯಯನದ ಸಂದರ್ಭದಲ್ಲಿ ನನ್ನೆಲ್ಲಾ ಕಿರಿಕಿರಿಗಳನ್ನು ಸಹಿಸಿಕೊಂಡು ತಾಳ್ಮೆಯಿಂದ ಸಹಕರಿಸಿದ ನನ್ನ ಬಾಳಸಂಗಾತಿ ಶ್ರೀಮತಿ ಎಂ.ಕೆ.ತಿಮ್ಮಕ್ಕ ಹಾಗೂ 'ಅಪ್ಪಾ ನಿನ್ನ ಪಿಎಚ್.ಡಿ. ಓದೋದು ಯಾವಾಗ ಮುಗಿಯುತ್ತೆ' ಎಂದು ಕೇಳುತ್ತಿದ್ದ ನನ್ನ ಪ್ರೀತಿಯ ಪುತ್ರ ಯು.ಉಮೇಶ್‌ಚಂದ್ರ ಮತ್ತು ನನ್ನ ನಾದಿನಿಯರಾದ ಶ್ರೀಮತಿ ಮಂಜುಳಾ ನಾಗರಾಜು, ಶ್ರೀಮತಿ ಗೌರಮ್ಮ ಜಯಪ್ರಕಾಶ್‌ರವರು ಮತ್ತು ಅವರ ಮಕ್ಕಳಾದ ನಯನ, ಬಾಲಾಜಿ, ದುಂದುಭಿ ಇವರೆಲ್ಲರನ್ನು ಈ ಸಂದರ್ಭದಲ್ಲಿ ತುಂಬು ಹೃದಯದಿಂದ ನೆನೆಯುತ್ತೇನೆ.

ನನ್ನ ಅಧ್ಯಯನಕ್ಕೆ ನೆರವನ್ನು ನೀಡಿದ ಕನ್ನಡ ವಿಶ್ವವಿದ್ಯಾಲಯದ ಸಹಾಯಕ ಗ್ರಂಥಪಾಲಕಿ ಹಾಗೂ ಖ್ಯಾತ ಕತೆಗಾರ್ತಿ ಶ್ರೀಮತಿ ಎಚ್.ನಾಗವೇಣಿ ಅವರಿಗೆ, ಈ ಮಹಾಪ್ರಬಂಧವನ್ನು ಅತ್ಯಂತ ಪ್ರೀತಿಯಿಂದ ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿಕೊಟ್ಟ ಗೆಳೆಯ ಶ್ರೀ ಸೋಮನಾಥ ಕುಡಿತಿನಿ ಅವರಿಗೆ ಆಭಾರಿಯಾಗಿದ್ದೇನೆ.

ಈ ನನ್ನ ಮಹಾಪ್ರಬಂಧದ ರಚನೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕಾರಣವಾಗಿರುವ ಇನ್ನೂ ಹಲವಾರು ಮನಸ್ಸುಗಳನ್ನು ಮನದಲ್ಲಿಯೇ ನೆನೆಯುತ್ತೇನೆ.

ಉದ್ದಂಡಯ್ಯ

ದಿನಾಂಕ : ೧೮.೯.೨೦೦೨

ಸ್ಥಳ : ವಿದ್ಯಾರಣ್ಯ


ಕಾನೂರು
ಹೆಗ್ಗಡಿತಿ
ಕುವೆಂಪು


ಉದಯರವಿ ಪ್ರಕಾಶನ
ವಾಣಿವಿಲಾಸ ಪುರಂ
ಮೈಸೂರು ೫೭೦೦೦೨


ಮಲೆಗಳಲ್ಲಿ
ಮದುಮಗಳು
ಕುವೆಂಪು






ಮಲೆನಾಡಿನ
ಚಿತ್ರಗಳು
ಕುವೆಂಪು




ಕುವೆಂಪು ಅವರ ಮೊದಲ ಕಥೆಗಳು

ಕುವೆಂಪು ಕಥಾನಕಗಳು

# ಪರಿವಿಡಿ



❑ ❑

105

೧

# ಅಧ್ಯಯನದ ವ್ಯಾಪ್ತಿ ಮತ್ತು ಉದ್ದೇಶ

ಕನ್ನಡ ಸಾಹಿತ್ಯದಲ್ಲಿ ಬಹು ಹಿಂದಿನಿಂದಲೂ 'ಕಥನ' ಕ್ರಿಯೆಯು ಒಂದು ಬಹುಮುಖ್ಯ ತಂತ್ರವಾಗಿ, ವಿನ್ಯಾಸವಾಗಿ ಕೆಲಸ ಮಾಡಿದೆ. ಪಂಪನ ಹಾಗೂ ಆ ನಂತರ 'ಕಥನ' ಪರಂಪರೆಯಲ್ಲಿ ಇದು ಮೈಪಡೆಯುವ ಕ್ರಮವು ಕನ್ನಡ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ವಿಸ್ಮಯವನ್ನು ಉಂಟುಮಾಡುತ್ತದೆ. ಹಾಗೆಯೇ ಬೇರೆ ಬೇರೆ ಕಾಲಮಾನದಲ್ಲಿ 'ಕಥನ'ವನ್ನು ಸೃಷ್ಟಿಶೀಲ ಲೇಖಕರು ಹಾಗೂ ಜನಪದ ಸಾಹಿತ್ಯವು ದುಡಿಸಿಕೊಳ್ಳುವ ಕ್ರಮ ವಿಭಿನ್ನ ಬಗೆಯದಾಗಿದೆ.

ಗದ್ಯ-ಪದ್ಯ ಕಾವ್ಯಕೃತಿಗಳಲ್ಲಿ ಕಥನವು ನಿರಂತರವಾಗಿ ಒಂದು ಸಂಸ್ಕೃತಿಯ ಸಂಘರ್ಷವನ್ನು ಮತ್ತು ಅದರ ಆಗು ಹೋಗುಗಳನ್ನು ಅಭಿವ್ಯಕ್ತಿಸಲು ಸೃಷ್ಟಿಶೀಲರಿಗೆ ಒಂದು ಬಹುಮುಖ್ಯ ಮಾಧ್ಯಮವಾಗಿದೆ. ಇದು ತನ್ನ ಕರ್ತವ್ಯವನ್ನು ಜೀವಂತವಾಗಿ ನಿರ್ವಹಿಸಿದೆ. ಇಂತಹ ಕಥನ ಬೇರೆ ಬೇರೆ ಕಾಲಮಾನಗಳಲ್ಲಿ ಮತ್ತೂ ಬೇರೆಯದೇ ಆದ ವಿನ್ಯಾಸಗಳನ್ನು ಕನ್ನಡ ಸಾಹಿತ್ಯ ಸಂದರ್ಭಗಳಲ್ಲಿ ಮೈಪಡೆದುಕೊಳ್ಳುವ ಕ್ರಮವು ವಿಶಿಷ್ಟ ಬಗೆಯದು. ಆದರೆ 'ಕಥನ' ಈ ಹಿಂದೆ ರೂಪತಾಳುವ ಕ್ರಮಕ್ಕೂ ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದ ಮೈ ಪಡೆಯುವ ರೀತಿಗೂ ಭಿನ್ನತೆಗಳಿವೆ. ಗದ್ಯ-ಪದ್ಯಗಳ ಸಂಘರ್ಷದಿಂದ ಕಥನ ಬಿಡುಗಡೆ ಹೊಂದಿ ಸಂಪೂರ್ಣವಾಗಿ ಗದ್ಯದ ಪ್ರಕಾರವಾಗಿ ಹೊರ ಹೊಮ್ಮುವುದು ಈ ಶತಮಾನದ ಸಾಂಸ್ಕೃತಿಕ ಪರಿಸರ ಕಂಡುಕೊಂಡ ಕೊಡುಗೆ ಎನ್ನಬಹುದು.

ಕಥನ ಸಾಹಿತ್ಯದ ಕಾಣ್ಕೆಯು ಸಾಂಸ್ಕೃತಿಕ ಹಾಗೂ ಮನುಷ್ಯನ ವ್ಯಕ್ತಿಗತ ಸಮಸ್ಯೆ ಸಂಬಂಧಗಳನ್ನು ಕಟ್ಟಿಕೊಡುವ ಕೆಲಸವನ್ನು ಎದುರಾಗಿಸಿದೆ. ಇಂತಹ ಸಾಹಿತ್ಯ ವಿಶಿಷ್ಟತೆಯ ನೆಲೆಗಳು ವೇದ್ಯವಾಗಬೇಕಾದರೆ ವ್ಯವಸ್ಥಿತ ಅಧ್ಯಯನದಿಂದ ಸಾಧ್ಯ ಎಂಬುದು ಯಾರಾದರೂ ಒಪ್ಪುವಂತಹ ಮಾತಾಗಿವೆ. ಈ ಹಿನ್ನೆಲೆಯಲ್ಲಿ ಕುವೆಂಪು ಅವರ ಕಥಾ ಸಾಹಿತ್ಯದ ಅನನ್ಯತೆ ಮತ್ತು ಅದರ ಸಾಂಸ್ಕೃತಿಕ ವಿವರಗಳನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಕನ್ನಡ ಸಂಸ್ಕೃತಿಯಲ್ಲಿ ಕಥನ ಪಡೆದುಕೊಳ್ಳುವ ಕವಲುಗಳನ್ನು, ದಾರಿಗಳನ್ನು ಅಧ್ಯಯನಕ್ಕೆ ಪ್ರಾರಂಭದಲ್ಲಿ ಗುರಿಪಡಿಸುತ್ತಾ ಅದರ ಜೊತೆಯಲ್ಲಿ ಕುವೆಂಪು ಅವರ ಕಥಾ ಸಾಹಿತ್ಯವನ್ನು ವಿಶ್ಲೇಷಣೆಗೆ ಒಡ್ಡುವುದು ಈ ಅಧ್ಯಯನದ

ಬಹುಮುಖ್ಯ ಅಂಶವಾಗಿದೆ. ಕುವೆಂಪು ಅವರು ಕಥನ ಸಾಹಿತ್ಯ ಪರಂಪರೆಯ ಲೇಖಕರಿಂದ ಭಿನ್ನವಾಗುವ ಬಗೆ ಹಾಗೂ ಸಮಕಾಲೀನತೆಯಲ್ಲಿ ವಿಶಿಷ್ಟವಾಗುವ ಅವರ ಕಥನದ ಅನನ್ಯತೆಯನ್ನು ಹುಡುಕುವ ಕ್ರಿಯೆಯು ಪ್ರಸ್ತುತ ಮಹಾಪ್ರಬಂಧದ ಆಶಯವಾಗಿದೆ. ಅವರ ಒಟ್ಟು ಕೃತಿ ಸಮೂಹದಿಂದ ವ್ಯಕ್ತವಾಗುವ ಕಾಣ್ಕೆಯನ್ನು ಹುಡುಕುವುದು, ವಿಮರ್ಶೆ, ಚಿಂತನ-ಮಂಥನಗಳಿಗೆ ಮುಖಾಮುಖಿಯಾಗುವ, ಅದರಿಂದ ಉತ್ಪನ್ನವಾಗುವ ದರ್ಶನವನ್ನು ಕಂಡುಕೊಳ್ಳುವುದು ಈ ಅಧ್ಯಯನದ ನೆಲೆಯ ಆಶಯ.

ಸಮಕಾಲೀನ ಬಹುಮುಖ್ಯ ಕಥೆಗಾರರಲ್ಲಿ ಕುವೆಂಪು ಒಬ್ಬರು. ಅವರ ಒಟ್ಟು ಕೃತಿ ಸಮೂಹ ಹೊರಡಿಸುವ ಅರ್ಥಪರಂಪರೆಗಳು ಹಾಗೂ ವೈರುಧ್ಯಗಳು ಅವರನ್ನು ವಿಶಿಷ್ಟ ಲೇಖಕರನ್ನಾಗಿ ಸಮರ್ಥಿಸುತ್ತವೆ. ಕುವೆಂಪು ಅವರನ್ನು ಕಾಡುವ ಅನೇಕ ಪ್ರಶ್ನೆಗಳು ಅವರ ಕೃತಿಗಳಲ್ಲಿ ಮೈಪಡೆದುಕೊಳ್ಳುತ್ತಾ ವಿಶ್ಲೇಷಣೆಗಳಿಗೆ ಗುರಿಯಾಗುತ್ತವೆ. ಇವು ಮಲೆನಾಡಿನ ಅತ್ಯಂತ ಸಂಕೀರ್ಣವಾದ ಬದುಕನ್ನು ತೆರೆದಿಡುತ್ತವೆ. ಭಾರತೀಯ ಹಾಗೂ ಪ್ರಾದೇಶಿಕ ಬದುಕಿನಲ್ಲಿ ಏರ್ಪಡುತ್ತಿದ್ದ ಸ್ಥಿತ್ಯಂತರಗಳನ್ನು ಮತ್ತು ಅಂತಹ ಸ್ಥಿತ್ಯಂತರಗಳನ್ನು ಎದುರಾಗಿಸಿದ ತಲ್ಲಣಗಳನ್ನು ಕುವೆಂಪುರವರ ಕಥೆ ಕಾದಂಬರಿಗಳಲ್ಲಿ ಅಭಿವ್ಯಕ್ತಿಗೆ ಒಳಗಾಗಿರುವುದನ್ನು ಕಾಣಬಹುದು. ಆ ಮುಖೇನ ಒಂದು ಯುಗದ ಅಗಾಧ ಸಾಂಸ್ಕೃತಿಕ ಚರಿತ್ರೆಯನ್ನು ಕುವೆಂಪು ಕಥನವು ಕಟ್ಟಿಕೊಡುತ್ತದೆ. ಹಾಗೆಯೇ ಮನುಷ್ಯರನ್ನು ನಿರಂತರವಾಗಿ ಕಾಡುವ ಕಾಮ, ಗಂಡು ಹೆಣ್ಣಿನ ಸಂಬಂಧ, ಶ್ರೇಣಿಕೃತ ವ್ಯವಸ್ಥೆಯ ಕ್ರೌರ್ಯ, ಮತಾಂತರದ ಪ್ರಶ್ನೆ, ವಸಾಹತುಶಾಹಿ ಸಂಸ್ಕೃತಿಯು ಎದುರಾಗಿಸಿದ ಗೊಂದಲ, ಸಾಮಾಜಿಕ ಅನಿಷ್ಟಗಳ ಬಗೆಗೆ ಪ್ರತಿರೋಧ ಕುವೆಂಪುರವರ ಕೃತಿಗಳಲ್ಲಿ ದಟ್ಟವಾಗಿ ಪ್ರಕಟವಾಗಿವೆ.

ಕುವೆಂಪುರವರ ಕಥನ ತನ್ನ ಸಮಕಾಲೀನ ಲೇಖಕರಿಗಿಂತ ಅನೇಕ ಮಟ್ಟಗಳಲ್ಲಿ ಭಿನ್ನವಾಗಿ ಪ್ರಕಟವಾಗುತ್ತದೆ. ಪರಂಪರೆ ಹಾಗೂ ಸಮಕಾಲೀನ ಬದುಕಿಗೆ, ವೈರುಧ್ಯಗಳಿಗೆ, ಕುವೆಂಪುರವರು ತೋರುವ ಪ್ರತಿಕ್ರಿಯೆ ಹಾಗೂ ತಳೆಯುವ ನಿಲುವುಗಳು ವ್ಯಕ್ತಿವಿಶಿಷ್ಟ ಸಿದ್ಧಾಂತದಿಂದ ಕೂಡಿವೆ. ಜಾತಿ, ಧರ್ಮದ ಪ್ರಶ್ನೆಗಳು, ಮೌಢ್ಯತೆ -ಕ್ರೌರ್ಯಗಳ ದುರಂತಗಳು ಕುವೆಂಪುರವರ ಕೃತಿಗಳಲ್ಲಿ ತಮ್ಮ ಸಮಕಾಲೀನ ಲೇಖಕರಾದ ಕಾರಂತ, ಮಾಸ್ತಿಯವರಿಗಿಂತ ವಿಭಿನ್ನ ವ್ಯಾಖ್ಯೆಗಳನ್ನು ಪ್ರಕಟಿಸುತ್ತವೆ. ಪುರೋಹಿತ ವಸಾಹತುಶಾಹಿ ವ್ಯವಸ್ಥೆಯ ಹಾಗೂ ಊಳಿಗಮಾನ್ಯ ವ್ಯವಸ್ಥೆಯ ಕ್ರೌರ್ಯಗಳನ್ನು, ಭಾವನೆಗಳನ್ನು, ವಿಡಂಬನೆಗಳನ್ನು ತಮ್ಮ ಕಥನದಲ್ಲಿ ಕುವೆಂಪು ಅವರು ವ್ಯಂಗ್ಯಕ್ಕೆ ಗುರಿಪಡಿಸುವ ರೀತಿ ವಿಶಿಷ್ಟವಾದುದು.

ಈ ಶತಮಾನದ ಮೊದಲ ಘಟ್ಟ ಭಾರತದ ಚರಿತ್ರೆಯಲ್ಲಿ ಅತ್ಯಂತ ಮಹತ್ವವಾದುದು. ಪಾಶ್ಚಾತ್ಯರ ಆಗಮನ, ಅದರ ಸಂಸ್ಕೃತಿಯ ಸಂಪರ್ಕ ಹಾಗೂ ಪ್ರೇರಣೆಗಳಿಂದ ಹೊಸ ಬದುಕೊಂದು ಆ ಕಾಲಮಾನದಲ್ಲಿ ಕಾಣಿಸಿಕೊಂಡಿತು. ಪಾಶ್ಚಾತ್ಯರ ಶಿಕ್ಷಣ ಪದ್ಧತಿ ಭಾರತದಲ್ಲಿ ಎದುರಾಗಿಸುವ ಕ್ರಾಂತಿ ಪಾರಂಪರಿಕ ಮೌಲ್ಯಗಳನ್ನು ಅದರ ಪೊಳ್ಳುಗಳನ್ನು ಮೌಲ್ಯೀಕರಣಕ್ಕೆ ಗುರಿಪಡಿಸಿತು. ಅದರ ಪರಿಣಾಮ ಆ ಕಾಲದ ಸಂವೇದನೆಯಲ್ಲಿ ಹೊಸ ಎಚ್ಚರದ ಬೀಜಗಳು ಸೃಷ್ಟಿಯಾದವು. ಇದರಿಂದಾಗಿ ಪರಂಪರೆಯಲ್ಲಿದ್ದ ಮೌಢ್ಯತೆಗೆ ಎದುರಾಗುವ ಮುಖೇನ ಹೊಸದೊಂದು ಬದುಕಿನ ಅನ್ವೇಷಣೆಗೆ ಅಂದಿನ ಸಂವೇದನೆ ಹೇಗೆ ತೊಡಗಿತ್ತೆಂಬುದಕ್ಕೆ ಕುವೆಂಪುರವರ ಕಾದಂಬರಿಗಳಲ್ಲಿ ಅಪಾರ ಆಧಾರಗಳಿವೆ. ನಮ್ಮ ಸಾಮಾಜಿಕ ಸಮಸ್ಯೆಗಳಾದ ಜಾತಿಪದ್ಧತಿ, ಊಳಿಗಮಾನ್ಯ ಪದ್ಧತಿ, ಸ್ತ್ರೀ ಶೋಷಣೆ, ಜೀತಪದ್ಧತಿ ಮೊದಲಾದ

ಸಾಮಾಜಿಕ ಸಮಸ್ಯೆಗಳನ್ನು ಕುವೆಂಪುರವರ ಕಾದಂಬರಿಗಳು ಹಾಗೂ ಅವರ ಸಣ್ಣ ಕಥೆಗಳು ಚಿಂತಿಸುತ್ತವೆ. ಹಾಗೆಯೇ ಹೊಸದೊಂದು ಆಕ್ರಮಣಶೀಲ ವಸಾಹತುಶಾಹಿ ವ್ಯವಸ್ಥೆಯು ಪ್ರಾದೇಶಿಕ ಸಂಸ್ಕೃತಿಗೆ ಹೇಗೆ ಮಾರಕವಾಗಲು ಹವಣಿಸುತ್ತಿತ್ತು ಎಂಬ ಸಂಗತಿಗಳನ್ನು ಈ ಕೃತಿಗಳಲ್ಲಿ ವಿಶ್ಲೇಷಣೆಗೆ ಗುರಿಮಾಡಲಾಗಿದೆ. ಮಲೆನಾಡಿನ ರೋಗಗ್ರಸ್ಥ ಬದುಕನ್ನು ಅವರ ಕಥಾ ಸಾಹಿತ್ಯ ನಿರಂತರವಾಗಿ ಪ್ರಕಟಪಡಿಸುತ್ತದೆ. ನಮ್ಮ ಸಮಾಜ ವ್ಯವಸ್ಥೆಯಲ್ಲಿಯೇ ಇರುವ ಊಳಿಗಮಾನ್ಯ ಸಂದರ್ಭ ಹಾಗೂ ಕೆಳಸ್ತರದ ಕೂಲಿಕಾರರ ಸಂಬಂಧಗಳು, ಅಂತರ್ ಪ್ರಕ್ರಿಯೆಗಳ ದಟ್ಟ ವಿವರಗಳು ಇವರ ಕೃತಿಗಳಲ್ಲಿವೆ.

ಕುವೆಂಪು ಅವರ ಸೃಷ್ಟಿಶೀಲತೆ ಕನ್ನಡ ಸಂಸ್ಕೃತಿಯಲ್ಲಿ ಉಂಟಾದ ಎಲ್ಲಾ ಸಂಘರ್ಷಗಳನ್ನು ಅಭಿವ್ಯಕ್ತಿಸುತ್ತಾ, ಸಮಗ್ರ ಭಾರತೀಯ ಸಂವೇದನೆಯ ಸೆಲೆಗೆ ತನ್ನ ಚಿಂತನೆಗಳನ್ನು ಸೇರಿಸುವಲ್ಲಿ ಯಶಸ್ವಿಯಾಗಿದೆ. ಸಂಸ್ಕೃತಿಯ ಜೀವಧಾತುಗಳು ಹಾಗೂ ಮತೀಯ ರಾಜಕಾರಣದ ವಿಭಿನ್ನ ಸಂಘರ್ಷಗಳು, ಸೃಜನಶೀಲ ಮನಸ್ಸಿನಲ್ಲಿ ಹೇಗೆ ವಿಶ್ಲೇಷಣೆ ವಿಮರ್ಶೆಗಳಿಗೆ ಗುರಿಯಾಗುತ್ತದೆಂಬುದರ ಮಹತ್ವದ ವ್ಯಾಖ್ಯೆಯನ್ನು ಕುವೆಂಪು ಅವರ ಕೃತಿಗಳಲ್ಲಿ ಕಾಣುತ್ತೇವೆ. ಕಾಲಮಾನದ ವಿವರಗಳು, ಕಾಲಮಾನದ ಆಲೋಚನೆಯ ಆಧ್ಯಾತ್ಮಿಕ ಗತಿತರ್ಕಗಳು ಕ್ರಿಯಾಶೀಲವಾಗಿಸುವುದು ಹಾಗೂ ಇವು ಹೆಗ್ಗಡಿತಿ ಹಾಗೂ ಮದುಮಗಳು ಕಾದಂಬರಿಗಳಲ್ಲಿ ಜೀವಂತಗೊಂಡಿರುವ ಬಗೆ ವಿಶಿಷ್ಟವಾದುದು. ಸಂಸ್ಕೃತಿ ಚರಿತ್ರೆಯ ಶುಷ್ಕಚಲನೆಗಳನ್ನು ಮೀರಿ ಮಾನವಿಕ ಕ್ರಿಯಾಚರಣೆಯ ಕ್ರಿಯೆ, ಸಂಬಂಧಗಳು ಎಂತಹ ವಲಯಗಳನ್ನು ಒಳಗೊಳ್ಳುತ್ತವೆ ಎಂಬುದನ್ನು ಕುವೆಂಪು ಕಥಾಸಾಹಿತ್ಯ ಎಲ್ಲಾ ಮಟ್ಟಗಳಲ್ಲಿಯೂ ಶೋಧಿಸುತ್ತದೆ.

ವಸಾಹತುಶಾಹಿಯ ಕಾರಣದಿಂದ ಉಂಟಾದ ಭೌತಿಕ ಬದಲಾವಣೆಗಳಿಗೂ, ನಮ್ಮ ಕುಟುಂಬ ವ್ಯವಸ್ಥೆಯಲ್ಲಿ ಉಂಟಾದ ಅನೇಕ ಮಟ್ಟದ ಅವಸ್ಥಾಂತರಗಳಿಗೂ ಎಂತಹ ಸಂಬಂಧಗಳು ಇರಬಹುದೆಂಬುದನ್ನು ಕುವೆಂಪು ಅವರ ಕಥಾಸಾಹಿತ್ಯವು ಕೆಲವು ಸೂಕ್ಷ್ಮ ಒಳನೋಟಗಳನ್ನು ಕೊಡುತ್ತವೆ. ಇಡೀ ಸಂಸ್ಕೃತಿಯ ವಿಘಟನೆಯ ರೂಪಕವಾಗಿ ಕೂಡ ಹೆಗ್ಗಡಿತಿ ಕಾದಂಬರಿಯ ಕುಟುಂಬದ ವಿಘಟನೆಯ ರೂಪಗಳು ಅಗಣಿತ ಸ್ವರೂಪದವಾಗಿದ್ದು ಸಮಾಜದ ಕುಟುಂಬದ ವಿಘಟನೆ ಭಾರತದ ಮಟ್ಟದ ಸಾಂಸ್ಕೃತಿಕ ವಿಘಟನೆಗೆ ಒಂದು ಗಟ್ಟಿಯಾದ ಮಾದರಿಯನ್ನೇ ತೋರುವಂತದ್ದಾಗಿದೆ. ಗ್ರಾಮೀಣ ಜೀವನದ ನೆಲೆಯಲ್ಲಿ ವ್ಯಕ್ತಿ ವಿಘಟನೆಯ ಸೆಲೆಗಳನ್ನು ಕಟ್ಟಿಕೊಡುತ್ತಲೇ ವ್ಯಕ್ತಿ ಬದುಕಿ ಬಾಳುವ ಇಡೀ ಪರಿಸರದ ವಿಘಟನೆಯ ಸಂದರ್ಭವನ್ನು ಹೆಗ್ಗಡಿತಿಯಂತಹ ಕಾದಂಬರಿಯಲ್ಲಿ ನಾವು ಕಾಣುತ್ತೇವೆ.

ವಿಮರ್ಶೆ, ವೈಚಾರಿಕ ಕೃತಿಗಳು, ದೇಸಿಯ ಹಾಗೂ ಅನ್ಯದೇಶಿಯ ಸಾಹಿತ್ಯಕ ಹಾಗೂ ತಾತ್ವಿಕ ಪ್ರಭಾವಗಳನ್ನು ಗುರುತಿಸುವ ಜವಾಬ್ದಾರಿಯನ್ನೂ ಈ ಅಧ್ಯಯನ ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ಕುವೆಂಪುರವರ ಕೃತಿಗಳ ಶೈಲಿ, ಓದುಗನನ್ನು ಆಕರ್ಷಿಸುವ ಭಾಷೆ ಮತ್ತು ತಂತ್ರಗಳು ಯಾವ ಬಗೆಯವು ಎಂಬ ಅಧ್ಯಯನವೂ ಬಹುಮುಖ್ಯವಾದುದು. ಕುವೆಂಪು ಅವರ ಕಥನ, ಆತ್ಮಕಥನಗಳಂತೆ, ಸಾಂಸ್ಕೃತಿಕ ದಾಖಲೆಗಳಂತೆ ಕನ್ನಡ ಸಾಂಸ್ಕೃತಿಕ ಬದುಕನ್ನು ತೆರೆದಿಡುವ ಕ್ರಮವು ವಿಶಿಷ್ಟವಾದದ್ದು. ಇಂತಹ ಲೇಖಕರ ಅಧ್ಯಯನ ಕನ್ನಡ ವಿಮರ್ಶಾ ಪರಂಪರೆಯಲ್ಲಿ ಅಲ್ಲಲ್ಲಿ ನಡೆದಿದ್ದರೂ ಅವರ ಕಥನದ ಸಮಗ್ರ ಅಧ್ಯಯನವು ಇನ್ನೂ ಆಳವಾಗಿ ನಡೆಯಬೇಕಾದ ಅವಶ್ಯಕತೆ ಇದೆ. ಈ ನಿಟ್ಟಿನಲ್ಲಿ ಕುವೆಂಪು ಅವರ ಒಟ್ಟು ಕಥನವು ಕಾಣಿಸುವ ಸಾಂಸ್ಕೃತಿಕ ವೈವಿಧ್ಯತೆಯ ಬಗೆಗೆ ಮಾತ್ರ ಪ್ರಸ್ತುತ ಅಧ್ಯಯನ ಕೇಂದ್ರೀಕೃತವಾಗಿದೆ.

❑❑

೨

## ಕನ್ನಡ ಕಥನ ಪರಂಪರೆ : ಒಂದು ನಿರ್ವಚನ

ಭಾರತೀಯ ಸಾಹಿತ್ಯ ಕಥಾ ಮೂಲವಾದುದು. ಕನ್ನಡ ಸಾಹಿತ್ಯವೂ ಇದರಿಂದ ಹೊರತಾದುದಲ್ಲ. ಅಭಿಜಾತ ಸಾಹಿತ್ಯ, ಜನಪದ ಸಾಹಿತ್ಯ, ಶಾಸನ ಸಾಹಿತ್ಯ, ಆಧುನಿಕ ಸಾಹಿತ್ಯ ಇಲ್ಲೆಲ್ಲಾ ಕಥನ ಜೀವನದಿಯಂತೆ ಹರಿಯುತ್ತದೆ. ಪ್ರಾಚೀನ ಸಾಹಿತ್ಯ ಪರಂಪರೆಯಲ್ಲಿ ಕಥೆಯನ್ನು ಹೇಳುವ ಮತ್ತು ಕೇಳುವ ಎರಡು ಪ್ರವೃತ್ತಿಗಳು ಪ್ರಧಾನವಾಗಿದ್ದುದು ಕಂಡುಬರುತ್ತದೆ. ಹಳಗನ್ನಡ ಕಾವ್ಯಗಳು ಯಾವುದೇ ಸ್ವರೂಪದಲ್ಲಾಗಲೀ, ಪ್ರಕಾರದಲ್ಲಾಗಲೀ ಇರಲಿ ಅಲ್ಲೆಲ್ಲಾ ಕಥನ ಪ್ರಧಾನವಾಗಿರುತ್ತದೆ. ಹಳಗನ್ನಡ ಕಾವ್ಯಗಳು ಧಾರ್ಮಿಕ, ರಾಜಕೀಯ, ಲೌಕಿಕ, ಆಗಮಿಕ, ಅಷ್ಟಾದಶ ವರ್ಣನೆಗಳು -ಹೀಗೆ ಯಾವುದೇ ಕಟ್ಟುಕಟ್ಟಳೆಗಳಿಗೆ ಒಳಗಾಗಿದ್ದರೂ ಅವುಗಳು ತಮ್ಮ ಪ್ರಧಾನವಾದ ಕಥೆಯ ನಿರೂಪಣೆಯನ್ನು ಎಂದು ಬಿಟ್ಟುಕೊಡುವುದಿಲ್ಲ. ಪ್ರಾಚೀನ ಕೃತಿಗಳು ಹೆಚ್ಚು ಸಿದ್ಧವಸ್ತುವಿನ ಮಾದರಿಯಲ್ಲಿರುವುದರಿಂದ ಅವು ರಾಜರ ವಂಶಾವಳಿ, ಸಾಹಸ, ಶೌರ್ಯ, ವೀರ, ತ್ಯಾಗ, ಯುದ್ಧವರ್ಣನೆ, ಪಟ್ಟಾಭಿಷೇಕ ಮುಂತಾದ ಸಂಗತಿಗಳನ್ನು ಕಥೆಯ ರೂಪದಲ್ಲಿ ನಿರೂಪಿಸುವಲ್ಲಿ ಪ್ರವೃತ್ತವಾಗಿರುತ್ತವೆ. ಉತ್ಪಾದಿತ ವಸ್ತುಗಳಿಗೆ ಹಳಗನ್ನಡದ ಕವಿಗಳು ಪ್ರಯತ್ನಿಸಿಲ್ಲ ಎಂದು ಹೇಳಲು ಬರುವುದಿಲ್ಲ. ನಮ್ಮ ಅನೇಕ ಕವಿಗಳು ಮಹಾಭಾರತ, ರಾಮಾಯಣದ ವಸ್ತುಗಳನ್ನು ತಮ್ಮ ಧರ್ಮ, ಸಂಪ್ರದಾಯದ ಹಿನ್ನೆಲೆಯಲ್ಲಿ ಪುನರ್ ಸೃಷ್ಟಿಸಿರುವುದುಂಟು. ತಮ್ಮ ಸಮಕಾಲೀನ ಧಾರ್ಮಿಕ, ರಾಜಕೀಯ, ಪ್ರಾಕೃತಿಕ, ಭೌಗೋಳಿಕ ವಿವರಗಳನ್ನು ತಮ್ಮ ತಮ್ಮ ಕೃತಿಯೊಳಗೆ ಮೃದುವಾಗಿ ಮೇಳೈಸಿರುವುದಕ್ಕೆ ಅನೇಕ ಕಾವ್ಯಕೃತಿಗಳು ಸಾಕ್ಷಿಯಾಗಿವೆ.

ಕಥನದ ವೈವಿಧ್ಯಮಯವಾದ ಮಾದರಿಗೆ ಜನಪದ ಕಾವ್ಯಗಳು, ಲಾವಣಿಗಳು, ಕಥೆಗಳು ಸಹಜವಾದ ದಾಖಲೆಗಳಾಗಿವೆ. ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಮುಂತಾದ ಜನಪದ ಕಾವ್ಯಗಳಲ್ಲಿ ಹರಿಯುತ್ತಿರುವ ಕಥನವು ಭಿನ್ನ ಭಿನ್ನ ಮಾದರಿಗಳ ಅಭಿವ್ಯಕ್ತಿಗೆ ಸಾಕ್ಷಿಯಾಗಿದೆ. ಈ ಕಾವ್ಯಗಳಲ್ಲಿ ಬರುವ ವ್ಯಕ್ತಿಗಳ ಸಾಂಸ್ಕೃತಿಕ ವ್ಯಕ್ತಿತ್ವ ಹಾಗೂ ಅವರ ಶೌರ್ಯ, ಸಾಧನೆಗಳನ್ನು ವಿವಿಧ ಲಯಗಾರಿಕೆಯ ಮೂಲಕ ಕಥನದ ರೂಪದಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಈ ಕಾವ್ಯಗಳು ಮೌಖಿಕ ಪರಂಪರೆಯಲ್ಲಿ ಬಾಯಿಂದ ಬಾಯಿಗೆ ಅನಕ್ಷರಸ್ಥ

ಸಮುದಾಯದ ನಡುವೆ ಉಳಿದುಕೊಂಡು ಬಂದಿರುವುದಕ್ಕೆ ಮುಖ್ಯ ಕಾರಣ ಇವುಗಳಲ್ಲಿ ನಿರಂತರವಾಗಿ ಹರಿಯುತ್ತಿರುವ ಕಥನದ ಅಂಶವೇ ಎನ್ನಬಹುದು. ರಾಮಾಯಣವನ್ನು ಲವಕುಶರು ತಮ್ಮ ವಿದ್ಯಾಭ್ಯಾಸದ ಸಂದರ್ಭದಲ್ಲಿ ಬಾಯಿಪಾಠ, ಕಂಠಪಾಠ ಮಾಡುತ್ತಿದ್ದರು ಎಂಬ ಕಥೆಯನ್ನು ಕೇಳಿದ್ದೇವೆ. ಜನಪದ ಕಥೆಗಳಂತು 'ಒಂದೂರಿನಲ್ಲಿ ಒಬ್ಬ ರಾಜನಿದ್ದ...' ಎಂದೇ ಆರಂಭವಾಗುತ್ತವೆ. 'ಲಾವಣಿಗಳು' ಸಹ ಹಾಗೆಯೇ ಒಬ್ಬ ವ್ಯಕ್ತಿಯ ಶೌರ್ಯ, ಸಾಧನೆಯನ್ನು ಕಥನ ರೂಪದಲ್ಲಿ ಬಣ್ಣಿಸುತ್ತಾ ಹೋಗುತ್ತವೆ. ಜನಪದ ಸಾಹಿತ್ಯದಲ್ಲಿ ಕಥೆಯೇ ಸ್ಥಾಯಿಭಾವ.

ಶಾಸನಗಳಲ್ಲಿ ಕಂಡುಬರುವ ಕಥನವನ್ನು ಗಮನಿಸಿದರೆ ಪ್ರತಿಯೊಂದು ಶಾಸನವೂ ಒಂದೊಂದು ಸಣ್ಣಕಥೆ ಇದ್ದ ಹಾಗೆ ಎನ್ನಬಹುದು. ನಮ್ಮ ಹಳಗನ್ನಡದಲ್ಲಿರುವ ಶಾಸನಗಳನ್ನು ಆಧುನಿಕ ಕನ್ನಡಕ್ಕೆ ಸೃಜನಾತ್ಮಕವಾಗಿ ಭಾಷಾಂತರಿಸಿದರೆ ಅವುಗಳಲ್ಲಿರುವ ಕಥನದ ವೈಶಿಷ್ಟ್ಯವು ಅರ್ಥವಾಗುತ್ತದೆ. ಶಾಸನಗಳಲ್ಲಿ ಹಲವಾರು ಸಾಮಾನ್ಯವಾದ ಅಂಶಗಳಿರುತ್ತವೆ. ಅಂದರೆ ಶಾಸನ ಹಾಕಿದವರು, ರಾಜರ ವಂಶಾವಳಿ, ಸಾಧನೆ, ಅದರ ಉದ್ದೇಶ, ದಾನ ಧರ್ಮ ಮಾಡಿದ ವಿಚಾರಗಳು, ತ್ಯಾಗ ಬಲಿದಾನಗಳ ವಿಚಾರಗಳು -ಹೀಗೆ ಅವುಗಳ ವಸ್ತು ವೈವಿಧ್ಯತೆಯಿಂದ ಕೂಡಿರುತ್ತದೆ. ಈ ಎಲ್ಲಾ ವಿವರಗಳನ್ನು ಶಾಸನದಲ್ಲಿ ಅಡಕವಾಗಿ, ಸೂಕ್ಷ್ಮವಾಗಿ, ಸೌಂದರ್ಯಪೂರ್ಣವಾಗಿ ಹೇಳಲಾಗಿರುತ್ತದೆ. ಒಂದು ಕಿರುಗತೆಯ ರೂಪದಲ್ಲಿ ಅದರ ಬಂಧ, ವಿನ್ಯಾಸವನ್ನು ಶಿಲ್ಪಿ ಅಥವಾ ಬರೆಯುವನು ರೂಪಿಸಿರುವುದನ್ನು ಕಾಣಬಹುದು. ಯಾವುದೇ ಸಂಸ್ಕೃತಿಯ ಅಧ್ಯಯನಕ್ಕೆ ಕಾವ್ಯ, ಶಾಸನ, ಜಾನಪದ ಇವು ಪ್ರಮುಖ ಆಕರಗಳು. ಭಾರತೀಯ ಪರಂಪರೆಯು ಇವುಗಳನ್ನು ಎಲ್ಲಾ ಕಾಲದಲ್ಲೂ ಪರಿಸರಕ್ಕನುಗುಣವಾಗಿ ಉಳಿಸಿಕೊಂಡು ಬಂದಿದೆ. ಇವುಗಳಲ್ಲಿ ಸದಾ ಕಾಲದಲ್ಲೂ ಉಳಿದುಕೊಂಡು ಬಂದಿರುವ ಕಥನದ ಅಂಶದಲ್ಲಿ ಒಂದು ಸಾತತ್ಯವಿದೆ.

ಕನ್ನಡ ಸಾಹಿತ್ಯಕ್ಕೆ ಸುದೀರ್ಘವಾದ ಇತಿಹಾಸವಿದೆ. ಈ ಸುದೀರ್ಘವಾದ ಇತಿಹಾಸದಲ್ಲಿ ಕನ್ನಡ ಸಾಹಿತ್ಯವು ಹಲವಾರು ಸ್ಥಿತ್ಯಂತರಗಳನ್ನು ಕಂಡಿದೆ. ಇದು ಜೈನ ಕವಿಗಳಿಂದ ಆರಂಭವಾಗಿ ಮುಂದೆ ಹಲವಾರು ಲೇಖಕರ ಸೃಷ್ಟಿಗೆ ಕಾರಣವಾಗಿದೆ. ವಸ್ತು, ಭಾಷೆ, ಸ್ವರೂಪ, ರೀತಿ, ಶೈಲಿಗಳಲ್ಲಿ ವೈವಿಧ್ಯತೆಯನ್ನು ಪಡೆದುಕೊಂಡಿದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿದ್ದ ಪ್ರಕಾರಗಳು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಲವಾರು ಹೊಸ ರೂಪಗಳನ್ನು ಪಡೆದುಕೊಂಡಿದೆ. ಹೊಸ ಪರಿಭಾಷೆ, ಮೀಮಾಂಸೆ, ವಿಮರ್ಶೆ, ಪರಿಕಲ್ಪನೆ, ಹೊಸ ಚಿಂತನಾ ಪ್ರಸ್ಥಾನಗಳು ಹುಟ್ಟಿಕೊಂಡಿವೆ. ಕನ್ನಡ ಸಾಹಿತ್ಯದಲ್ಲಿ ಬಹು ಹಿಂದಿನಿಂದಲೂ ಕಥನ (Naration) ಪ್ರಕ್ರಿಯೆಯು ಒಂದು ಬಹುಮುಖ್ಯ ತಂತ್ರವಾಗಿ ಮತ್ತು ಜ್ಞಾನದ ಉತ್ಪಾದನೆ ಮುಂದುವರಿಕೆಯಾಗಿ ಕೆಲಸ ಮಾಡಿದೆ. ಕೀರ್ತಿನಾಥ ಕುರ್ತುಕೋಟಿ ಅವರು ಕಥೆಯ ಪ್ರಾಚೀನತೆಯ ಬಗ್ಗೆ ಹೀಗೆ ವಿವರಿಸುತ್ತಾರೆ :

"ನಡೆದು ಹೋದ ಒಂದು ಸಂಗತಿಯನ್ನು ಕಥೆಯಾಗಿ ಹೇಳುವ ವ್ಯಾಪಾರ ಮನುಷ್ಯನ ನೆನಪಿನಷ್ಟೇ ಪ್ರಾಚೀನವಾದದ್ದೆಂದು ತೋರುತ್ತದೆ. ನೆನಪು ಗತ ಕಾಲದ ಸಂಗತಿಗಳನ್ನು ಕುರಿತು ಮೆಲುಕು ಹಾಕುತ್ತಲೇ ಇರುತ್ತದೆ. ನೆನಪಿನಲ್ಲಿ ಸಂಗ್ರಹವಾದದ್ದನ್ನು ಅದನ್ನು ಕಾಣದ ಹೊಸಬರಿಗೆ ಹೇಳುವುದೇ ಕಥೆ. ಕಥೆ ಒಂದು ಸಾಹಿತ್ಯ ಪ್ರಕಾರವಾಗುವುದಕ್ಕಿಂತ ಮುಂಚೆ ಕೂಡ ಕಥೆಗಳಿದ್ದವು. ಅದಕ್ಕೆ ಮುಖ್ಯವಾಗಿರುವುದು ಹೇಳುವುದು ಮತ್ತು ಹೇಳಿದ್ದನ್ನು ಕಿವಿಯಿಂದ ಕೇಳುವುದು. ಇದು ಅವ್ಯಾಹತವಾಗಿ ನಡೆದು ಬಂದು ಕಥೆಯ ಸ್ಮೃತಿಸಂಚಯ ರೂಪುಗೊಂಡಿರಬೇಕು.

ಈ ಸ್ಮೃತಿಸಂಚಯ ಒಂದು ಜನಾಂಗದ ಎಲ್ಲರಿಗೂ ಸುಲಭವಾಗಿ ದೊರಕಬಹುದಾದ ನಿಧಿಯಾದ ಮೇಲೆ ಕಥೆಗೆ ಒಂದು ಸಾಹಿತ್ಯಿಕ ಸ್ವರೂಪ ಪ್ರಾಪ್ತವಾಯಿತು. ನೆಲ, ನೀರು, ಗಾಳಿ ಮತ್ತು ಆಕಾಶಗಳಿಂದ ಕೂಡಿಕೊಂಡ ಪ್ರಕೃತಿ ಮನುಷ್ಯನ ಬಾಳಿಗೆ ಎಷ್ಟು ಅವಶ್ಯಕವೋ ಕಥೆಗಳ ಸಾಂಸ್ಕೃತಿಕ ಅವಶ್ಯಕತೆಯೂ ತೀವ್ರವಾಗಿ ಹುಟ್ಟಿದಂದಿನಿಂದ ಅಸಂಖ್ಯಾತ ಕಥೆಗಳು ಹುಟ್ಟಿಕೊಂಡಿವೆ. ಜೀವನದ ಮೌಲ್ಯಗಳ ಜಗತ್ತು ನಿರ್ಮಾಣವಾಗುವುದು ಕಥೆಗಳ ಮೂಲಕವಾಗಿಯೇ"[೧] ಎಂದು ವಿಮರ್ಶಕರಾದ ಕೀರ್ತಿನಾಥ ಕುರ್ತುಕೋಟಿಯವರು ಪಡುವ ಅಭಿಪ್ರಾಯ ಸೂಕ್ತವಾಗಿಯೇ ಇದೆ.

ಯಾವುದೇ ಒಬ್ಬ ಕಥೆಗಾರ ಕಥೆ ಹೇಳಲು ಪ್ರಾರಂಭಿಸಿದರೆ ಆ ಇಡೀ ಜನಾಂಗ ಕಿವಿಯಾಗಿ ಕೇಳುತ್ತದೆ. ಯಾವುದೇ ಒಂದು ಜನಾಂಗಕ್ಕೆ ಕಥೆ ಎಷ್ಟು ಅವಶ್ಯಕವೋ ಅಷ್ಟೇ ಒಂದು ಜನಾಂಗ ಕೂಡ ಮುಖ್ಯವಾಗುತ್ತದೆ. ಜನಾಂಗ ಅಬಂಧವಾಗಿ ಉಳಿದಾಗ ಮಾತ್ರ ಕಥೆ ಹುಟ್ಟುತ್ತದೆ. ಇಂತಹ ಜನಾಂಗದಿಂದ ಹುಟ್ಟುವ ಕಥೆಗಳು ಮೂಲತಃ ಜಾನಪದ ಕಥೆಗಳ ದಾಟಿಯಲ್ಲಿರುತ್ತವೆ. ಮಹಾಭಾರತ, ರಾಮಾಯಣದಂತ ಮಹಾಕಾವ್ಯಗಳು ಕೂಡ ತಮ್ಮ ಮೂಲ ಸ್ವರೂಪದಲ್ಲಿ ಜಾನಪದಗಳೇ ಆಗಿದ್ದವು ಎಂಬ ಅಭಿಪ್ರಾಯವೂ ಇದೆ. ಈ ಅಭಿಪ್ರಾಯ ನಿಜ ಕೂಡ. ರಾಮಾಯಣ, ಮಹಾಭಾರತ ಮತ್ತು ಬೃಹತ್ಕಥೆಗಳೇ ನಮ್ಮ ಸಮಗ್ರ ಸಂಸ್ಕೃತ ಸಾಹಿತ್ಯವನ್ನು ರೂಪಿಸಿವೆ. ಐತಿಹ್ಯಗಳು, ದಂತಕತೆಗಳು ಮನುಷ್ಯ ಜೀವನದಲ್ಲಿಯ ಅಸಾದಾರಣವಾದ ಅಂಶಗಳನ್ನು ಅನನ್ಯಗೊಳಿಸುವುದಕ್ಕಾಗಿಯೇ ಹುಟ್ಟಿಕೊಳ್ಳುತ್ತವೆ. ಬಾಯಿಂದ ಬಾಯಿಗೆ ಹರಿದು ಪ್ರಸಾರಗೊಳ್ಳುವ ಈ ಕಥನವನ್ನು ದಂತಕಥೆ ಎಂದು ಬೇಕಾದರೂ ಕರೆಯಬಹುದು. ಅನೇಕ ಸೃಷ್ಟಿಯ ಪ್ರತಿಭೆಯ ಫಲವಾಗಿ ರಾಮಾಯಣ ಮಹಾಭಾರತಗಳು ಬೆಳೆಯುತ್ತಾ ಹೋಗಿವೆ. ಇತ್ತೀಚಿಗೆ ಇಂಥ ಅನೇಕ ಸೃಷ್ಟಿಗಳ ಫಲವಾಗಿ ರೂಪಿತವಾಗಿರುವ ಮಹಾಭಾರತದ ಪ್ರಕ್ಷಿಪ್ತ ಭಾಗಗಳನ್ನು ತೆಗೆದು ಹಾಕಿ ಶುದ್ಧಗೊಳಿಸಿದ ಕಾವ್ಯವನ್ನು ನಿರ್ಮಿಸುವ ಪ್ರಯತ್ನವೂ ನಡೆದಿದೆ.

ಮಹಾಭಾರತ ಕಥೆಯನ್ನು ವ್ಯಕ್ತಿಯಿಂದ ವ್ಯಕ್ತಿಗೆ ಹೇಳುವ ಪರಂಪರೆ ಕಂಡುಬರುತ್ತದೆ. ಮಹಾಭಾರತದಲ್ಲಿನ ಕಥನ ತಂತ್ರ ಹೀಗೆ ಬರೀ ವ್ಯಕ್ತಿಯಿಂದ ವ್ಯಕ್ತಿಗೆ ಹೇಳುವ ತಂತ್ರಕ್ಕೆ ಮಾತ್ರ ಸೀಮಿತವಾಗಿಲ್ಲ, ಮಹಾಭಾರತವಾಗಲಿ, ರಾಮಾಯಣವಾಗಲಿ ಎರಡು ಸಂಕೀರ್ಣ ಸೃಷ್ಟಿಗಳು. ಇವು ಒಂದು ದೃಷ್ಟಿಯಿಂದ ಕಾವ್ಯವೂ ಹೌದು, ಪುರಾಣವೂ ಹೌದು, ಚರಿತ್ರೆಯೂ ಹೌದು. ಮಹಾಭಾರತ ಕುಟುಂಬಗಳ ಕಥೆ, ಅಣ್ಣ ತಮ್ಮಂದಿರ ದ್ವೇಷ ಇದರ ಮೂಲ ಸಮಸ್ಯೆ. ಈ ಸಮಸ್ಯೆಯ ಸಂದಿಗ್ಧತೆ ತುಂಬಾ ಆಳವಾಗಿದೆ. ಇತಿಹಾಸ, ಕಾವ್ಯ, ಪುರಾಣ ಈ ಮೂರನ್ನೂ ಒಳಗೊಂಡು ಮಹಾಭಾರತ ಆರಂಭವಾಗಿರುವುದರಿಂದ ಇದರ ಕಥನ ತುಂಬಾ ತೊಡಕಿನದಾಗಿದೆ. ಮಹಾಭಾರತ ಮತ್ತು ರಾಮಾಯಣಗಳು ಭಾರತೀಯ ಪರಂಪರೆಯಲ್ಲಿ ಮಹತ್ ಕೃತಿಗಳು. ಇವುಗಳ ಕನಸು ಅಮೋಘವಾದುದು. ಈ ಎರಡು ಕೃತಿಗಳ ಪರಂಪರೆಯಲ್ಲಿ ಹರಿಯುತ್ತಿರುವ ಕಥನದ ಗುಣ ಭಾರತೀಯ ಪರಂಪರೆಯಲ್ಲೇ ವಿಶಿಷ್ಟವಾದುದು.

ಸಂಸ್ಕೃತ ಕಾವ್ಯ ಪರಂಪರೆಯಲ್ಲಿ, ಕಥನ ಕಾವ್ಯಗಳಲ್ಲಿ ಮತ್ತು ನಾಟಕಗಳಲ್ಲಿ ಕಥನವು ವಿಶಿಷ್ಟ ಅರ್ಥಪರಂಪರೆಗಳನ್ನು ಪಡೆದುಕೊಳ್ಳುತ್ತದೆ. ಕನ್ನಡ ಸಾಹಿತ್ಯ ಕೂಡ ಸಂಸ್ಕೃತ ಸಾಹಿತ್ಯ ಪರಂಪರೆಯ ಪ್ರೇರಣೆ ಹಾಗೂ ಪ್ರಭಾವವನ್ನು ಪಡೆದು ತನ್ನ ಪ್ರೌಢತ್ವವನ್ನು ರೂಪಿಸಿಕೊಂಡಿದೆ. ಕನ್ನಡ ಕಥನ ಪರಂಪರೆಗೆ ಸಾವಿರಾರು ವರ್ಷಗಳ ಸುದೀರ್ಘ

ಇತಿಹಾಸವಿದೆ. ಕನ್ನಡದಲ್ಲಿ ಮೊದಲ ಉಪಲಬ್ಧವಾಗಿರುವ ಗ್ರಂಥವೆಂದರೆ ನೃಪತುಂಗನ ಕವಿರಾಜಮಾರ್ಗ. ಇದೊಂದು ಅಲಂಕಾರ ಗ್ರಂಥ. ಇದರ ಕಾಲ ಸುಮಾರು ೯ ನೇ ಶತಮಾನ. ಆದರೆ ೫ ನೇ ಶತಮಾನದಿಂದಲೇ ಕನ್ನಡ ಶಾಸನಗಳು ದೊರೆಯುತ್ತವೆ. ಈ ಶಾಸನಗಳಲ್ಲಿ ರಾಜರುಗಳು ಕೊಟ್ಟ ದಾನ ದತ್ತಿಗಳ ಮತ್ತು ಅವರ ವಂಶಾವಳಿಗಳ ಕಥನದ ಬೆಳವಣಿಗೆ ಸಿಗುತ್ತದೆ. ಕನ್ನಡದ ಮೊದಲ 'ಹಲ್ಮಿಡಿ' ಶಾಸನದಲ್ಲಿ ಕನ್ನಡ ಭಾಷೆಯ ಬೆಳವಣಿಗೆಯನ್ನು ಗುರುತಿಸಬಹುದು.

ಕವಿರಾಜಮಾರ್ಗಕಾರ ಹೇಳುವ ಹಾಗೆ ಅವನ ಕಾಲದಲ್ಲಿ ಕಾವ್ಯ ಪ್ರಯೋಗ ಪರಿಣಿತ ಮತಿಗಳು ಇದ್ದರು. ಇವರಿಗೆ ಬರೆಯುವುದಕ್ಕೆ ಬದಲಾಗಿ ಮಾತನಾಡುವುದು ಮತ್ತು ಕೇಳುವುದು ಮುಖ್ಯ ಸಂಗತಿಯಾಗಿತ್ತು. ಇಂತಹ ಮೌಖಿಕ ಸಂಪ್ರದಾಯಕ್ಕೆ ಕವಿ ಮತ್ತು ಕಣ್ಣು ಬಹಳ ಮುಖ್ಯವಾದ ಆಕರಗಳು. ಪುರಾತನ ವೈದಿಕ ಸಂಪ್ರದಾಯಗಳಲ್ಲಿ ಕೂಡ ಕೇಳುವುದು, ನೋಡುವುದು ಮುಖ್ಯವೇ ಹೊರತು ಬರೆಯುವುದಲ್ಲ. ಈ ಕಾರಣದಿಂದಾಗಿಯೇ ವೇದಗಳಿಗೆ ಶೃತಿ ಎಂಬ ಪರ್ಯಾಯವಾದ ಹೆಸರಿದೆ. ಮುಂದೆ ಶೃತಿಯ ಹಂತವನ್ನು ಮೀರಿ ಕಥನವು ಬರವಣಿಗೆಯ ಸ್ವರೂಪವನ್ನು ಪಡೆದುಕೊಂಡಿತು. ಈ ಕಥನವು ಬರವಣಿಗೆಯ ಹಂತಕ್ಕೆ ಬಂದ ಕೂಡಲೇ ಸಾರ್ವಜನಿಕರ ವಸ್ತುವಾಯಿತು. ಮಾತಿನ ಅರ್ಥ ಅಥವಾ ಶೃತಿಯ ಅರ್ಥ ಮರೆಯಾಗಿ ಬರಹದ ಅರ್ಥ ಪ್ರಧಾನವಾಗಿ ಈ ಕಥನದಲ್ಲಿ ಅದು ನಿರ್ದಿಷ್ಟವಾಗುತ್ತಾ ಹೋಯಿತು.

ಸಂಸ್ಕೃತ ಸಾಹಿತ್ಯದ ಅಭಿಜಾತ ಪರಂಪರೆಯಿಂದ ಹರಿದುಬಂದ ಈ ಕಥನ, ಕನ್ನಡ ಕಾವ್ಯ ಪರಂಪರೆಯಲ್ಲಿ ಹಾಸು ಹೊಕ್ಕಾಗಿ ಮುಂದುವರಿದಿದೆ. ಕ್ರಿ.ಶ. ೯೨೦ ರಲ್ಲಿ ರಚಿತವಾದ 'ವಡ್ಡಾರಾಧನೆ' ಕೃತಿಯಲ್ಲಿ ಕಥನ ಪರಂಪರೆಯ ಬೆಳವಣಿಗೆಯನ್ನು ಸ್ಪಷ್ಟವಾಗಿ ಕಾಣಬಹುದು. ಈ ಕೃತಿಯು ಪಂಪಪೂರ್ವ ಯುಗದ ಅಪೂರ್ವ ಗ್ರಂಥ. ಈ ಯುಗದಲ್ಲಿ ಕನ್ನಡ ಸಾಹಿತ್ಯ ಸೃಷ್ಟಿ ಜೈನ ಮತೀಯ ಹಿನ್ನೆಲೆಯಿಂದ ರೂಪುಗೊಂಡಿರುವುದಕ್ಕೆ ಅನೇಕ ಸಾಕ್ಷಿಗಳಿವೆ. ಈ ಕಾರಣದಿಂದ ವಡ್ಡಾರಾಧನೆ ಒಂದು ಮಹತ್ವದ ಮೈಲಿಗಲ್ಲು. ಜೈನ ಧರ್ಮದ ಹಿನ್ನೆಲೆಯಲ್ಲಿ, ಆ ಸಂದರ್ಭದಲ್ಲಿ ಕನ್ನಡದಲ್ಲಿ ನಡೆದ ಸಾಹಿತ್ಯ ಸಾಧನೆಯ ಸಾಕ್ಷ್ಯ ಗ್ರಂಥ ಇದು. ಈ ಕೃತಿಯಲ್ಲಿ ೧೯ ಮಹಾಪುರುಷರ ಕಥೆಗಳಿವೆ. ಕಥೆಯ ಮಾಧ್ಯಮ ಗದ್ಯದ ಸ್ವರೂಪದಲ್ಲಿದೆ. ಪ್ರತಿಯೊಂದು ಕಥೆಯ ಮುಖ್ಯ ಉದ್ದೇಶ ಧರ್ಮದ ಆಚರಣೆ ಮತ್ತು ಉಪದೇಶ. ಈ ಕಥೆಗಳಲ್ಲಿ ಬರುವ ನಾಯಕರೆಲ್ಲರೂ ಆಸನ್ನಭವ್ಯರು. ಅವುಗಳಿಗೆ ಪೂರಕವಾಗಿ ಮೋಕ್ಷ ಸಾಧನೆಗಾಗಿ ಉಳಿದ ಪಾತ್ರಗಳು ಬರುತ್ತವೆ. ಈ ಕಥೆಗಳು ನಮ್ಮ ಅತ್ಯಂತ ಪ್ರಾಚೀನ ಕಲೆಯಾದ ಕಥೆಗಾರಿಕೆಗೆ ಸಾಕ್ಷಿಯಾಗಿವೆ. ಪ್ರಧಾನ ಕಥೆಗಳ ಜೊತೆಗೆ ಅನೇಕ ಉಪಕಥೆಗಳು ಬರುತ್ತವೆ. ಈ ಉಪಕಥೆಗಳು ಬಹಳ ಪ್ರಾಚೀನವಾದವುಗಳು ಎಂಬುದರಲ್ಲಿ ಸಂದೇಹವಿಲ್ಲ. ಕೆಲವು ಕಥೆಗಳಂತು 'ಬೃಹತ್ಕಥೆ'ಯಲ್ಲಿ ಬರುವ ಕಥೆಗಳನ್ನು ಹೋಲುತ್ತವೆ. ಇಲ್ಲಿನ ಕೆಲವು ಕಥೆಗಳಲ್ಲಿ ಮತಾಂತರದ ರಾಜಕಾರಣ ಕೆಲಸ ಮಾಡುತ್ತದೆ. 'ಪುಣ್ಯಕ್ಕೆ ತಕ್ಕ ಫಲ ಪಾಪಕ್ಕೆ ತಕ್ಕ ಶಿಕ್ಷೆ' ಎಂಬ ತತ್ವಗಳನ್ನು ಈ ಕಥೆಗಳು ಪ್ರತಿಪಾದಿಸುತ್ತವೆ. ಇಲ್ಲಿಯ ಬಹುಪಾಲು ಕಥೆಗಳು ಸಮಕಾಲೀನ ಸಮಾಜದ ಸಮಸ್ಯೆ, ಉದ್ದೇಶಕ್ಕೆ ಅನುಗುಣವಾಗಿ ರೂಪಾಂತರಗೊಂಡು ಪುನರುಕ್ತವಾಗಿವೆ.

ಪ್ರಾಚೀನ ಪರಂಪರೆಯಲ್ಲಿ ಬ್ರಾಹ್ಮಣನಾಗಿದ್ದ ಚಾಣಕ್ಯ, ಬದಲಾದ ಸಾಮಾಜಿಕ ಸಂದರ್ಭದಲ್ಲಿ ಜೈನಮುನಿಯಾಗಿ ಬದಲಾಗುತ್ತಾನೆ. ವಡ್ಡಾರಾಧನೆಯ ತಾತ್ವಿಕ ಹಿನ್ನೆಲೆಯನ್ನು ಡಿ. ವಿಜಯ ಅವರು ವಿಶ್ಲೇಷಿಸುತ್ತಾ ಹೀಗೆ ಹೇಳಿದ್ದಾರೆ: "ಇಲ್ಲಿಯ ಒಂದೊಂದು ಕಥೆಯೂ ಒಂದೊಂದು ಲೌಕಿಕ ಸಂಗತಿಯ ಉತ್ಕರ್ಷದ ಪರಮಾವಧಿಯನ್ನು ತೋರಿ ಆನಂತರ ಆ ಬಗ್ಗೆ ಭ್ರಮನಿರಸನವನ್ನುಂಟು ಮಾಡುತ್ತದೆ. ಇಲ್ಲಿಯ ಎಲ್ಲ ಕಥೆಗಳು ಒಂದೇ ತೆರನಾದ ಸಾಹಿತ್ಯಿಕ ಪರಿಣಾಮವನ್ನುಂಟು ಮಾಡುವುದಿಲ್ಲ. ಭವಾವಳಿಗಳಿಲ್ಲದ ಅಥವಾ ಸಂನ್ಯಸನಪೂರ್ವದ ಜೀವನದ ಕಥೆ ಇಲ್ಲದ ಕಡೆ ಕಥೆ ರಕ್ತಮಾಂಸಗಳಿಲ್ಲದ ಅಸ್ಥಿಪಂಜರದಂತಾಗುತ್ತದೆ; ಸಾಹಿತ್ಯಕ ಸ್ವಾರಸ್ಯ ಕಡಿಮೆಯಾಗಿ ಧಾರ್ಮಿಕ ಚೌಕಟ್ಟಷ್ಟೇ ಉಳಿಯುತ್ತದೆ."[೨] ಎಂದು ವಿಜಯ ಅವರು ಪಡುವ ಅಭಿಪ್ರಾಯವು ಸಮಂಜಸವಾಗಿದೆ.

ಪ್ರಾಚೀನ ಕಾಲದಿಂದ ಧರ್ಮ ಮತ್ತು ಸಾಹಿತ್ಯದ ಸಂಬಂಧ ಗಾಢವಾದದ್ದು. ಯಾವುದೇ ಸಾಹಿತ್ಯ ತತ್ಕಾಲೀನ ಸಮಾಜದ ಪ್ರಭುತ್ವ ಹಾಗೂ ಧರ್ಮಕ್ಕೆ ಅನುಗುಣವಾಗಿ ಬದಲಾಗುತ್ತಾ ಬಂದಿದೆ. ೧೦ ನೇ ಶತಮಾನದ ಜೈನಕಥಾ ಸಾಹಿತ್ಯ ಕೂಡ ಇದಕ್ಕೆ ಹೊರತಾದುದಲ್ಲ. ಪಂಪನ ಪೂರ್ವಯುಗದ ಜೈನಧರ್ಮದ ತಾತ್ವಿಕ ಬುನಾದಿಗಳಿಗೆ ಅಭಿವ್ಯಕ್ತವಾದ ವಡ್ಡಾರಾಧನೆಯ ಕಥೆಗಳಲ್ಲಿಯೂ ಕೂಡ ಜೈನಧರ್ಮದ ಅಳಿವು ಉಳಿವಿನ ಪ್ರಶ್ನೆ ಚರ್ಚಿತವಾಗಿದೆ.

ಕನ್ನಡ 'ವಡ್ಡಾರಾಧನೆ' ಕಥೆಗಳಲ್ಲಿ 'ಸುಕುಮಾರ ಸ್ವಾಮಿಯ ಕಥೆ'ಯಿಂದ ಪ್ರಾರಂಭವಾಗಿ 'ವೃಷಭಸೇನ' ಕಥೆ ಮುಗಿಯುವ ತನಕ ಪ್ರತಿಯೊಂದು ಕಥೆಯೂ ಒಂದು ಕಿರುಕಥಾಕೋಶದಂತಿದೆ. ಹಂಪ ನಾಗರಾಜಯ್ಯನವರು ಹೇಳುವಂತೆ, "ವಡ್ಡಾರಾಧನೆ ಜೈನ ಕಥಾಗುಚ್ಛ. ಈ ಗೊಂಚಲಿನಲ್ಲಿ ನೀತಿಬೋಧಕವೂ, ಜ್ಞಾನಬೋಧಕವೂ ಆದ ೧೯ ಧಾರ್ಮಿಕ ಕಥೆಗಳಿವೆ. ಓದುಗರ ಶೀಲಸಂವರ್ಧನೆಯನ್ನು ನೀತಿಸಮ್ಮತವಾದ ರೀತಿಯಲ್ಲಿ ರೂಪಿಸಲು ಸಹಾಯಕವಾಗಬಲ್ಲ ಇಂಥ ಕಥೆಗಳು ಕನ್ನಡದಲ್ಲಿ ಅಪೂರ್ವ. ಕನ್ನಡ ಕಥಾಪ್ರಪಂಚದಲ್ಲಿ ಇಂದಿಗೂ ಹೊಸವಸ್ತು, ಹೊಸತಂತ್ರ, ಸರಳವಾದರೂ ಕೂತೂಹಲಕಾರಿಯಾದ ಓಟವುಳ್ಳ ಕಥೆಗಳು ಇಲ್ಲಿವೆ. ವಿಚಾರದ ತೀಕ್ಷ್ಣತೆಗೆ ಇಲ್ಲಿ ಕೊರತೆಯಿಲ್ಲ. ಕೆಲವು ಕಥೆಗಳನ್ನು ಓದುತ್ತಾ ಅಂತಃಕರಣವು ಆರ್ದ್ರಗೊಳ್ಳುತ್ತದೆ, ಕೆಲವೊಮ್ಮೆ ತಳಮಳಿಸುತ್ತದೆ, ವಿಸ್ಮಯಗೊಳ್ಳುತ್ತದೆ. ವಾಸ್ತವವಾಗಿ ಇಂಥ ಕಲೆಯೇ ಯಶಸ್ವಿಯಾದ ಕಲೆ. ಇದರ ಕಥೆಗಾರನಾದರೋ ಕಥಾವಸ್ತುವನ್ನು ಮೆಟ್ಟಿಲು ಮೆಟ್ಟಿಲಾಗಿ ಕ್ರಮೇಣ ಅರಳಿಸುತ್ತಾ ರಸಸಿದ್ಧಿಯ ತುತ್ತತುದಿಯನ್ನು ಮುಟ್ಟಿ, ಶಾಂತರಸದ ಮೇಲೆ ಜೀನಧರ್ಮದ ಅಹಿಂಸಾ ಪತಾಕೆಯನ್ನು ಹಾರಿಸಿದ್ದಾನೆ. ಯಾವ ಕಥೆಯಲ್ಲೂ ಬೇಸರವನ್ನುಂಟುಮಾಡದೆ ಎಲ್ಲ ಕಥೆಗಳಲ್ಲೂ ಅದೇ ಪ್ರಮಾಣದ ಆಸಕ್ತಿ ಹಾಗೂ ಲವಲವಿಕೆಯನ್ನು ಕಾಪಾಡಿಕೊಂಡು ಬಂದಿದ್ದಾನೆ."[೩]

'ಚಂಪೂ' ಕಾವ್ಯವನ್ನು ಬರೆದ ಜೈನ ಕವಿಗಳ ಕಥನ ಪರಂಪರೆ ಬಹಳ ದೀರ್ಘವಾದುದು. ರಾಮಾಯಣ, ಮಹಾಭಾರತದಿಂದ ವಸ್ತುವನ್ನು ಸ್ವೀಕರಿಸಿ ಜೈನ ಕವಿಗಳು ಕನ್ನಡದ ಕಥನ ಪರಂಪರೆಯನ್ನು ಅದಕ್ಕೆ ಜೋಡಿಸಿ ವಿಸ್ತರಿಸಿದ್ದಾರೆ. ಜೈನ ಕವಿಗಳ ಮೇಲೆ ಸಂಸ್ಕೃತ ಪರಂಪರೆಯ ಹಿರಿಯ ಕವಿಗಳಾದ ಬಾಣ ಮತ್ತು ಕಾಳಿದಾಸರ ಪ್ರಭಾವ ದಟ್ಟವಾಗಿಯೇ ಹಾಗಿದೆ. ಪಂಪ, ಕಾಳಿದಾಸನ ಎಷ್ಟೋ ಪದ್ಯಗಳಿಗೆ ಋಣಿಯಾಗಿದ್ದಾನೆ. ಜೈನ ಕವಿಗಳ ಕನ್ನಡದ ಗದ್ಯ ಪದ್ಯ ಮಿಶ್ರಿತವಾದ ಚಂಪೂ ಕಾವ್ಯಕ್ಕೆ ಬಾಣ, ಕಾಳಿದಾಸರು ಪ್ರೇರಕವಾಗಿದ್ದಾರೆ. ಕನ್ನಡ ಕಥನ ಪರಂಪರೆಯ ಮುಖ್ಯ ಗುಣವೆಂದರೆ, ಅದರ ನಿರಂತರತೆ. ಈ ನಿರಂತರವಾದ ತತ್ವವನ್ನು ವಿರೋಧಿಸುವಂತಿಲ್ಲ. ತಂದೆ, ಮಗ,

ಮೊಮ್ಮಗ ಹೀಗೆ ವಂಶಾವಳಿಯಲ್ಲಿ ಜೀವನದ ಅನೇಕ ಅವಸ್ಥೆಯಲ್ಲಿ ಈ ಸಾತತ್ಯದ ತತ್ವ ನಿಯಮಬದ್ಧವಾಗಿದೆ. ಇದು ಕಥೆಯ ತಿರುಳಾಗಿದೆ. ರಾಮಾಯಣ, ಮಹಾಭಾರತಗಳಲ್ಲಿ ಈ ಸಾತತ್ಯವು ಕ್ರಮಭಂಗವಾದಾಗ ಅದನ್ನು ಸರಿಪಡಿಸಲು ಉಪಾಯಗಳು ಕಂಡುಬರುತ್ತವೆ. ಈ ಕ್ರಮಭಂಗವನ್ನು ಕನ್ನಡದ ಕವಿ 'ಪಂಪ' ತನ್ನ ಭಾರತ ಕಥೆಯಲ್ಲಿ ನಿರ್ವಹಿಸಿದ್ದಾನೆ. ಸಮಸ್ತ ಭಾರತವನ್ನು ಅಪೂರ್ವವಾಗಿ ಹೇಳುವ ಉದ್ದೇಶ ಅವನದಾಗಿದೆ. ಹಳೆಯ ಕಥೆ ತುಂಬಾ ದೊಡ್ಡದು. ಅದನ್ನು ಕೆಡಿಸದ ರೀತಿಯಲ್ಲಿ ನಿರ್ವಹಿಸುವ ಜವಾಬ್ದಾರಿ ಪಂಪನದ್ದಾಗಿದೆ. ಪಂಪನ ಹಿಂದೆ ಮೊದಲೇ ಹೇಳಿದ ಹಾಗೆ ಸಂಸ್ಕೃತದ ಕಾವ್ಯ ಪರಂಪರೆಯೂ ಇತ್ತು, ಜೈನ ಪುರಾಣಗಳೂ ಇದ್ದವು. ಅವುಗಳಿಂದ ಪಂಪ ತನ್ನ ಕಾವ್ಯದ ಕಥೆಗಳನ್ನು ಸ್ವೀಕರಿಸಿದ್ದಾನೆ. ಅದರ ಜೊತೆಗೆ ತನ್ನ ಸಮಕಾಲೀನ ಇತಿಹಾಸವನ್ನು ಸೇರಿಸಿದ್ದಾನೆ. ಜೀನಸೇನಾಚಾರ್ಯರ 'ಆದಿಪುರಾಣ', ವ್ಯಾಸನ 'ಮಹಾಭಾರತ' ಈ ಎರಡು ಬೃಹತ್ ಕಥನ ಕಾವ್ಯಗಳು ಹಿಂದೆ ನಡೆದ ಸಂಗತಿಗಳನ್ನು ಒಂದು ಕ್ರಮದಲ್ಲಿ ಹೊಂದಿಸಿ ಕಥೆ ಮಾಡಿ ನಿರೂಪಿಸಿದ ಕೃತಿಗಳು. ಆದರೆ ಪಂಪ ತನ್ನ ತಿಳುವಳಿಕೆ ಮತ್ತು ಅರಿವಿನ ವಿಸ್ತಾರದಿಂದಾಗಿ ಈ ಸತತ ಕಥೆಯ ಕ್ರಮವನ್ನು ಮೀರಿ ತನ್ನದೇ ಆದ ಒಂದು ಕಥನ ಪರಂಪರೆಯನ್ನು ಸೃಷ್ಟಿಸುತ್ತಾನೆ. ಹಾಗೂ ಮಾರ್ಗ ಮತ್ತು ದೇಸಿಯ ಒಡಂಬಡಿಕೆಯಿಂದ ಕನ್ನಡ ಕಥನ ಪರಂಪರೆಗೆ ಪಂಪನು ಹಲವು ಕಾಣಿಕೆಗಳನ್ನು ನೀಡಿದ್ದಾನೆ.

ಪ್ರಾಚೀನ ಕವಿಗಳು ಕಥೆಗಳನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡಿರುವುದು ಕಂಡುಬರುತ್ತದೆ. ತಾವು ಹೇಳಬೇಕಾದುದ್ದನ್ನೆಲ್ಲ ಕಥೆಗಳ ಮೂಲಕವೇ ಹೇಳಿದ್ದಾರೆ. ಕಥೆಯ ಮಾಧ್ಯಮಕ್ಕೆ ಯಾವ ಧರ್ಮದ ಹಂಗೂ ಇರಲಿಲ್ಲ. ವೈದಿಕಗಳನ್ನು ಜೈನರು, ಜೈನರ ಕಥೆಗಳನ್ನು ಬೌದ್ಧರು ಬಳಸಿಕೊಂಡಿರುವುದು ಇದಕ್ಕೆ ಸ್ಪಷ್ಟ ಉದಾಹರಣೆಯಾಗಿದೆ. ಜೈನ ಬೌದ್ಧ ಧರ್ಮಗಳ ರಾಮಾಯಣ ಮಹಾಭಾರತಗಳು ಹುಟ್ಟಿಕೊಂಡಿವೆ. ಕಥೆಯೆಂದರೆ ಅವರಿಗೆ ಒಂದು ದರ್ಶನ ಮಾತ್ರವಲ್ಲ ಅದೊಂದು ಜೀವನದ ನೀತಿ ಎಂಬ ತಿಳುವಳಿಕೆ ಇದೆ. ಯಾವುದೇ ಜನಾಂಗವಾಗಲಿ ಕಥೆಗಳಿಲ್ಲದೆ ಜೀವಿಸಲಾರದು. ಪ್ರಾಚೀನ ಕಾಲದಲ್ಲಿ ಕಥೆಗಳನ್ನು ಸೃಷ್ಟಿಸುವ ಒಂದು ಉದ್ದಿಮೆಯೇ ಇತ್ತೆಂದು ತಿಳಿದು ಬರುತ್ತದೆ. ಬೌದ್ಧ ಜಾತಕ ಕಥೆಗಳು, ಶೈವ ಸಂಪ್ರದಾಯ ಕಥೆಗಳು, ದಶರಥನ ಜಾತಕ ಕಥೆಗಳು -ಹೀಗೆ ಕಥನ ಪರಂಪರೆಗೆ ಒಂದು ದೀರ್ಘ ಇತಿಹಾಸವೇ ಇದೆ. ಆ ಕಾಲದ ಸಾಂಸ್ಕೃತಿಕ, ರಾಜಕೀಯ, ಇತಿಹಾಸವನ್ನು ತಿಳಿಯಬೇಕಾದರೆ ಕಥೆಗಳು ಪ್ರಮುಖ ಆಕರ.

ನಾಗವರ್ಮನ 'ಕಾದಂಬರಿ', ದುರ್ಗಸಿಂಹನ 'ಪಂಚತಂತ್ರ' ಮತ್ತು ನಯಸೇನನ 'ಧರ್ಮಾಮೃತ' ದಂತ ಕಥೆಗಳು ಕನ್ನಡ ಕಥನ ಪರಂಪರೆಗೆ ಮಹತ್ವದ ಕೃತಿಗಳಾಗಿವೆ. ಕಥೆಗಾರಿಕೆಯ ಬೇರೆ ಬೇರೆ ಮಗ್ಗುಲುಗಳನ್ನು ಈ ಗ್ರಂಥಗಳು ಹಿಡಿದಿಟ್ಟಿವೆ. ಕಥನವೆಂದರೆ ಅದೊಂದು ಸಂವಹನ ಕ್ರಿಯೆ, ಕಥೆ ಹೇಳುವವನು ತನ್ನ ಕೇಳುಗ ತಿಳಿದುಕೊಳ್ಳಲೆಂದೇ ಕಥೆಯನ್ನು ಹೇಳುತ್ತಾನೆ. ಅದರಲ್ಲಿಯೂ ವಿಶೇಷವಾಗಿ ನಾಗವರ್ಮನು ತನ್ನ ಕಾದಂಬರಿಯಲ್ಲಿ ಕಾಳಿದಾಸ ಬಾಣರನ್ನು ವಿಶೇಷವಾಗಿ ಅನುಸರಿಸಿದ್ದಾನೆ. ನಾಗವರ್ಮನ ಕಾದಂಬರಿ ಜೈನಕಾವ್ಯ ಪರಂಪರೆಯಲ್ಲಿ ಒಂದು ಮಹತ್ವದ ವಸ್ತುವನ್ನು ಪುನರ್ ಸೃಷ್ಟಿಸಿದ ಕೃತಿ. ಈ ಪುನರ್ ಸೃಷ್ಟಿಯ ವಸ್ತುವೆಂದರೆ 'ಕಾಮ'. ಧರ್ಮಕ್ಕೆ ವಿರುದ್ಧವಾದ ಕಾಮದ ಶಕ್ತಿಯನ್ನು ತಿಳಿದುಕೊಳ್ಳಲು ಜೈನ ಕವಿಗಳು ಅಪಾರ ಶೃಂಗಾರದ ಕಥೆಗಳನ್ನು ಹೇಳಿದ್ದಾರೆ. ಕಾಮದ ಶಕ್ತಿಯು ಅನೇಕ ಜೈನ

ಕವಿಗಳನ್ನು ಆಕರ್ಷಿಸಿದೆ. ಅಷ್ಟೇ ಅಲ್ಲದೆ ಕಾಮವು ಒಂದು ಪ್ರಮುಖ ವಸ್ತುವಾಗಿ ಜೈನ ಕವಿಗಳನ್ನು ಕಾಡಿದೆ. ಬಾಣನ ಕಾದಂಬರಿಯ ಕಥನ ಆರಂಭದಿಂದ ಅಂತ್ಯದವರೆಗೂ ಕಾಮದ ಕಥೆಯಾಗಿದೆ. ಕಾಮಮಾಧ್ಯಮದ ಮೂಲಕ ಬದುಕಿನ ಅರ್ಥಪೂರ್ಣತೆಯನ್ನು ಕಂಡುಕೊಳ್ಳಲು ಜೈನ ಕವಿಗಳು ಹೆಣಗಾಡುವುದು ಸಹಜ. ಅಲ್ಲದೆ ಜೈನ ಕವಿಗಳು ಧಾರ್ಮಿಕವಾದ ಅರ್ಥದ ಜೊತೆಗೆ ಜನ್ಮಾಂತರದ ಅರ್ಥವನ್ನು ಹುಡುಕುವುದೂ ಕಂಡುಬರುತ್ತದೆ. ಜೈನ ಕಾವ್ಯ ಪರಂಪರೆಯ ಸಂದರ್ಭದಲ್ಲಿ ಧರ್ಮ ಮತ್ತು ಕಾವ್ಯಧರ್ಮದ ಸತ್ಯವನ್ನು ಹುಡುಕುವುದು ಜೈನ ಕಾವ್ಯಗಳ ಕಥನದಲ್ಲಿ ಪ್ರಧಾನ ಅಂಶವಾಗಿದೆ. ವಿಮರ್ಶಕರಾದ ಕೀರ್ತಿನಾಥ ಕುರ್ತುಕೋಟಿ ಅವರು ಹೇಳುವ ಹಾಗೆ, "ಬಾಣನ ಕಾದಂಬರಿಯ ಕನ್ನಡ ಅನುವಾದಕ್ಕೆ ಒಂದು ಐತಿಹಾಸಿಕ ಮಹತ್ವವಿದೆ. ಮೂಲದಲ್ಲಿ ಬಾಣನ ಕಾದಂಬರಿ ಸಂಸ್ಕೃತ ಗದ್ಯದಲ್ಲಿ ಅಭಿವ್ಯಕ್ತವಾಗಿದೆ. ಅವನ ಗದ್ಯ ವಿಶೇಷವಾದ ಅರ್ಥವಂತಿಕೆಯನ್ನು ಹೊಂದಿದೆ. ಆಧುನಿಕ ಅರ್ಥದಲ್ಲಿ ಅದು ಗದ್ಯವೇ ಅಲ್ಲ. ಅವನ ಗದ್ಯಕ್ಕಿರುವುದು ಕಾವ್ಯಾರ್ಥ. ಸಂಸ್ಕೃತದ ಈ ಕೃತಿಯನ್ನು ಕನ್ನಡಕ್ಕೆ ತಂದ ನಾಗವರ್ಮ ಪದ್ಯಸ್ವರೂಪಕ್ಕೆ ತಂದಿದ್ದಾನೆ. ಅದೂ ಪ್ರೌಢಕಾವ್ಯ ಸ್ವರೂಪದಲ್ಲಿ ನಾಗವರ್ಮ ಅನುವಾದ ಮಾಡುವಾಗ ಮೂಲಕೃತಿಯನ್ನು ಅದರ ವಿವರಗಳಲ್ಲಿ ಅನುಸರಿಸಿದ್ದಾನೆ. ಕನ್ನಡದಲ್ಲಿ ಚಂಪೂ ಕವಿಗಳು ಸಂಸ್ಕೃತದ ಅಭಿಜಾತ ಮಾರ್ಗದ ತಿಳುವಳಿಕೆಯನ್ನು ಕನ್ನಡದಲ್ಲಿ ಸೃಷ್ಟಿಸಲು ಪ್ರಯತ್ನ ಮಾಡಿದವರು. ಅವರು ಹೊಸದಾಗಿ ಶಾಸ್ತ್ರಗ್ರಂಥಗಳಲ್ಲೂ ಸಹ ಈ ಕೆಲಸವನ್ನು ಮಾಡಬಹುದಾಗಿತ್ತು. ಅದರ ಬದಲಾಗಿ ಅವರು ಹಳೆಯ ಅಭಿಜಾತ ಕಾವ್ಯಕೃತಿಗಳನ್ನು ಮತ್ತೊಮ್ಮೆ ಬರೆದರು. ನಮ್ಮ ಹಳೆಯ ಕಾವ್ಯಕ್ಕೆ ಶಾಸ್ತ್ರಜ್ಞಾನ ವರ್ಜ್ಯವಾಗಿರಲಿಲ್ಲ. ಜೈನ ಆಗಮಿಕ ಕಾವ್ಯಗಳಲ್ಲಿ ಈ ಶಾಸ್ತ್ರಜ್ಞಾನ ಬೇಕಾದಷ್ಟಿದೆ. ಆಗ ಈಗಿನಂತೆ ಮನುಷ್ಯಶಾಸ್ತ್ರಗಳು ಕಾವ್ಯದಿಂದ ಬೇರ್ಪಟ್ಟಿರಲಿಲ್ಲ. ಹಳೆಯ ಕೃತಿಗಳ ಪುನರ್ಲೇಖನ ಅನಿವಾರ್ಯವಾಯಿತು."

ಕನ್ನಡ ಕಥನ ಪರಂಪರೆಯು ಹೆಚ್ಚು ಪರಿಪೂರ್ಣತೆಯನ್ನು ಪಡೆದುದ್ದನ್ನು 'ಪಂಚತಂತ್ರ' ಕೃತಿಯಲ್ಲಿ ಕಾಣಬಹುದು. ಪಂಚತಂತ್ರದ ಪ್ರಭೇದಗಳು ಎರಡು ರೀತಿಯಲ್ಲಿ ಕಂಡುಬರುತ್ತವೆ. ಉತ್ತರಭಾರತ ಮತ್ತು ವಾಯುವ್ಯ ಭಾಗಗಳಲ್ಲಿ ವಿಷ್ಣುಶರ್ಮನ ಸಂಪ್ರದಾಯದ ಕಥನ ಪ್ರಚಲಿತವಾಗಿದೆ. ಹಾಗೆಯೇ ವಸುಭಾಗಭಟ್ಟನ ಪಂಚತಂತ್ರದ ಕಥನ ದಕ್ಷಿಣಭಾರತ ಮತ್ತು ಪೂರ್ವದೇಶಗಳಲ್ಲಿ ಪ್ರಚಾರದಲ್ಲಿದೆ. ಪಂಚತಂತ್ರ ಕಥನದ ಪರ್ಯಟನದ ಬಗ್ಗೆ ಸಾಕಷ್ಟು ಸಂಶೋದನೆ ನಡೆದಿದೆ. ಆದರೆ ೧೧ ನೇ ಶತಮಾನದ ಆರಂಭದಲ್ಲಿ ರಚಿತವಾದ ದುರ್ಗಸಿಂಹನ ಕನ್ನಡ ಪಂಚತಂತ್ರದ ಅಧ್ಯಯನ ವಿಶಿಷ್ಟವಾದುದ್ದಾಗಿದೆ. ದುರ್ಗಸಿಂಹನು ವಸುಭಾಗಭಟ್ಟನ ಸಂಸ್ಕೃತ ಪಂಚತಂತ್ರವನ್ನು ಗಮನಿಸಿರಬೇಕು. ಏಕೆಂದರೆ ಪಂಚತಂತ್ರದ ಕಥೆಗಳೆಲ್ಲ ಪ್ರಾಚೀನವಾದವುಗಳಾದರೂ ಅವು ಕಾಲ ದೇಶಗಳ ಸಂದರ್ಭದಲ್ಲಿ ಮಾರ್ಪಡಿಸಿಕೊಂಡು ನಾವೀನ್ಯತೆಯನ್ನು ಪಡೆದಿವೆ. ಪಂಚತಂತ್ರದಲ್ಲಿ ಐದು ತಂತ್ರಗಳ ಮೂಲಕ ರಾಜರ ಮಕ್ಕಳಿಗೆ ವಿದ್ಯಾಭ್ಯಾಸ ಕಲಿಸುವುದನ್ನು ನೋಡುಬಹುದು. ಮನುಷ್ಯನ ಬದುಕನ್ನು, ಆತನ ಆಗುಹೋಗುಗಳನ್ನು ಪ್ರಾಣಿ, ಎತ್ತು, ಎಮ್ಮೆ ಮುಂತಾದ ರೂಪಗಳ ಮೂಲಕ ಸಮೀಕರಿಸಿ ಕಥೆಯನ್ನು ಕಟ್ಟುವ ಕ್ರಮ ವಿಶಿಷ್ಟವಾಗಿದೆ. ಇಲ್ಲಿ ಎಲ್ಲ ಕಥೆಗಳು ಒಂದಲ್ಲ ಒಂದು ರೀತಿಯಲ್ಲಿ ನೀತಿಯನ್ನು ಪ್ರತಿಪಾದಿಸುತ್ತವೆ. ಆದರೆ ಆ ನೀತಿ ನಿಶ್ಚಿತವಾದುದಲ್ಲ. ಇಲ್ಲಿಯ ಬಹುತೇಕ ಕಥೆಗಳು ಪ್ರಾಣಿ ಕಥೆಗಳಾದರೂ ಅವುಗಳಲ್ಲಿ ಕೆಲವು ಮನುಷ್ಯರ ಕಥೆಗಳು ಬರುತ್ತವೆ. ಪ್ರಾಣಿಗಳ ಕಥೆಗಳು ಕೂಡ

ಮನುಷ್ಯರ ಕಥೆಗಳೇ ಆಗಿವೆ. ರಾಜನೀತಿ ಸೂತ್ರಗಳನ್ನು ಇಲ್ಲಿಯೂ ಬಹುಪಾಲು ಕಥೆಗಳು ಪ್ರತಿಪಾದಿಸುತ್ತವೆ. ಪ್ರಕೃತಿ ಮತ್ತು ನಾಗರೀಕತೆಗೆ ಇವುಗಳ ನಡುವಿನ ಅನಿವಾರ್ಯವಾದ ಹೊಂದಾಣಿಕೆಯನ್ನು, ಸಂಘರ್ಷವನ್ನು ಇಲ್ಲಿನ ಕಥೆಗಳು ವಿವರಿಸುತ್ತವೆ. ದುರ್ಗಸಿಂಹನ ಈ ಕೃತಿಯ ವಿಶೇಷವೆಂದರೆ ಕಥನ ಮತ್ತು ವರ್ಣನೆಗಳು ಭಿನ್ನ ಶೈಲಿಗಳಲ್ಲಿ ವರ್ಣಿತವಾಗಿರುವುದು. ಕನ್ನಡ ಕಥನ ಪರಂಪರೆಗೆ ಪಂಚತಂತ್ರ ಕೃತಿಯ ಕಥನದ ವೈವಿಧ್ಯತೆ ಒಂದು ಮಹತ್ವದ ಸೇರ್ಪಡೆಯಾಗಿದೆ.

ನಯಸೇನ, ಅವನ ಹಿಂದಿನ ಜೈನ ಕಾವ್ಯಗಳಂತೆ ತೀರ್ಥಕರರ ಚರಿತ್ರೆಯೂ ಅಲ್ಲ ಅಥವಾ ಅದೊಂದು ಜೈನ ಪುರಾಣವೂ ಅಲ್ಲ ಎಂಬ ತಿಳುವಳಿಕೆಯನ್ನು ಇಟ್ಟುಕೊಂಡು, ತನ್ನ ಕೃತಿಯಲ್ಲಿ ಕಥೆಗಳ ಸಂದರ್ಭವನ್ನು ವಿಶೇಷವಾಗಿ ನಿರ್ವಹಿಸಿದ್ದಾನೆ. ಪಂಪನ ಆದಿಪುರಾಣಕ್ಕೆ ಮೊದಲ ತೀರ್ಥಂಕರನಾದ ವೃಷಭಸೇನನ ಚರಿತ್ರೆಯೇ ವಸ್ತುವಾದರೆ, ಆದರೆ ನಯಸೇನ ತನ್ನ 'ಧರ್ಮಾಮೃತ' ಕೃತಿಗೆ ಕೊನೆಗೆ ತೀರ್ಥಂಕರ ವರ್ಧಮಾನನ ಚರಿತ್ರೆಯನ್ನು ವಸ್ತುವಾಗಿ ತೆಗೆದುಕೊಂಡಿದ್ದರೂ, ಧರ್ಮಪರೀಕ್ಷೆಯ ಸಂದರ್ಭದಲ್ಲಿ ಗೌತಮ ಗಣಧರರು ಹದಿನಾಲ್ಕು ಕಥೆಗಳನ್ನು ಹೇಳುವುದರ ಮೂಲಕ ಕಥನದಲ್ಲಿ ವೈವಿಧ್ಯತೆಯನ್ನು ಸೃಷ್ಟಿಸಿದ್ದಾರೆ. ಆ ತೀರ್ಥಂಕರರ ಚರಿತ್ರೆಯೂ ಕೂಡ ಧರ್ಮನಿರ್ಮಾಣದ ಒಂದು ಅಂಗವಾಗಿತ್ತು. ಅನೇಕ ಉಪಮಾನ, ಉಪಮೆಗಳ ಮೂಲಕ ನಯಸೇನನು ಕಥನ ಪರಂಪರೆಗೆ ಒಂದು ವೈವಿಧ್ಯತೆಯನ್ನು ತಂದುಕೊಟ್ಟಿದ್ದಾನೆ. ಧರ್ಮಾಮೃತದಲ್ಲಿ ಬರುವ ಒಟ್ಟು ಹದಿನಾಲ್ಕು ಕಥೆಗಳಲ್ಲಿಯೂ ಬೇರೆ ಬೇರೆ ಕಥನತಂತ್ರಗಳನ್ನು ಬಳಸಿರುವುದು ಕಂಡುಬರುತ್ತದೆ.

'ಬೃಹತ್ಕಥಾಕೋಶ', 'ಕಥಾಸರಿತ್ಸಾಗರ', 'ನೋಂಪಿಯ ಕಥೆ'ಗಳಲ್ಲಿ ಹರಿಯುವ ಕಥನ ಪರಂಪರೆ ವಿಶಿಷ್ಟವಾದುದು. ನೋಂಪಿಯ ಆಚರಣೆ ಧರ್ಮಗಳ ಒಂದು ಅಂಗವಾಗಿದೆ. ಅದರ ಉದ್ದೇಶ ಫಲಪ್ರಾಪ್ತಿ. ಕಥೆಗಳಿಲ್ಲದ ವ್ರತಗಳು ಇಲ್ಲವೆಂದೇ ಹೇಳಬಹುದು. ಪ್ರಾಚೀನ ಕಾಲದಲ್ಲಿ ಯಾವುದೋ ದೇವತೆ ಯಾವ ರಾಜನಿಗೋ ಅಥವಾ ಮಂತ್ರಿಗೋ ಕಥೆಗಳನ್ನು ಹೇಳಿದಂತೆ ಇವುಗಳ ರಚನೆಯಿದೆ. ಕಥೆಗೂ ವ್ರತಕ್ಕೂ ಒಂದು ಅಭಿನ್ನವಾದ ಸಂಬಂಧವಿದೆ. ವ್ರತಾಚರಣೆಯ ಮುಖ್ಯ ಉದ್ದೇಶ ಉಪವಾಸ. ಈ ವ್ರತಗಳನ್ನು ಬಣ್ಣಿಸುವ ಕಥನ ಅನುಪಮವಾದ ಕಾವ್ಯ ಶೈಲಿಯಿಂದ ಕೂಡಿರುತ್ತದೆ. ಕನ್ನಡ ಕಥನ ಪರಂಪರೆಗೆ ಜನ್ನ 'ಯಶೋಧರ ಚರಿತ್ರೆ'ಯ ಮೂಲಕ ಅಮೃತಮತಿಯ ಕಥೆಯನ್ನು ಸಮರ್ಪಿಸಿದ್ದಾನೆ. ಅಮೃತಮತಿ ಮತ್ತು ಅಷ್ಟಾವಂಕರ ಪ್ರಣಯ ಕಥೆಯನ್ನು ಜನ್ನ ಕವಿಯು ಜೈನಧರ್ಮದ ಇಳಿಗಾಲದ ಸಂದರ್ಭದಲ್ಲಿ ಚಿತ್ರಿಸುತ್ತಾ ಜೈನಧರ್ಮಕ್ಕೆ ಮತ್ತೆ ಜೀವಂತಿಕೆಯನ್ನು ತಂದುಕೊಡಲು ಯತ್ನಿಸುತ್ತಾನೆ.

ಮುಂದೆ ಹರಿಹರನಲ್ಲಿ ಕನ್ನಡ ಕಥನ ಪರಂಪರೆಯು ವೈವಿಧ್ಯತೆಯಲ್ಲಿ ಪ್ರಕಟವಾಗುವುದನ್ನು ಕಾಣಬಹುದು. ಅವನ 'ರಗಳೆಗಳು' ಮತ್ತು ಚಂಪೂ ಪ್ರಕಾರದ 'ಗಿರಿಜಾ ಕಲ್ಯಾಣ'ದಲ್ಲಿ, ಕಥೆಯು ಅನೇಕ ಅರ್ಥಪರಂಪರೆಗಳನ್ನು ಸೃಷ್ಟಿಸುತ್ತದೆ. ಹರಿಹರನ ಪ್ರತಿಯೊಂದು ರಗಳೆಯೂ ಒಬ್ಬೊಬ್ಬ ಶಿವಶರಣರ ಕಥೆಗಳನ್ನು ಹೇಳುತ್ತವೆ. ಹರಿಹರನ ಕಥನಕ್ಕೆ ಎಲ್ಲೆ ಇಲ್ಲ. ಅವನ 'ಗಿರಿಜಾ ಕಲ್ಯಾಣ'ದಲ್ಲಿ ಬರುವ ಕಾಮದಹದ ವರ್ಣನೆ, ಪಾರ್ವತಿಯ ಸತ್ವಪರೀಕ್ಷೆ ಮೊದಲಾದ ಮಹತ್ವದ ಕಥನದ ಭಾಗಗಳು ಹಂಪೆಯ ಹೇಮಕೂಟದಲ್ಲೇ ನಡೆದಂತೆ ಚಿತ್ರಿತವಾಗಿವೆ. ಹರಿಹರನ ಕಥಾನಾಯಕರೆಲ್ಲಾ ಕಥೆಯನ್ನು ಹುಟ್ಟು ಹಾಕಲು ಭೂಲೋಕಕ್ಕೆ ಕೈಲಾಸದಿಂದಲೇ ಬಂದವರು; ಆ ನಾಯಕರನ್ನು

ಬಿಟ್ಟಿರಲಾರದೆ ಶಿವ ಅವರ ಹಿಂದೆಯೇ ಭೂಲೋಕಕ್ಕೆ ಬರುತ್ತಾನೆ. ಹರಿಹರನ ರಗಳೆಗಳಲ್ಲಿ ಶಿವ ಮತ್ತು ಶಿವಶರಣರ ಸಂಬಂಧವನ್ನು ಕುರಿತ ಕಥನ ಎಳೆ ಎಳೆಯಾಗಿ ಬರುತ್ತದೆ. ಕಾಮ ಭಕ್ತಿಯಾಗಿ ರೂಪಾಂತರವನ್ನು ಪಡೆಯುತ್ತದೆ. ಹರಿಹರನ ರಗಳೆಗಳಲ್ಲಿ ಬರುವ ನಂಬಿಯಣ್ಣ, ಅಲ್ಲಮ ಪ್ರಭುದೇವ ಇವರು ಕಾಮದ ತನ್ಮಯತೆಯಲ್ಲಿ ಭಕ್ತಿಯನ್ನು ಅನುಭವಿಸುತ್ತಾರೆ. ಹರಿಹರನು ತನ್ನ ರಗಳೆಯನ್ನು ಕಥನ ಕಾವ್ಯದ ಒಂದು ಉತ್ತಮ ಮಾಧ್ಯಮವನ್ನಾಗಿ ಸೃಷ್ಟಿಸಿದ್ದಾನೆ. ಅವನ ರಗಳೆಗಳಲ್ಲಿ ಆತ ಗದ್ಯದ ಏಕತಾನತೆಯನ್ನು ಒಡೆದುಹಾಕಿ ವೈವಿಧ್ಯತೆಯನ್ನು ಹುಟ್ಟು ಹಾಕುತ್ತಾನೆ.

ಹರಿಹರನ ರಗಳೆಗಳು ಕಥನ ಪರಂಪರೆಯಲ್ಲಿ ಸಾಧಿಸಿದ ಯಶಸ್ಸು ಬಹಳ ದೊಡ್ಡದು. ಹರಿಹರನ ಸಮಕಾಲೀನ ಕವಿಯಾದ ರಾಘವಾಂಕ ತನ್ನ 'ಹರಿಶ್ಚಂದ್ರ ಕಾವ್ಯ'ದಲ್ಲಿ ಷಟ್ಪದಿಯ ಪ್ರಕಾರದಲ್ಲಿ ಅಮೋಘವಾದ ಕಥನ ಪರಂಪರೆಯನ್ನು ಸೃಷ್ಟಿಸಿದ್ದಾನೆ. ಈತ ಹರಿಹರನ ಸೋದರಳಿಯ ಹಾಗೂ ಅವನಿಂದ ವಿದ್ಯೆ ಕಲಿತವನು. ಈತ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಹೊಲತಿಯರ ವರ್ಣನೆಯ ಭಾಗದಲ್ಲಿ ತನ್ನ ಕಥನದ ವೈಶಿಷ್ಟ್ಯವನ್ನು ಮೆರೆದಿದ್ದಾನೆ. ಆತನ ಹರಿಶ್ಚಂದ್ರ ಕಾವ್ಯ ಒಂದು ವಿಶಿಷ್ಟವಾದ ಕಥನ ಕಾವ್ಯವೆಂಬುದರಲ್ಲಿ ಯಾವ ಸಂಶಯವು ಇಲ್ಲ. ಆ ಕಾವ್ಯದಲ್ಲಿ ಕಥನ ಮತ್ತು ವರ್ಣನೆಗಳು ಸಮ ಪ್ರಮಾಣದಲ್ಲಿ ಹೊಂದಿಕೊಂಡು ಕಾವ್ಯವನ್ನು ಒಂದು ಅದ್ಭುತ ಸೃಷ್ಟಿಯನ್ನಾಗಿಸಿ ನಿರ್ಮಿಸಿದ್ದಲ್ಲದೆ ತನ್ನ ಕಾವ್ಯದಲ್ಲಿ ಅಸ್ಪೃಶ್ಯತೆಯ ಸಮಸ್ಯೆಯನ್ನು ಅನೇಕ ಪ್ರತಿಮೆಗಳ ಮೂಲಕ ಕಾಣಿಸಿಕೊಳ್ಳುವಂತೆ ನಿರೂಪಿಸಿದ್ದಾನೆ. ಅಸ್ಪೃಶ್ಯತೆಯ ಚರಿತ್ರೆಯಲ್ಲಿ ಒಂದು ಅವಸ್ಥಾಂತರವನ್ನು ಈ ಪ್ರತಿಮೆಗಳು ಹೇಳುತ್ತವೆ.

ವಿಜಯನಗರದ ಇಮ್ಮಡಿ ದೇವರಾಯನ ಕಾಲದಲ್ಲಿಯ ನೂರೊಂದು ವಿರಕ್ತರಲ್ಲಿ ಚಾಮರಸನೂ ಒಬ್ಬ. ವಿಜಯನಗರ ಸಾಮ್ರಾಜ್ಯದ ಆಶ್ರಯದಲ್ಲಿ ವೀರಶೈವ ಧರ್ಮ ಉನ್ನತ ಸ್ಥಾನದಲ್ಲಿತ್ತು. ಇದನ್ನು ಚಾಮರಸನು ತನ್ನ ಕಾವ್ಯದಲ್ಲಿ ಸಮರ್ಥವಾಗಿ ವಿವರಿಸಿದ್ದಾನೆ. ಅವನ 'ಪ್ರಭುಲಿಂಗಲೀಲೆ'ಯ ಕಾವ್ಯದ ವಸ್ತು ಅಲ್ಲಮ ಪ್ರಭುವಿನ ಜೀವನ ಚರಿತ್ರೆಯನ್ನು ಕುರಿತದ್ದು. ಹರಿಹರನ 'ಪ್ರಭುದೇವರ ರಗಳೆ'ಗೂ ಚಾಮರಸನ ಈ ಕೃತಿಗೂ ಗಹನವಾದ ವ್ಯತ್ಯಾಸವಿದೆ. ಹರಿಹರನ ಅಲ್ಲಮ ಕಾಮಲತೆಯ ವಿರಹದಲ್ಲಿ ಬೆಂದು ಸತ್ತು ಬದುಕಿದವನು. ಚಾಮರಸನ ಅಲ್ಲಮ ಹುಟ್ಟಿನಿಂದಲೇ ಯೋಗಿ. ಆತ ಶಿವನ ಸಾತ್ವಿಕಾಂಶದ ಮಾನುಷಾವತಾರ. ಹೀಗಾಗಿ ಹರಿಹರನದು ಮಾನುಷ ಚರಿತ್ರೆಯಾದರೆ, ಚಾಮರಸನದು ತಾತ್ವಿಕ ಚಿಂತನೆ. ಅಲ್ಲಮ ಮತ್ತು ಮಾಯೆ ಇವರ ಬೆಸುಗೆಯನ್ನು ಬಿಡಿಸಿದವರು ಚಾಮರಸ. ಅಲ್ಲಮ ಮತ್ತು ಮಾಯೆಯರ ಸಂಬಂಧದಲ್ಲಿ ಹೆಣ್ಣುಗಂಡುಗಳ ಸಂಬಂಧದ ಪ್ರಶ್ನೆಯಿದೆ. ವಚನಕಾರ ದೇವರ ದಾಸಿಮಯ್ಯ ಹೇಳಿದಂತೆ "ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ" ಎಂಬ ಸತ್ಯವನ್ನು ಈ ಕಾವ್ಯ ಹೇಳುತ್ತದೆ. ಅಲ್ಲಮ ಮತ್ತು ಮಾಯೆಯರ ಸೋಲು ಗೆಲುವು ಪರಸ್ಪರವಾದುದು. ಅಲ್ಲಮನ ಕಾವ್ಯದಲ್ಲಿ ಬರುವ ಮಾಯಾದೇವಿಯ ನಾಟ್ಯ ಪಂಪನ ಆದಿಪುರಾಣದಲ್ಲಿ ಬರುವ ನೀಲಾಂಜನೆಯ ನಾಟ್ಯದ ನೆನಪನ್ನು ತರುತ್ತದೆ. ಚಾರಿತ್ರಿಕವಾಗಿ ಈ ಕೃತಿಯನ್ನು ಬರೆದ ಚಾಮರಸ ವೀರಶೈವ ಧರ್ಮದ ಮಹತ್ವವನ್ನು ಈ ಕಾವ್ಯದಲ್ಲಿ ಸಾರಿದ್ದಾನೆ.

೧೨ ನೆಯ ಶತಮಾನದ ವಚನಕಾರರ ಜೀವನ ಸಾಧನೆಗಳು ಕಥನ ಪರಂಪರೆಗೆ ಸಾಕ್ಷಿಯಾಗಿವೆ. ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ ಮುಂತಾದ ವಚನಕಾರರ ಜೀವನ ಚರಿತ್ರೆಗಳನ್ನು ಅವರ ವಚನಗಳ ಮೂಲಕ ಮತ್ತು ಬೇರೆ ಕವಿಗಳು ಸೃಷ್ಟಿಸಿದ ಕಾವ್ಯಗಳ ಮೂಲಕ ಅರಿಯಬಹುದಾಗಿದೆ. ಆದರೆ ವಚನಗಳು ಕಥೆಗಳನ್ನು ಹೇಳುವುದಿಲ್ಲ

ಬದಲಾಗಿ ಅವು ಒಂದು ಧರ್ಮವನ್ನು ಕಟ್ಟಿ ಬೆಳೆಸಲು ಉಪಯುಕ್ತವಾದ ಮಾಧ್ಯಮಗಳು. ಹಾಗಾಗಿ ಅವುಗಳಲ್ಲಿ ಪಾರಿಭಾಷಿಕ ಶಬ್ದಗಳು ಮತ್ತು ಪ್ರತೀಕಗಳು ಹೆಚ್ಚಾಗಿ ಬರುತ್ತವೆ. ನಂತರ ಕೀರ್ತನಕಾರರು ಕೂಡ ಭಕ್ತಿಯ ಪರಂಪರೆಯನ್ನು ಕಥನಗಳಲ್ಲಿ ಕಟ್ಟಿಹಾಕಿದ್ದಾರೆ. ಅನಂತರ ಭಾಗವತ ಪರಂಪರೆಯನ್ನು ತನ್ನ ಕಾವ್ಯಗಳ ಕಥನವನ್ನಾಗಿ ಮಾರ್ಪಡಿಸಿ ಕಾವ್ಯವನ್ನು ರೂಪಿಸಿದ ಕೀರ್ತಿ ಕುಮಾರವ್ಯಾಸನಿಗೆ ಸಲ್ಲುತ್ತದೆ. ಕುಮಾರವ್ಯಾಸನು ಮಹಾಭಾರತ ಕಥೆಯನ್ನು ತನ್ನ ಉದ್ದೇಶಕ್ಕನುಗುಣವಾಗಿ ಮಾರ್ಪಡಿಸಿಕೊಂಡಿದ್ದಾನೆ. ಮಹಾಭಾರತದ ಕೃಷ್ಣನ ವ್ಯಕ್ತಿತ್ವವನ್ನು ತನ್ನ ಕಾವ್ಯದ ಕೇಂದ್ರದಲ್ಲಿ ಇಟ್ಟುಕೊಂಡು ತನ್ನ ಕಾವ್ಯದ ಕಥನವನ್ನು ಬೆಳೆಸುತ್ತಾ ಹೋಗುತ್ತಾನೆ. ಅವನ "ಕರ್ನಾಟಕ ಭಾರತ ಕಥಾ ಮಂಜರಿ" ಕನ್ನಡದ ಅತ್ಯಂತ ದೀರ್ಘವಾದ ಕಥನ ಕಾವ್ಯದಲ್ಲಿ ಒಂದಾಗಿದೆ. ಸಂಸ್ಕೃತ ಭಾರತದ ಪೌರಾಣಿಕ ಕಥನ ಪರಂಪರೆಯನ್ನು ಕನ್ನಡದಲ್ಲಿ ಹೊಸದಾಗಿ ಹೇಳಿದ ಪ್ರಯತ್ನ ಅವನದಾಗಿದೆ. ಈ ಕಾವ್ಯದಲ್ಲಿ ಕೃಷ್ಣನಿಗೆ ಹೆಚ್ಚಿನ ಪ್ರಾಶಸ್ತ್ಯ ದೊರಕಿದೆ. ಕುಮಾರವ್ಯಾಸನು ತನ್ನ ಗದುಗಿನ ಭಾರತವನ್ನು 'ಶ್ರೀ ಕೃಷ್ಣ ಕಥೆ'ಯೆಂದೇ ಕರೆಯುತ್ತಾನೆ.

ನಮ್ಮ ಹಳೆಯ ಕಾವ್ಯ, ಕೃತಿಗಳಲ್ಲಿ ತುಂಬಾ ಲೋಕಪ್ರಿಯವಾದುದ್ದೆಂದರೆ ಲಕ್ಷ್ಮೀಶನ 'ಜೈಮಿನಿಭಾರತ'. ಹರಿಹರ, ಕುಮಾರವ್ಯಾಸರ ಸರಳತೆ ಮತ್ತು ನಿರರ್ಗಳತೆ ಈ ಕಾವ್ಯದಲ್ಲಿ ಇಲ್ಲದಿದ್ದರೂ ಈ ಕಾವ್ಯವನ್ನು ಓದಿದಾಗ ಹೊರಡುವ ತಿಳುವಳಿಕೆ ಅಗಾಧವಾದುದು. ಲಕ್ಷ್ಮೀಶನ ಈ ಜೈಮಿನಿ ಭಾರತ ಪಾಂಡವರ ಅಶ್ವಮೇಧಯಾಗದ ಸಾಹಸವನ್ನು ಕಥೆಮಾಡಿ ಹೇಳುತ್ತದೆ. ಅಶ್ವಮೇಧಯಾಗ ಒಂದು ವರ್ಷದವರೆಗೆ ನಡೆಯುವ ಒಂದು ಯಜ್ಞದ ವಿಧಿ. ಈ ಕಾವ್ಯ ಒಂದು ದೃಷ್ಟಿಯಿಂದ ವೀರಗಾಥೆ. ಪಾಂಡವರನ್ನು ಎದುರಿಸಿದ ವೀರರೆಲ್ಲ ಜೀವನದ ಹಂಗು ತೊರೆದು ಕಾದಾಡುತ್ತಾರೆ. ಈ ಹೋರಾಟದಲ್ಲಿ ಅನೇಕ ರಾಜರುಗಳಿಗೆ ಸೋಲಾಗಿ ಪಾಂಡವರು ಜಯಶೀಲರಾಗುತ್ತಾರೆ. ಆ ಜಯಶೀಲತೆಯ ಹಿಂದೆ ಕೃಷ್ಣನ ಆಶೀರ್ವಾದವಿದೆ. ಈ ಕಾವ್ಯದಲ್ಲಿ ಕಥೆಗಳು ಉಪಕಥೆಗಳು ಸರಮಾಲೆಯಾಗಿ ಬರುತ್ತವೆ. ಕರ್ಣ, ಅರ್ಜುನ, ಬಬ್ರುವಾಹನ, ವೃಷಕೇತು ಅವರ ಹೋರಾಟದ ಕಥೆಯೇ ಇಲ್ಲಿ ರೂಪಿತವಾಗಿದೆ. ಅದರಲ್ಲೂ ಈ ಕಾವ್ಯದ ಕಥನದ ತಂತ್ರಗಳು ಸ್ಪಷ್ಟವಾಗುವುದು ಬಬ್ರುವಾಹನನ ಕಥೆಯಲ್ಲಿ. ಬಬ್ರುವಾಹನ ಹುಟ್ಟಿನಿಂದ ಕ್ಷತ್ರಿಯ. ಆತ ಚಿತ್ರಾಂಗದೆಯ ಮಗ. ಮುಂದೆ ಯುದ್ಧದ ಸಂದರ್ಭದಲ್ಲಿ ಅರ್ಜುನ ಬಬ್ರುವಾಹನನ ಹುಟ್ಟನ್ನು ಪ್ರಶ್ನಿಸಿದರೆ, ಬಬ್ರುವಾಹನ ಅರ್ಜುನನ ವಂಶವನ್ನೇ ಅಣಕಿಸುತ್ತಾನೆ. ಬಬ್ರುವಾಹನನ ಕಥೆ ಮಹಾಭಾರತದಲ್ಲಿ ಅಡಗಿರುವ ಅಂತರ್ಜಲವನ್ನು ಉಕ್ಕಿಸುತ್ತದೆ. ಅರ್ಜುನ ಸಾಯದೆ ಬಬ್ರುವಾಹನ ಮೇಲೆ ಬರಲಾರ, ಅರ್ಜುನ ಸಾಯುವುದೆಂದರೆ ಆತನ ವ್ಯಕ್ತಿತ್ವ ಪ್ರಕಟವಾದಂತೆ. ಆದರೆ ಬಬ್ರುವಾಹನನು ತಂದೆ ಅರ್ಜುನನ್ನು ಬದುಕಿಸುತ್ತಾನೆ. ಆದರೆ ಅಶ್ವಮೇಧದ ಕುದುರೆ ಮುನ್ನಡೆಯುತ್ತದೆ. ಅರ್ಜುನ ಮತ್ತು ಚಿತ್ರಾಂಗದೆಯರ ಸಂಬಂಧದ ನಿಜಸಂಗತಿಯ ಕಥೆ ಬಯಲಾಗುತ್ತದೆ. ಹೀಗೆ ಈ ಜೈಮಿನಿ ಭಾರತದ ಕಥೆ ಸಾಕಷ್ಟು ವಿವರವಾಗಿ ವಿಸ್ತಾರವಾಗಿದೆ. ಒಂದು ಕನ್ನಡ ಪರಂಪರೆಯ ಶ್ರೀಮಂತಿಕೆಯನ್ನು ಹೆಚ್ಚಿಸಿದೆ. ಇದು ಒಂದು ಕಾಲಕ್ಕೆ ಮನೆಮನೆಯಲ್ಲಿ ವಾಚನ ಕೃತಿಯಾಗಿತ್ತು.

ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದ ಅನೇಕ ಪಂಡಿತರಿಂದ ಕನ್ನಡ ಕಥನ ಪರಂಪರೆಯು ವಿಸ್ತರಿಸಿದ್ದನ್ನು ಕಾಣಬಹುದು. ಈ ಪಂಡಿತರ ಜೊತೆಯಲ್ಲಿದ್ದ ಕವಿ ಕೆಂಪು ನಾರಾಯಣ ಆ ಸಂದರ್ಭದಲ್ಲಿ 'ಮುದ್ರಾ ಮಂಜೂಷ' ಎಂಬ ಗ್ರಂಥವನ್ನು ಬರೆದವನು. ಇದೊಂದು ದೀರ್ಘವಾದ ಗದ್ಯ ಕಾವ್ಯ. ಇದು ಪ್ರಾಚೀನವಾದ

ಚಂದ್ರಗುಪ್ತ ಚಾಣಕ್ಯರ ಕಥೆಯನ್ನು ಹೇಳುತ್ತದೆ. ಕೆಂಪು ನಾರಾಯಣನ ಈ ಕೃತಿ ಅವನ ಕಾಲಧರ್ಮಕ್ಕೆ ವಿಸಂಗತವಾಗಿ ಬರೆದಿರುವ ಒಂದು ವ್ಯಂಗ್ಯ ಕಾವ್ಯ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲ ಆ ಸಂದರ್ಭದಲ್ಲಿ ಪೌರುಷರಿಂದ ಕೂಡಿರಲಿಲ್ಲ. ಶ್ರೀರಂಗಪಟ್ಟಣದ ಪತನದ ನಂತರ ಪೌರುಷವನ್ನು ಕಳೆದುಕೊಂಡು ಬ್ರಿಟಿಷ್ ರಾಜರ ನೆರಳಲ್ಲಿ ನೆಮ್ಮದಿಯನ್ನು ಅರಸುತ್ತಿದ್ದ ಕಾಲ ಅದು. ಆ ಪ್ರಕ್ಷುಬ್ಧ ಸಂದರ್ಭವನ್ನು ಕೆಂಪುನಾರಾಯಣನು ತನ್ನ ಕಾವ್ಯದಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳನ್ನು ಸಮಪ್ರಮಾಣದಲ್ಲಿ ಧರಿಸಿ ಕೆಂಪುನಾರಾಯಣ ತನ್ನದೇ ಆದ ಶೈಲಿಯಲ್ಲಿ ಕನ್ನಡ ಕಥನ ಪರಂಪರೆಯನ್ನು ಸೃಷ್ಟಿ ಮಾಡಿದ್ದಾನೆ. ಅವನ ಕಥನಶೈಲಿ ಆಧುನಿಕವಾದುದು.

ಕನ್ನಡದ ಅಭಿಜಾತ ಪರಂಪರೆಯ ಜೊತೆಗೆ ಕನ್ನಡದ ಮೌಕಿಕ ಪರಂಪರೆಯು ಸೃಷ್ಟಿಸಿದ ಕಥನ ಪರಂಪರೆಯು ವೈವಿಧ್ಯತೆಯಿಂದ ಕೂಡಿದೆ. ಮೌಖಿಕ ಪರಂಪರೆಯಲ್ಲಿ ಬರುವ ಲಾವಣಿಗಳು, ಕಥನ ಕವನಗಳು, ಜಾನಪದ ಕಥೆಗಳು ಇವೆಲ್ಲ ಕನ್ನಡ ಕಥನ ಪರಂಪರೆಯ ಶ್ರೀಮಂತಿಕೆಗೆ ಕಾರಣವಾಗಿವೆ. ೧೯ನೇ ಶತಮಾನದ ಹೊತ್ತಿಗೆ ಕನ್ನಡ ಕಥನ ಪರಂಪರೆಯು ಆಧುನಿಕ ಸಂವೇದನೆಯತ್ತ ಹೊರಳುವುದನ್ನು ಕಾಣಬಹುದು. ಇದಕ್ಕೆ ಸ್ಪಷ್ಟ ಉದಾಹರಣೆ ಮುದ್ದಣನ ಕೃತಿಗಳು. ರಾಮಾಯಣ ಕಥೆಯನ್ನು ಮುದ್ದಣ ತನ್ನ ಪತ್ನಿ ಮನೋರಮೆಗೆ ಹೇಳುತ್ತಿರುವಾಗ ಆಕೆ ತೂಕಡಿಸುತ್ತಿರುತ್ತಾಳೆ. ಸಕಲಗುಣ ಸಂಪನ್ನೆಯಾದ ಮನೋರಮೆ ತೂಕಡಿಸುತ್ತಿರುವುದನ್ನು ಕಂಡು ಕವಿ ಮುದ್ದಣ ಆಕ್ಷೇಪಿಸುತ್ತಾನೆ. ಹೇಳುವ ಕಥೆ ಕೇಳುಗರಿಗೆ ಅರ್ಥವಾಗದಿದ್ದಾಗ ತೂಕಡಿಸದೆ ಮತ್ತೇನು ಮಾಡಬೇಕೆಂದು ಹೇಳುವ ಮನೋರಮೆಯ ಈ ಪ್ರಶ್ನೆ ಆಧುನಿಕ ಸಾಹಿತ್ಯ ಪ್ರಕಾರವಾದ ಕಾದಂಬರಿಯ ಸೃಷ್ಟಿಗೆ ನಾಂದಿಯಾಯಿತೆಂದರೆ ಅತಿಶಯೋಕ್ತಿಯಲ್ಲ. ಇವರಿಬ್ಬರ ಸಂವಾದ ಆಧುನಿಕ ವಿರ್ಮಶಕರಿಗೆಲ್ಲಾ ಪ್ರಿಯವಾದುದು. ಮೌಖಿಕ ಸಾಹಿತ್ಯವಾದ ಗೋವಿನಹಾಡು, ಕೆರೆಗೆ ಹಾರ ಮುಂತಾದ ಜಾನಪದ ಕಾವ್ಯಗಳಲ್ಲಿ ಕಂಡು ಬರುವ ಕಥನ ಪರಂಪರೆಯು ಸರಳವಾಗಿದ್ದರು, ಅದು ಅಚ್ಚರಿಗೊಳಿಸುವಷ್ಟು ಪರಿಣಾಮಕಾರಿಯಾಗಿದೆ. ಕನ್ನಡದ ಶ್ರೇಷ್ಠ ಜಾನಪದ ದುರಂತ ಕಥನ ಪರಂಪರೆಗೆ ಗೋವಿನ ಹಾಡು ಮತ್ತು ಕೆರೆಗೆ ಹಾರ ಸಾಕ್ಷಿಯಾಗಿವೆ.

ಮೊದಲೇ ಹೇಳಿದ ಹಾಗೆ ಕನ್ನಡ ಕಥನ ಪರಂಪರೆಗೆ ದೀರ್ಘವಾದ ಇತಿಹಾಸವಿದೆ. ಆದರೆ ಕನ್ನಡ ಕಾದಂಬರಿ ಪರಂಪರೆಗೆ ಅಂತ ದೀರ್ಘವಾದ ಇತಿಹಾಸವೇನೂ ಇಲ್ಲ. ಆದರೆ ಕಾದಂಬರಿಯ ಆಂತರ್ಯದಲ್ಲಿದಲ್ಲಿರುವುದು ಕಥನವೇ. ಈ ಕಥನವು ಕಾದಂಬರಿಜನ್ಯವಾಗಿ ಮತ್ತು ಸಾಹಿತ್ಯ ಪ್ರಕಾರವಾಗಿ ರೂಪುಗೊಂಡಿದ್ದು ೨೦ನೇ ಶತಮಾನದ ಆದಿಯಲ್ಲೇ ಎಂದು ಹೇಳಬಹುದು. ಈ ಕಾದಂಬರಿ ಪರಂಪರೆಯನ್ನು ವಿಮರ್ಶಕರಾದ ಟಿ.ಪಿ. ಅಶೋಕರವರು ಈ ರೀತಿ ಗುರುತಿಸುತ್ತಾರೆ:

"ಸಾಹಿತ್ಯ ಪ್ರಕಾರಗಳಲ್ಲೆಲ್ಲಾ ಕಾದಂಬರಿ ತೀರ ಈಚಿನದು. ನಾವು ಇಂದು ಯಾವುದನ್ನು ಕಾದಂಬರಿ ಎಂದು ಗುರುತಿಸುತ್ತೇವೋ ಆ ಪ್ರಕಾರಕ್ಕೆ ಅಂಥ ದೀರ್ಘ ಚರಿತ್ರೆಯೇನಿಲ್ಲ. ಕನ್ನಡದಲ್ಲಂತೂ ಕಾದಂಬರಿಗೆ ಒಂದು ಶತಮಾನವೂ ತುಂಬಿಲ್ಲ. ಯುರೋಪಿನಲ್ಲಾದರೂ ಈ ಚರಿತ್ರೆ ಎರಡು ಮೂರು ಶತಮಾನಗಳಿಗಿಂತ ಹಿಂದೆ ಹೋಗುವುದಿಲ್ಲ. ಅಂದರೆ ಕಾದಂಬರಿಯು ಕೇವಲ ಒಂದು ಹೊಸ ಪ್ರಕಾರವಲ್ಲ; ಅದು ಒಂದು ಹೊಸಕಾಲದ ಸಾಹಿತ್ಯ ಪ್ರಕಾರವೂ

ಹೌದು. ಕಾದಂಬರಿ ಬರುವುದಕ್ಕೂ ಎಷ್ಟೋ ಶತಮಾನಗಳ ಹಿಂದೆ ಗದ್ಯ ಬರವಣಿಗೆ ಎಲ್ಲ ಸಾಹಿತ್ಯ ಪರಂಪರೆಗಳಲ್ಲಿ ಇತ್ತು. ಆದರೆ ಯುರೋಪಿನಲ್ಲಿ ಕಾದಂಬರಿ ನಿಜವಾಗಿ ಹುಟಿದ್ದು ಆ ಸಮಾಜ ಕೈಗಾರಿಕೀಕರಣದ ಫಲವಾಗಿ ಜಮೀನ್ದಾರೀ ವ್ಯವಸ್ಥೆಯಿಂದ ಬಂಡವಾಳಶಾಹೀ ವ್ಯವಸ್ಥೆಯ ಕಡೆ ಚಲಿಸಲು ಪ್ರಾರಂಭಿಸಿದಾಗ; ಕೈಗಾರಿಕಾ ಕ್ರಾಂತಿ ಯೂರೋಪಿನ ಸಾಂಸ್ಕೃತಿಕ ಚರಿತ್ರೆಯ ಗತಿಯನ್ನೇ ಬದಲಾಯಿಸಿದ್ದು ಐತಿಹಾಸಿಕ ಸತ್ಯವಾಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆ ಯುರೋಪಿನ ಸಾಮಾಜಿಕ ಸಂರಚನೆಗಳಲ್ಲಿ ಮೂಲಭೂತ ಬದಲಾವಣೆಗಳನ್ನು ಉಂಟುಮಾಡಿತು."[೪]

ಯುರೋಪಿನಲ್ಲಿ ಕಾದಂಬರಿಯ ಉಗಮಕ್ಕೂ ಬಂಡವಾಳ ಶಾಹಿಯ ಪ್ರಭುತ್ವಕ್ಕೂ ಗಾಢ ಸಂಬಂಧವಿದೆ. ಔದ್ಯೋಗಿಕ ಕ್ರಾಂತಿಯ ನಂತರ ಜಮೀನ್ದಾರಿ ವ್ಯವಸ್ಥೆ ಮತ್ತು ಆರ್ಥಿಕ ವ್ಯವಸ್ಥೆ ಕುಸಿಯ ತೊಡಗಿತು. ಇದರಿಂದ ಸಾಮಾಜಿಕ ವ್ಯವಸ್ಥೆಯಲ್ಲಿ ಏರುಪೇರುಗಳಾಗಿ ಬೂರ್ಷ್ವಾ ವರ್ಗ ಮೇಲುಗೈ ಸಾಧಿಸಿತು. ಈ ವರ್ಗದ ಆಶೋತ್ತರಗಳಿಗೆ ಅನುಗುಣವಾಗಿ ಕಾದಂಬರಿಯೆಂಬ ಪ್ರಕಾರವು ಪ್ರತಿಸ್ಪಂಧಿಸಿತು. ಯುರೋಪಿನ ಮಧ್ಯಕಾಲೀನ ಸಾಂಸ್ಕೃತಿಕ ಲೋಕವನ್ನು ಸರ್ ವಾಲ್ಟೀಸ್‌ನಂತಹ ಲೇಖಕರು ತಮ್ಮದೇ ಆದ ಮಾದರಿಗಳ ಮೂಲಕ ವಿಡಂಬನೆಗೆ ಗುರಿಮಾಡಿದ್ದರು. ಬ್ರಿಟೀಷರು ಭಾರತಕ್ಕೆ ಪ್ರವೇಶಿಸಿದ ನಂತರ ಇಂಗ್ಲೀಷ್ ಶಿಕ್ಷಣದ ಪರಿಣಾಮದಿಂದಾಗಿ ಭಾರತದ ಮಧ್ಯಮ ವರ್ಗದ ಜನರಲ್ಲಿ ಒಂದು ಹೊಸ ಜಾಗೃತಿ ಉಂಟಾಯಿತು. ಅದರ ಪರಿಣಾಮದಿಂದಾಗಿಯೂ ಭಾರತದಲ್ಲಿ ಕಾದಂಬರಿ ಪ್ರಕಾರವು ಮೈದಾಳಿತು. ಆರಂಭದಲ್ಲಿ ಕಾದಂಬರಿ ಪ್ರಕಾರ ಕೂಡ ಜಮೀನ್ದಾರಿ ವ್ಯವಸ್ಥೆಯನ್ನು, ಸಾಮಾಜಿಕ ಹಾಗೂ ಸ್ತ್ರೀ ಅಸಮಾನತೆಯನ್ನು ವಿರೋಧಿಸುತ್ತಲೇ ಹುಟ್ಟಿಕೊಂಡಿತು. ನಂತರ ವಸಾಹತುಶಾಹಿ ಅನುಭವದೊಡನೆ ಕಾದಂಬರಿಯು ಸಂಬಂಧ ಏರ್ಪಡಿಸಿಕೊಂಡಿತು. ಇದರಿಂದ ಭಾರತೀಯ ಸಂದರ್ಭದಲ್ಲಿ ಕಾದಂಬರಿ ಪ್ರಕಾರವು ಪರಿವರ್ತನೆಯ ಹಾದಿಯನ್ನು ಹಿಡಿಯಿತು. ಇದು ವ್ಯಷ್ಟಿ ಮತ್ತು ಸಮಷ್ಟಿ ನೆಲೆಯಲ್ಲಿ ವ್ಯಾಪಿಸಿಕೊಂಡು ಭಾರತೀಯ ಸಮಾಜದಲ್ಲಿ ಅರ್ಥಪೂರ್ಣವಾದ ಸಂವಾದವನ್ನು ಸ್ಥಾಪಿಸಿಕೊಂಡಿತು.

ಭಾರತೀಯ ಕಾದಂಬರಿ ಇತಿಹಾಸದಲ್ಲಿ ವಾಸ್ತವವಾದ ಮತ್ತು ರಮ್ಯವಾದ ಎರಡು ಪ್ರವೃತ್ತಿಗಳು ಪ್ರಮುಖವಾಗಿ ಕಾಣಿಸಿಕೊಂಡವು. ಬಂಗಾಳಿ, ಮರಾಠಿ, ಗುಜರಾತಿ, ಹಿಂದಿ, ಕನ್ನಡ ಭಾಷೆಗಳಲ್ಲಿ ಈ ಕಾದಂಬರಿ ಪ್ರಕಾರವು ಆರಂಭದಲ್ಲಿ ಕಾಣಿಸಿಕೊಂಡಿತು. ಕನ್ನಡದ 'ಇಂದಿರಾಬಾಯಿ' ಇಂತಹ ಆರಂಭದ ಕಾದಂಬರಿಗಳಲ್ಲೊಂದು. ಇಂಗ್ಲೀಷ್ ಶಿಕ್ಷಣದ ಮತ್ತು ವಸಾಹತುಶಾಹಿಯ ಪ್ರಭಾವದಿಂದಾಗಿ ವಿಧವಾ ವಿವಾಹ, ವೇಶ್ಯಾಜೀವನ, ಜಮೀನ್ದಾರಿ ವ್ಯವಸ್ಥೆಯ ವಿಘಟನೆ, ಸ್ತ್ರೀ ಸಮಸ್ಯೆ ಇತ್ಯಾದಿಗಳು ಈ ಕಾದಂಬರಿಗಳ ವಸ್ತುವಾದವು. ಈ ವಾಸ್ತವವಾದಿ ಕಾದಂಬರಿಗಳ ಜೊತೆಗೆ ರಮ್ಯವಾದೀ ಕಾದಂಬರಿಗಳೂ ಹುಟ್ಟಿಕೊಂಡವು. ಇವುಗಳ ಬೇರುಗಳನ್ನು ಪಾಶ್ಚಾತ್ಯ ಕಾದಂಬರಿಗಳಲ್ಲಿ ಮತ್ತು ಭಾರತೀಯ ಕಥಾ ಸಾಹಿತ್ಯದ ಪರಂಪರೆಯಲ್ಲಿ ಬರುವ ಬಾಣನ ಕಾದಂಬರಿಗಳಲ್ಲಿ ಗುರುತಿಸಬಹುದು. ಇದರ ಪರಿಣಾಮದಿಂದ ಐತಿಹಾಸಿಕ ಹಾಗೂ ರೋಮಾನ್ಸ್ ಕಾದಂಬರಿಗಳು ಭಾರತದ ಎಲ್ಲಾ ಭಾಷೆಗಳಲ್ಲಿಯೂ ಕಾಣಿಸಿಕೊಂಡವು. ಭಾರತೀಯ ಕಾದಂಬರಿಕಾರರು ತಮ್ಮ ರಾಷ್ಟ್ರದ ಇತಿಹಾಸದ ಉಜ್ವಲ ಕ್ಷಣಗಳನ್ನು ತಮ್ಮ ಕಾದಂಬರಿಗಳಲ್ಲಿ ಪುನಃ ಸೃಷ್ಟಿಸಿದರು. ಗಳಗನಾಥರ 'ಮಾಧವ ಕರುಣಾವಿಲಾಸ' ಇಂತಹ ಸೃಷ್ಟಿಗಳಲ್ಲಿ ಒಂದು ಮುಖ್ಯ ಕಾದಂಬರಿ. ತುರುವಾಯ ಕಾದಂಬರಿ ಪ್ರಕಾರವು ವೈವಿಧ್ಯಮಯವಾಗಿ ಬೆಳೆಯುತ್ತಾ ಹೋಯಿತು. ರಂ.ಶ್ರೀ. ಮುಗಳಿಯವರು ೧೯೨೦ - ೪೫ ರ ನಡುವೆ ಕಾಣಿಸಿಕೊಂಡ ಕನ್ನಡದ ಕಾದಂಬರಿಗಳನ್ನು ಕುರಿತು ಹೀಗೆ ಹೇಳುತ್ತಾರೆ:

"೧೯೨೦ - ೨೧ ರಿಂದ ಮುಂದಿನ ಕಾಲವು ಕರ್ನಾಟಕಲ್ಲೆಲ್ಲ ಹೊಸ ಚೈತನ್ಯ ಸ್ಫುರಿಸಿದ ಕಾಲ. ರಾಷ್ಟ್ರೀಯ ಮತ್ತು ಪ್ರಾಂತೀಯ ಜೀವನದಲ್ಲಿಯ ಆಂದೋಲನಗಳು ಹಿರಿಯರಲ್ಲಿ, ತರುಣರಲ್ಲಿ ಹೊಸ ಆಸೆ ಆಕಾಂಕ್ಷೆಗಳನ್ನು ಸರಿಕಲ್ಪಗಳನ್ನೂ ಚಿಮ್ಮಿಸಿದವು. ಹೊಸ ಬಾಳನ್ನು ಕಟ್ಟಬೇಕು, ಹೊಸ ಸಾಹಿತ್ಯದಿಂದ ಕನ್ನಡ ನುಡಿಯನ್ನು ಸಿಂಗರಿಸಬೇಕು ಎಂಬ ದರ್ಶನ ಮತ್ತು ಉತ್ಸಾಹಗಳು ಕನ್ನಡ ನಾಡಿನ ಎಲ್ಲ ಭಾಗಗಳಲ್ಲಿ ತಲೆದೋರಿದವು. ೧೯೨೦ರ ಹಿಂದಿನ ಕಾಲದಲ್ಲಿ ಈ ಬೆಳಗನ್ನು ಸೂಚಿಸುವ ನಸುಕೂ ತಂಗಾಳಿಯೂ ತೋರದಿರಲಿಲ್ಲ. ಆದರೆ ಅದು ನಿಚ್ಚಳವಾದ ಬೆಳಗಾದೀತೇ ಎಂಬ ಭಯವಿತ್ತು. ಹೊಸ ಸಾಹಿತ್ಯ ಉದಯವಾಗಿತ್ತು. ಆದರೆ ಅದಕ್ಕೆ ತನ್ನದೆಂಬುವ ಕಳೆ ಹೆಚ್ಚಾಗಿರಲಿಲ್ಲ. ಕಾಲ ಪರಿಸ್ಥಿತಿಯಲ್ಲಿ ಸಿಕ್ಕುಹೋದ ಸ್ವತಂತ್ರ ಪ್ರಭೆಯ ಕಲಾವಿದರು ಸಹ ಪರಾನುಕರಣದಲ್ಲಿ ತೊಡಗಿದ್ದರು. ಚಿರಸ್ಮರಣೀಯರಾದ ಬಿ. ವೆಂಕಟಚಾರ್ಯರೂ, ಗಳಗನಾಥರೂ ಬಂಗಾಲಿ ಮರಾಠಿ ಸಾಹಿತ್ಯ ಭಂಡಾರದಿಂದ ಬೆಲೆಯುಳ್ಳ ಕೃತಿಗಳನ್ನು ತಂದು, ತೆರವಾಗಿದ್ದ ಕನ್ನಡದ ಕಣಜವನ್ನು ರಾಸಿಯಾಗಿ ತುಂಬಿದರು. ಭಾಷಾಂತರಿತ ಕಾದಂಬರಿಗಳೇ ಹೊಸಗನ್ನಡದ ಮೊದಲಗಿತ್ತಿಯರಂತೆ ಮೆರೆದವು. ಹೊಸ ಅಭಿರುಚಿಗೆ ಅವೇ ಕಾರಣವಾದವು. ಅವುಗಳಲ್ಲಿ ಮೆಚ್ಚತಕ್ಕ ಕೌಶಲ್ಯವೂ ಶೈಲಿಯ ಮೋಹಕತೆಯೂ ತೋರಿವೆ. ಆದರೂ ಅವುಗಳ ತಂತ್ರವೆಲ್ಲ ಹಳೆಯದು, ರೀತಿ ಏಕರೀತಿ. ವಿಷಯ ನಿರೂಪಣೆಯ ವೈವಿಧ್ಯಕಂತೂ ಎಡೆಯೇ ಇಲ್ಲ. ವರ್ಣನೆಗಳ ಅತಿವಿಸ್ತರ - ಅನೌಚಿತ್ಯ, ಸ್ವಭಾವ - ಸನ್ನಿವೇಶಗಳ ಕೃತಕತೆ, ವಾಚಕರನ್ನು ಕುರಿತು ಮಾಡಿದ ಉಪದೇಶ - ಅನುನಯ ಇವೆಲ್ಲ ಗಂಭೀರಕ್ಕೆ ಹಾಸ್ಯದ ಸ್ವರೂಪ ಕೊಡುವಂತಾದುವು. ಆದರೂ ಬಂಕಿಮಚಂದ್ರರ ರಾಷ್ಟ್ರದರ್ಶನ, ಅದ್ಭುತ ರಮ್ಯ ಕಥನ ಕಲೆ ಇವುಗಳಿಂದ ವೆಂಕಟಾಚಾರ್ಯರ ಕೃತಿಗಳೂ ಮರಾಠಿ ಕಾದಂಬರಿಕಾರರ ದೇಶಧರ್ಮ ನಿಷ್ಠೆ, ರೋಮಾಂಚಕಾರಕ ಚರಿತ್ರೆ ಇವುಗಳಿಂದ ಗಳಗನಾಥರ ಕೃತಿಗಳೂ ಅವರಿಬ್ಬರ ವಿಶಿಷ್ಟವಾದ ಕನ್ನಡ ಶೈಲಿಗಳಲ್ಲಿ ಬೆಳಗಿದುವು."[೫]

ಈ ಸಂದರ್ಭದಲ್ಲಿ ಕನ್ನಡದಲ್ಲಿ ಪ್ರಾದೇಶಿಕ ಕಾದಂಬರಿಗಳು ಕಾಣಿಸಿಕೊಂಡವು. ಕುವೆಂಪು, ಕಾರಂತ, ರಾವ ಬಹಾದ್ದೂರ್, ಗೋಕಾಕ್ ಇವರ ಕಾದಂಬರಿಗಳು ಪ್ರಾದೇಶಿಕ ಸತ್ವವನ್ನು ಸಮರ್ಥವಾಗಿ ಬಿಂಬಿಸುತ್ತವೆ. ಕಾದಂಬರಿ ಮೂಲತ: ಗದ್ಯ ಪ್ರಕಾರವಾಗಿರವುದರಿಂದ ಅದರಲ್ಲಿ ಹರಿಯುವ ಕಥನ ಮದ್ಯಮ ವರ್ಗದ ಓದುಗ ವಲಯಕ್ಕೆ ಕೂತೂಹಲದ ಕೇಂದ್ರವಾಯಿತು. ಕಾದಂಬರಿ ಪ್ರಕಾರ ಪ್ರಾಚೀನ ಕಥಾಸಾಹಿತ್ಯದ ಮುಂದುವರಿಕೆಯ ಭಾಗ ಎಂದು ಹೇಳಿದರೂ ಅದು 'ಬರೀ ಕಥೆ ಕಾದಂಬರಿಯಲ್ಲ, ಒಂದು ದೀರ್ಘವಾದ ಕಥೆ ಕೂಡ ಕಾದಂಬರಿಯಲ್ಲ' ಎನ್ನುವ ಡಿ.ಆರ್. ನಾಗರಾಜ್ ರವರ ಅಭಿಪ್ರಾಯವು ಸೂಕ್ತವಾಗಿದೆ. ನಾಗರಾಜ್ ಅವರು ಸಾಂಪ್ರದಾಯಿಕ ಕಥನ ಮತ್ತು ಆಧುನಿಕ ಯುಗದ ಕಾದಂಬರಿಗಳ ನಡುವಣ ಕಥನದ ವ್ಯತ್ಯಾಸಗಳನ್ನು ಅರ್ಥಪೂರ್ಣವಾಗಿ ಗುರುತಿಸಿದ್ದಾರೆ. ಅವರು ತಮ್ಮ 'ಸಾಹಿತ್ಯಕ ಕಥನ'ದ ಗ್ರಂಥದಲ್ಲಿ 'ಕಾದಂಬರಿ ಮೀಮಾಂಸೆ'ಯ ಬಗ್ಗೆ ಹೇಳುವ ಕೆಲಮಾತುಗಳನ್ನು ಹೀಗೆ ಪಟ್ಟಿ ಮಾಡಬಹುದು:

"೧. ಸಾಂಪ್ರದಾಯಿಕ ಕಥೆಯಲ್ಲಿ ಸಮಾಜದ ಜತೆ ಸಾವಯವ ಬಿರುಕು ಇರುವುದಿಲ್ಲ. ಕಾದಂಬರಿ ಹುಟ್ಟಿಕೊಳ್ಳುವುದೇ ಈ ಸಾವಯವ ಬಿರುಕಿನ ಮೂಲ ನೆಲೆಯಲ್ಲಿ.

೨. ಸಾಂಪ್ರದಾಯಿಕ ಕಥನದಲ್ಲಿ ಕಂಡುಬರುವಂತೆ ಕಾದಂಬರಿಯಲ್ಲಿ ನಿರೂಪಣಾ ಪ್ರಜ್ಞೆಗೆ ತನ್ಮಯತೆಯ ಸ್ಥಿತಿ ಸಾಧ್ಯವಿರುವುದಿಲ್ಲ.

೩. ಸಾಂಪ್ರದಾಯಿಕ ಕಥನಗಳಲ್ಲಿ ಗದ್ಯಕ್ಕಿರುವ ಗುಣ ಕಾಲಾತೀತವಾದದ್ದು.

೪. ಪಾತ್ರಗಳ ವರ್ಣನೆಯ ಹಿಂದಿನ ಕಾರಣ ಹುಡುವಿಕೆಯ ನೆಲೆಯಲ್ಲಿ ಕಾದಂಬರಿ ಭಿನ್ನವಾಗುತ್ತದೆ. ಕಾದಂಬರಿ ಪಾತ್ರ ನಿರ್ಮಾಣಕ್ಕೆ, ವರ್ತನೆಗೆ ನಿರ್ದಿಷ್ಟ ಕಾರಣಗಳನ್ನು ಹುಡುಕುವ ಕೆಲಸ ಮಾಡುತ್ತದೆ. ವರ್ತನೆಗಳ ಸಾಮಾಜಿಕ ಮೂಲವನ್ನು ಹುಡುಕುವುದೇ ಕಾದಂಬರಿಯ ಮುಖ್ಯ ಲಕ್ಷಣ." ೬

ಭಾರತೀಯ ಕಥನ ಸಾಹಿತ್ಯದಲ್ಲಿ ೧೯ನೇ ಶತಮಾನದವರೆಗೆ ಬಂದ ಬರವಣಿಗೆಯು ಮುಖ್ಯವಾಗಿ ಮಹಾಭಾರತ, ರಾಮಾಯಣ, ಪಂಚತಂತ್ರ, ಕಥಾ ಸರಿತ್ಸಾಗರ, ಬೃಹತ್ಕಥಾಕೋಶ ಮುಂತಾದ ಕೃತಿಗಳು ಸೇರುತ್ತವೆ. ೧೯ನೇ ಶತಮಾನದ ಉತ್ತರಾರ್ಧದ ಬರವಣಿಗೆಯಲ್ಲಿ ಮುಖ್ಯವಾಗಿ ವಾಗ್ದೇವಿ, ಇಂದ್ರಾಬಾಯಿ, ಮಾಡಿದುಣ್ಣೋ ಮಹಾರಾಯ, ಮುಂತಾದ ಕೃತಿಗಳು ಸೇರಿದರೆ, ೨೦ನೇ ಶತಮಾನದ ಮೂರನೇ ದಶಕದಿಂದೀಚೆಗೆ ಕಾನೂರು ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು, ಗ್ರಾಮಾಯಣ, ಅಳಿದ ಮೇಲೆ, ಬೆಟ್ಟದ ಜೀವ, ಚೋಮನದುಡಿ, ಚಿಕ್ಕವೀರ ರಾಜೇಂದ್ರ, ಇಜ್ಜೋಡು, ಸಮರಸವೇ ಜೀವನ -ಮುಂತಾದ ಮಹತ್ವದ ಕಾದಂಬರಿಗಳು ಸೇರುತ್ತವೆ. ೨೦ನೇ ಶತಮಾನದ ಕೊನೆಯ ದಶಕಗಳಲ್ಲಿ ಕಾಣಿಸಿಕೊಂಡ ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಮುಸ್ಸಂಜೆಯ ಕಥಾಪ್ರಸಂಗ, ಭಾರತೀಪುರ, ಸಂಸ್ಕಾರ, ಅವಸ್ಥೆ, ಓಂಣಮೋ, ಬೀಜ, ಶಿಕಾರಿ, ಕಾಡು, ಪರಸಂಗದ ಗೆಂಡೆತಿಮ್ಮ, ನಿಸರ್ಗ, ವೈಶಾಖ, ಮಾಡಿ ಮಡಿದವರು, ಚಿರಸ್ಮರಣೆ, ಸಂಧ್ಯಾರಾಗ, ಸಿಂಗಾರವ್ವ ಮತ್ತು ಅರಮನೆ, ಚಕೋರಿ, ಗಂಗವ್ವ ಗಂಗಾಮಾಯಿ, ಗೃಹಭಂಗ, ಪರ್ವ, ದಾಟು, ಬೆಕ್ಕಿನಕಣ್ಣು, ಗಂಡಸರು, ಒಡಲಾಳ, ಕುಸುಮಬಾಲೆ, ಮಾಗಿ -ಮುಂತಾದ ಕಾದಂಬರಿಗಳು ಕನ್ನಡ ಕಥನ ಪರಂಪರೆಯ ಬೆಳವಣಿಗೆಗೆ ಸಾಕ್ಷಿಯಾಗಿವೆ.

ಒಂದು ಕಾದಂಬರಿಯ ಕಥನವನ್ನು ಅಧ್ಯಯನ ಮಾಡುವಾಗ ಅದರ ಸಾಮಾಜಿಕ ಸಂದರ್ಭವು ಮುಖ್ಯವಾಗುತ್ತದೆ. ಕಾದಂಬರಿ ಹುಟ್ಟುವುದೇ ಲೇಖಕ ಮತ್ತು ಸಮಾಜ ಇವೆರಡರ ನಡುವಿನ ಸಂಬಂಧದ ಪರಿಣಾಮದಿಂದ. ಸಮಾಜದ ಸೃಷ್ಟಿಯಾದ ಭಾಷೆ, ಶೈಲಿ ಇವೆಲ್ಲ ಲೇಖಕನ ಅಭಿವ್ಯಕ್ತಿಯ ಮೇಲೆ ಪರಿಣಾಮ ಬೀರುತ್ತವೆ. ಕಾದಂಬರಿಯ ಸ್ವರೂಪದ ಬಗ್ಗೆ ಬಹುಜನ ವಿದ್ವಾಂಸರು ನಡೆಸಿದ ಚರ್ಚೆಯನ್ನು ಅಧ್ಯಯನ ಮಾಡಿ ವಿಮರ್ಶಕರಾದ ಜಿ.ಎಸ್. ಆಮೂರರವರು ಈ ರೀತಿ ದಾಖಲಿಸುತ್ತಾರೆ:

೧. "ಕಾದಂಬರಿ ಕಲ್ಪನೆಯು ಒಂದು ಮಹತ್ವಪೂರ್ಣವಾದ ಆವಿಷ್ಕಾರವಾದ್ದರಿಂದ ಕಲ್ಪನೆಯ ಉದ್ದೇಶಗಳಾದ ಪರಿಷ್ಕಾರ ಮತ್ತು ಸಂಜ್ಞಾನ ಅದರ ಉದ್ದೇಶಗಳೂ ಆಗುತ್ತವೆ.

೨. ಆದರ್ಶ ಮತ್ತು ವಾಸ್ತವಗಳ ವಿಶಿಷ್ಟ ಸಂಯೋಗದಲ್ಲಿ ಕಾದಂಬರಿ ಹುಟ್ಟಿಕೊಳ್ಳುತ್ತದೆ. ಆದರೆ ಕಾದಂಬರಿ ವಾಸ್ತವದ ಅನುಕರಣೆಯಲ್ಲ. ಅದಕ್ಕಿಂತ ಭಿನ್ನವಾದ ರಚನೆ. ಅದನ್ನು ಒಂದು ವ್ಯವಸ್ಥಿತವಾದ ಮಾದರಿ ಎಂದು ನೋಡಬೇಕೇ ವಿನಹ ಅನುಕೃತಿ ಎಂದಲ್ಲ.

೩. ಕಾದಂಬರಿಯ ಲಕ್ಷ್ಯ ಐತಿಹಾಸಿಕ ವರ್ತಮಾನದತ್ತ ಇರುವುದರಿಂದ ಅದು ಆದರ್ಶ ಭೂತದಲ್ಲಿಯೇ ನಂಬಿಗೆಯನ್ನಿಟ್ಟ ಮಹಾಕಾವ್ಯದಿಂದ ಭಿನ್ನವಾಗಿರುತ್ತದೆ.

೪. ಕಾದಂಬರಿ ಮಾನವನ ಮನಸ್ಸು ಮತ್ತು ಅವನಿಗಿರುವ ಜಗತ್ತು ಇವುಗಳ ಪರಸ್ಪರ ಸಂಬಂಧದ ಪರಿಣಾಮವಾಗಿರುವುದರಿಂದ ವಾಸ್ತವ ಮತ್ತು ಆದರ್ಶ ಇವುಗಳ ಕ್ರಿಯೆ - ಪ್ರತಿಕ್ರಿಯೆ ಅದರ ಜೀವಾಳವಾಗಿರುತ್ತದೆ. ಒಂದು ಕೃತಿಯ ವೈಯಕ್ತಿಕತೆ ಅದು ವಾಸ್ತವ ಮತ್ತು ಆದರ್ಶಗಳ ಬಗ್ಗೆ ಹೊಂದಿದ ತಿಳುವಳಿಕೆ ಮತ್ತು ಈ ತಿಳುವಳಿಕೆ ಅಭಿವ್ಯಕ್ತಿ ಹೊಂದುವ ರೀತಿ ಇವುಗಳನ್ನು ಅವಲಂಬಿಸಿದೆ.

೫. ಬದುಕಿನ ಅರ್ಥವನ್ನು ಪ್ರಕಟಗೊಳಿಸುವ ಮೂಲಕ ಕಾದಂಬರಿ ಸಾಮಾಜಿಕ ಅವಶ್ಯಕತೆಯಾಗಿ ಬಂದರೂ ಅದು ಇರುವಿಕೆಯಿಂದ ಓದುಗನನ್ನು ಬೇರ್ಪಡಿಸುವ ಮೂಲಕ ಅವನಿಗೆ ಪರಕೀಯತೆಯ ಅನುಭವವನ್ನು ತಂದುಕೊಡುತ್ತದೆ. ತನ್ನ ಕಲಾತ್ಮಕತೆಯನ್ನು ತಾನೇ ಎತ್ತಿ ತೋರಿಸುವುದು ಕಾದಂಬರಿಯ ಮುಖ್ಯ ಲಕ್ಷಣಗಳಲ್ಲೊಂದಾಗಿದೆ.

೬. ಸೃಜನಶೀಲತೆ ಮತ್ತು ಮೌಲ್ಯಾನ್ವೇಷಣೆಗಳು ಕಾದಂಬರಿಯ ರೀತಿಯನ್ನು ನಿರ್ಧರಿಸುತ್ತದೆ. ಸೃಷ್ಟ್ಯಾತ್ಮಕ ವೈಚಾರಿಕತೆ ಅದರ ಇನ್ನೊಂದು ಮುಖ್ಯ ಲಕ್ಷಣ.

೭. ಕಾದಂಬರಿಯ ವಿಮರ್ಶೆ ಅದರ ವಿಶಿಷ್ಟ ಸ್ವರೂಪದ ಅರಿವಿನಿಂದ ಕೂಡಿರಬೇಕು. ಇಲ್ಲದೇ ಹೋದರೆ ಅದರ ಯಾವುದೊಂದು ಅಂಗದ ಬಗ್ಗೆ ಅವಾಸ್ತವ ಗಮನ ಕೊಡುವ ಮೂಲಕ ಅದು ಕೃತಿಯ ಬಗ್ಗೆ ಅಸತ್ಯ ಅಥವಾ ಅಪೂರ್ಣ ತಿಳುವಳಿಕೆಗೆ ಕಾರಣವಾಗುತ್ತದೆ."[೬]

ಕನ್ನಡ ಕಾದಂಬರಿಯ ಆರಂಭ ಅನುವಾದದ ಮೂಲಕ ಪ್ರಾರಂಭವಾಗಿ ಸ್ವತಂತ್ರ ಕಾದಂಬರಿಗಳ ಸೃಷ್ಟಿಗೆ ಬಂದು ನಿಂತಿದೆ. ಸಾಂಪ್ರದಾಯಿಕ ಗದ್ಯ ಕಥನಗಳಿಗಿಂತ ಆನಂತರದ ಕಾದಂಬರಿಗಳು ಪ್ರತ್ಯೇಕವಾಗಿ ಕಂಡರೂ ಕೆಲವು ವಿಶಿಷ್ಟ ಲಕ್ಷಣಗಳನ್ನು ಉಳಿಸಿಕೊಂಡಿವೆ. ಹೀಗಾಗಿ ಸಾಂಪ್ರದಾಯಿಕ ಕಥನಗಳ ಪ್ರಭಾವ ಅನುವಾದದ ಸಾಹಿತ್ಯದ ಮೇಲೂ ಆಗಿರುವುದನ್ನು ಕಾಣಬಹುದು. ಕನ್ನಡ ಕಾದಂಬರಿಗಳಿಗೆ ಸಾಂಪ್ರದಾಯಿಕ ಕಥನದ ಮುಖ್ಯ ಕೊಡುಗೆ ಎಂದರೆ ಕನ್ನಡ ಗದ್ಯದ ವೈವಿಧ್ಯತೆ; ಸಾಂಪ್ರದಾಯಿಕ ಕಥನ ಕನ್ನಡದ ಕಾದಂಬರಿಗಳಲ್ಲಿ ಮೈಪಡೆದುಕೊಂಡ ವೈವಿಧ್ಯತೆಯ ಬಗ್ಗೆ ಶ್ರೀಕಂಠ ಕೂಡಿಗೆಯವರು ಈ ರೀತಿ ಅಭಿಪ್ರಾಯ ಪಡುತ್ತಾರೆ:

> "ಆಧುನಿಕ ಯುಗಕ್ಕೆ ಕಾಲಿಟ್ಟಂತೆ ಸಮಕಾಲೀನ ಜೀವನ ಕ್ರಮ ಕಾದಂಬರಿಯೊಳಕ್ಕೆ ಪ್ರವೇಶಿಸಿತು. ಕಣ್ಮುಂದೆ ಕಾಣುವ ನೂರಾರು ಪಾತ್ರಗಳು ಕಾದಂಬರಿಯಲ್ಲಿ ಆಶ್ರಯಪಡೆದು ವ್ಯಕ್ತಿ ವಿಶಿಷ್ಟವಾಗಿ ಕಾಣಿಸಿದವು. ಅವುಗಳ ಗುಣದೋಷಗಳ ಚರ್ಚೆ ಇಣುಕಿತು. ಪ್ರಗತಿಪರ ವಸ್ತುವಿನ ಆಯ್ಕೆಯೊಂದಿಗೆ ಸಾಮಾಜಿಕ ವಿಮರ್ಶೆ

ಆರಂಭವಾಯಿತು. ಕಥನಕ್ಕೆ ಏಕಾಗ್ರತೆ ಬಂತು. ಭಾಷೆ ಸ್ಪಷ್ಟವೂ, ಪಾರದರ್ಶಕವೂ ಆಗತೊಡಗಿತು. ಹೊಸ ಜೀವನ ದೃಷ್ಟಿ ತತ್ವವಿಚಾರ ಬೆಳೆದಂತೆ ಲೋಕ ಹೀಗಿದೆ ಎಂದು ತೋರಿಸುವ ಕ್ರಮ ತಪ್ಪಿ ಒಂದು ವಿಶಿಷ್ಟ ಮನಸ್ಸು ಲೋಕವನ್ನು ಹೇಗೆ ನೋಡುತ್ತದೆ ಎನ್ನುವ ಪರಿಪಾಠ ಬೆಳೆಯಿತು. ವಿಜ್ಞಾನ ಮತ್ತು ಭಿನ್ನಶಾಸ್ತ್ರಗಳ ತಿಳುವಳಿಕೆ ಹೆಚ್ಚಿದ ಹಾಗೆ ವ್ಯಕ್ತಿಯ ಮಾನಸಿಕ ಜಗತ್ತನ್ನು ತಡಕಾಡುವ, ಮೌಲ್ಯ ಶೋಧನೆ ಮಾಡುವ ಪ್ರಯತ್ನ ನಡೆಯಿತು. ಆಧುನಿಕ ಜಗತ್ತಿನ ಸಂಕೀರ್ಣಾನುಭವಗಳ ಅನ್ವೇಷಣೆಗೆ ಕಾದಂಬರಿ ಪ್ರಯೋಗ ಕಣವಾಯಿತು. ಈ ಮುನ್ನಡೆಗೆ ಅರೆ ಕೊರೆಗಳನ್ನು ಹೊಂದಿದ್ದ ಸಾಂಪ್ರದಾಯಕ ಕಥನ, ಆನಂತರದ ಕಾದಂಬರಿಗಳು ಮೊದಲ ಮೆಟ್ಟಿಲುಗಳಾಗಿ ನಿಂತವು."[೮]

ಹೊಸ ಕನ್ನಡ ಸಾಹಿತ್ಯದ ಆಧುನಿಕತೆಯನ್ನು ಗುರುತಿಸುವಾಗ ಕಾದಂಬರಿ ಪ್ರಕಾರವನ್ನು ಪ್ರಧಾನವಾಗಿ ಪರಿಗಣಿಸಬೇಕಾಗುತ್ತದೆ. ಸಾಂಪ್ರದಾಯಕ ಕಥನ ಮತ್ತು ಆಧುನಿಕ ಕಥನ ಇವುಗಳ ನಡುವೆ ಅಗಾಧವಾದ ಅಂತರವಿರುವುದನ್ನು ಹಲವಾರು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ. ಮೊದಲೇ ಹೇಳಿದ ಹಾಗೆ, ಕನ್ನಡದ ಕಾದಂಬರಿಯ ಸೃಷ್ಟಿ ಐತಿಹಾಸಿಕ ಕಾದಂಬರಿಗಳಿಂದ ಪ್ರಾರಂಭವಾದದ್ದು ಆಕಸ್ಮಿಕವೇನಲ್ಲ. ಇತಿಹಾಸ ಕಾದಂಬರಿಯ ವಸ್ತುವಾಗುವುದೇ ಒಂದು ರೀತಿಯಲ್ಲಿ ಆಧುನಿಕತೆಗೆ ಸಂಕೇತ. ಬಿ. ವೆಂಕಟಾಚಾರ್ಯರು ಬಂಗಾಲಿಯಿಂದ ಬಂಕಿಮಚಂದ್ರರ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಆದರೆ ಬಂಕಿಮಚಂದ್ರರ ಕಾದಂಬರಿಗಳು ಪಾಶ್ಚಾತ್ಯ ಕಾದಂಬರಿಕಾರ ವಾಲ್ಟರ್ ಸ್ಕಾಟ್‌ನ ಕಾದಂಬರಿಗಳ ಪ್ರಭಾವದಿಂದ ಹುಟ್ಟಿಕೊಂಡಿದ್ದವುಗಳಾಗಿದ್ದವು. ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆ ಮೊದಲು ಸ್ಥಾಪನೆಯಾದುದು ಬಂಗಾಲದಲ್ಲಿ. ಅದರಿಂದಾಗಿ ಬಂಗಾಲಿ ವಿದ್ವಾಂಸರು ಇಂಗ್ಲೀಷ್ ಭಾಷೆಯನ್ನು ಮೊದಲು ಕಲಿತರು. ಜೊತೆಗೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದರು. ಒಂದು ರೀತಿಯಲ್ಲಿ ಹೊಸದರ ಬಗ್ಗೆ ಆಕರ್ಷಣೆ ಮತ್ತು ಭಾರತೀಯ ಸಂಸ್ಕೃತಿಯ ಹಳೆಯದರ ಬಗೆಗೆ ತಿರಸ್ಕಾರ ಇವೆರಡೂ ಅವರಲ್ಲಿ ಕಂಡುಬಂದಿತು. ಆ ಸಂದರ್ಭದಲ್ಲಿ ಕ್ರಿಶ್ಚಿಯನ್ ಮತಾಂತರ ಪದ್ಧತಿಯು ತೀವ್ರವಾಗಿ ನಡೆದಿತ್ತು. ಇಂತಹ ಸಂದರ್ಭದಲ್ಲಿ ಬಂಕಿಮಚಂದ್ರರ ಐತಿಹಾಸಿಕ ಕಾದಂಬರಿಗಳು ಸ್ಪಷ್ಟವಾಗಿದ್ದವು. ಭಾರತೀಯ ಇನ್ನೊಬ್ಬ ಲೇಖಕರೆಂದರೆ ಮರಾಠಿಯ ಹರಿನಾರಾಯಣ ಆಪ್ಟೆಯವರು. ಈ ಇಂಗ್ಲೀಷ್ ಶಿಕ್ಷಣ ಭಾರತದಲ್ಲಿ, ಬಂಗಾಲದ ನಂತರ ತೀವ್ರವಾಗಿ ಪ್ರವೇಶಮಾಡುವುದು ಮಹಾರಾಷ್ಟ್ರಕ್ಕೆ; ಆ ಸಮಯಕ್ಕೆ ಬ್ರಿಟಿಷರ ವಿರುದ್ಧ ಬಂಗಾಲ ಮತ್ತು ಮಹಾರಾಷ್ಟ್ರಗಳಲ್ಲಿ ಎರಡು ಯುದ್ಧಗಳು ನಡೆದಿದ್ದವು. ಮಹಾರಾಷ್ಟ್ರದಲ್ಲಿ ಪೇಶ್ವೆಯರ ಪತನದ ನಂತರ ಈಸ್ಟ್ ಇಂಡಿಯಾ ಕಂಪನಿಯು ತನ್ನ ಆಳ್ವಿಕೆಯನ್ನು ಸ್ಥಿರಗೊಳಿಸಿತ್ತು.

ಬಂಕಿಮಚಂದ್ರರ 'ಆನಂದಮಠ' ಮತ್ತು ಹರಿನಾರಾಯಣ ಆಪ್ಟೆಯವರ 'ಕಮಲ ಕುಮಾರಿ' ಇವೆರಡೂ ಆ ಸಂದರ್ಭದಲ್ಲಿ ಬಂದ ಪ್ರಾತಿನಿಧಿಕ ಕಾದಂಬರಿಗಳು. ಈ ಎರಡೂ ಕಾದಂಬರಿಗಳ ವಸ್ತು ದೇಶವನ್ನು ಇಂಗ್ಲೀಷರಿಂದ ಬಿಡುಗಡೆಗೊಳಿಸುವುದು. ಈ ಕಾದಂಬರಿಗಳಲ್ಲಿ ಬರುವ ಪಾತ್ರಗಳು ಅಂಥ ಉದ್ದೇಶಕ್ಕಾಗಿ ಹೋರಾಡುತ್ತವೆ.

ಸಮಕಾಲೀನವಾದ ಪಾರತಂತ್ರ್ಯದ ಪರಿಸ್ಥಿತಿಗೆ ಇತಿಹಾಸದಲ್ಲಿ ಸಮಾನವಾದ ಸನ್ನಿವೇಶಗಳನ್ನು ಹುಡುಕುವುದನ್ನು ಈ ಕಾದಂಬರಿಗಳಲ್ಲಿ ಕಾಣಬಹುದು. ಆಮೇಲೆ ಕಾದಂಬರಿಯ ಜೊತೆಯಲ್ಲಿಯೇ ಆತ್ಮಚರಿತ್ರೆ ಮತ್ತು ಜೀವನ ಚರಿತ್ರೆಗಳನ್ನು ಬರೆಯುವ ರೂಢಿ ಅದೇ ವೇಳೆಗೆ ಪ್ರಾರಂಭವಾಯಿತು. ಇವೆಲ್ಲಾ ಕನ್ನಡ ಕಥನ ಪರಂಪರೆಯಿಂದ ಅದರ ಸ್ವರೂಪವನ್ನು ಸ್ಪಷ್ಟಗೊಳಿಸುವಲ್ಲಿ ನೆರವಾದವು. ಇತಿಹಾಸ ಮತ್ತು ಕಾದಂಬರಿಯ ಕಥನ ಮಾರ್ಗಗಳು ಒಂದೇ ದಿಕ್ಕಿನಲ್ಲಿ ಸೃಷ್ಟಿಯಾದವು. ಭೌಗೋಳಿಕತೆ ಮತ್ತು ಇತಿಹಾಸ ಎರಡನ್ನೂ ಕೂಡಿಕೊಂಡೇ ಕಾದಂಬರಿ ಬೆಳೆಯಿತು.

ಐತಿಹಾಸಿಕ ಕಾದಂಬರಿಗಳಲ್ಲಿ ಕಾಲ್ಪನಿಕತೆ ಪ್ರಕಟಗೊಂಡಿತು. ಆ ಕಲ್ಪನೆಯು ಐತಿಹಾಸಿಕ ವ್ಯಕ್ತಿಗಳೊಡನೆ ಸಮೀಕರಣಗೊಂಡಿದೆ. ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ತಂದ ಗಳಗನಾಥರ ಕಾದಂಬರಿಗಳಲ್ಲಿ ಇಂಥಹ ಅನೇಕ ಕಾಲ್ಪನಿಕ ಪಾತ್ರಗಳು ಕಂಡುಬರುತ್ತವೆ. ಬೆಟಗೇರಿ ಕೃಷ್ಣಶರ್ಮರ 'ಮಲ್ಲಿಕಾರ್ಜುನ' ಕಾದಂಬರಿಯಲ್ಲಿ ಕೂಡ ಇಂಥ ಅನೇಕ ಕಾಲ್ಪನಿಕ ವ್ಯಕ್ತಿಗಳಿದ್ದಾರೆ. ಎಂ.ಎಸ್. ಪುಟ್ಟಣ್ಣನವರ 'ಮಾಡಿದುಣ್ಣೋ ಮಹರಾಯ' ಕಾದಂಬರಿಯಲ್ಲಿ ಬರುವ ಪಾತ್ರಗಳು ಸಹ ಇಂತಹ ಮಾದರಿಗಳಿಗೇ ಸೇರಿದವುಗಳಾಗಿವೆ. ಕಾಲ್ಪನಿಕತೆ ಮತ್ತು ವಾಸ್ತವಿಕತೆಯನ್ನು ಸಮೀಕರಿಸುವ ತಂತ್ರ ಕನ್ನಡ ಕಾದಂಬರಿಕಾರರಿಗೆ ಸಿದ್ಧಿಸಿದೆ. ಜೊತೆಗೆ ದೇವುಡು ಅವರು ತಮ್ಮ 'ಮಹಾಬ್ರಾಹ್ಮಣ' ಮತ್ತು 'ಮಹಾಕ್ಷತ್ರಿಯಾ' ಕಾದಂಬರಿಗಳಲ್ಲಿ ಪೌರಾಣಿಕತೆ ಮತ್ತು ಕಾಲ್ಪನಿಕತೆಯನ್ನು ಅಪೂರ್ವವಾಗಿ ಬೆರೆಸಿರುವುದನ್ನು ಕಾಣಬಹುದು. ಹೀಗೆ ಇತಿಹಾಸ, ಪುರಾಣ ಮತ್ತು ಕಾದಂಬರಿ ಈ ಮೂರೂ ಕಥನ ಮಾರ್ಗಗಳಾಗಿವೆ. ಮುಂದೆ ಕಾನೂರು ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು, ಮರಳಿಮಣ್ಣಿಗೆ, ಗ್ರಾಮಾಯಣದಂಥ ಕಾದಂಬರಿಗಳಲ್ಲಿ ವಾಸ್ತವದ ಸತ್ಯವನ್ನು ಹುಡುಕುವ ಪ್ರಯತ್ನ ದಟ್ಟವಾಗಿ ಕಂಡುಬರುತ್ತದೆ.

'ಕಾನೂರು ಹೆಗ್ಗಡಿತಿ' ವಾಸ್ತವ ಮಾರ್ಗದಲ್ಲಿ ಬಹುಮುಖ್ಯವಾಗಿ ಬಂದ ಪ್ರಾದೇಶಿಕ ಕಾದಂಬರಿ. ಕಥನ ಕಳೆಕಟ್ಟಲು ಭಾಷೆ ಉಪಭಾಷೆಗಳನ್ನು ಬಳಸಿಕೊಂಡು ಕಾದಂಬರಿಯ ಭಾಷಾ ಶರೀರ ನಿರ್ಮಿತವಾಗಿದೆ. ಈ ಮಾತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಸಂದರ್ಭಕ್ಕೂ ನಿಜ. ಈ ಎರಡೂ ಕಾದಂಬರಿಗಳು ಕನ್ನಡದ ಶ್ರೇಷ್ಠ ಕಾದಂಬರಿಗಳ ಸಾಲಿಗೆ ಈಗಾಗಲೇ ಸೇರಿವೆ. ಇವುಗಳಲ್ಲಿನ ಪ್ರಾದೇಶಿಕತೆಯ ಸತ್ವ, ಪಾತ್ರರಚನೆಯ ವೈವಿಧ್ಯ ಅದ್ಭುತವಾದ ವಾಸ್ತವತೆ ಮತ್ತು ನಿಸರ್ಗ ವರ್ಣನೆಗಳಲ್ಲಿ ಕಂಡುಬರುವ ಕಥನದ ಗುಣವನ್ನು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ. ಹೆಗ್ಗಡಿತಿಯ ಹೂವಯ್ಯನ ಪಾತ್ರ ಸೃಷ್ಟಿ ನವೋದಯ ಕಾಲದ ಪರಿವರ್ತನೆಯ ಚೈತನ್ಯದ ಪ್ರತೀಕ. ಆತ ಮನುಷ್ಯ ಮನುಷ್ಯರ ಸಂಬಂಧಗಳು ಪವಿತ್ರವಾಗಬೇಕೆಂದು ಆಶಿಸುತ್ತಾನೆ. ಎರಡೂ ಕಾದಂಬರಿಗಳಲ್ಲಿಯ ನಿಸರ್ಗದ ವರ್ಣನೆ ಸ್ವತಂತ್ರವಾದ ಶಕ್ತಿಯಿಂದ ಕೂಡಿದೆ. ಮನುಷ್ಯ ಮತ್ತು ಪ್ರಕೃತಿಯ ಸಂಬಂಧ ಹೊಸ ಸಂಸ್ಕೃತಿಯನ್ನು ಸೃಷ್ಟಿಸುವಲ್ಲಿ ಪ್ರವೃತ್ತವಾಗಿದೆ. ಹೂವಯ್ಯ ವಿದ್ಯಾವಂತ, ಸುಶಿಕ್ಷಿತ ಹಾಗೂ ಸಂವೇದನಾಶೀಲ ವ್ಯಕ್ತಿ. ಈ ಪಾತ್ರದ ವ್ಯಕ್ತಿತ್ವಕ್ಕೆ ಒಂದು ಸ್ವತಂತ್ರವಾದ ಅನನ್ಯತೆ ಇದೆ.

ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮುಕುಂದಯ್ಯನಿಗೆ ಹೂವಯ್ಯನಲ್ಲಿರುವ ಸಂಕಲ್ಪ ಶಕ್ತಿಯಿಲ್ಲ; ಹೂವಯ್ಯನದು ಒಂದು ರೀತಿಯಲ್ಲಿ ತಾತ್ವಿಕ ನಿಲುವಿನ ಸ್ವಭಾವ. ಆದರೆ ಮುಕುಂದಯ್ಯನದು ತನ್ನ ಅನುಭವಗಳನ್ನು ಇತರರೊಡನೆ ಹಂಚಿಕೊಳ್ಳುವ ಸ್ವಭಾವ. ಪರಿಸರದ ಪುನರ್ ಸೃಷ್ಟಿಯಲ್ಲಿ 'ಕುವೆಂಪು ಹೆಗ್ಗಡಿತಿ'ಯಲ್ಲಿ

ಸಾಧಿಸಿರುವ ಸಾಧನೆ ದೊಡ್ಡದು. ಮಲೆನಾಡಿನ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಐತಿಹಾಸಿಕ ದೃಷ್ಟಿಯಿಂದ ಗ್ರಹಿಸಿರುವ ಕುವೆಂಪು ಅವರ ಸಂವೇದನೆ ಅಭೂತಪೂರ್ವವಾದುದು. ಮುತ್ತಳ್ಳಿ, ಕಾನೂರು, ಕೆಳಕಾನೂರು, ನೆಲ್ಲುವಳ್ಳಿ, ಸೀತೆಮನೆ ಈ ಪಂಚಗ್ರಾಮಗಳನ್ನು ಕೇಂದ್ರವಾಗಿಟ್ಟುಕೊಂಡು ಕಥನವನ್ನು ಬೆಳೆಸಲಾಗಿದೆ. ಸೀತೆಮನೆ ಸಿಂಗಪ್ಪಗೌಡರು 'ಜೈಮಿನಿ ಭಾರತ'ವನ್ನು ವಾಚನ ಮಾಡಿದರೆ ಹೂವಯ್ಯ ಕವಿಶೈಲದಲ್ಲಿ ಕೂತು ಪ್ರಕೃತಿಯೊಡನೆ ತಾದಾತ್ಮ್ಯ ಸಾದಿಸುವನು. ಹೆಗ್ಗಡಿತಿಯ ಅನೇಕ ಪಾತ್ರಗಳು ದೈವ ಮತ್ತು ಮೌಢ್ಯ ಎರಡನ್ನು ನಂಬುತ್ತವೆ. ಮದುವೆಯಾದ ಸೀತೆ ಗಂಡನಾದ ರಾಮಯ್ಯನೊಡನೆ ಸಹಕರಿಸುವುದಿಲ್ಲ. ಆಗ ರಾಮಯ್ಯ ಚಂದ್ರಯ್ಯಗೌಡ ಇಬ್ಬರೂ ಸೇರಿ ಈ ದೈವ ಮತ್ತು ಮೌಢ್ಯಗಳೆರಡನ್ನೂ ಪ್ರಯೋಗಿಸುವುದನ್ನು ಕಾಣಬಹುದು.

'ಮದುಮಗಳು' ಕಾದಂಬರಿಯ ಪ್ರಪಂಚ ಕೂಡ ಹೀಗೇ ಇದೆ. ಕೋಣೂರು, ಹಳೆಮನೆ, ಸಿಂಬಾವಿಗಳಿಗೂ ಮತ್ತು ಕಾನೂರು, ಮುತ್ತಳ್ಳಿ, ಸೀತೆಮನೆಗೂ ಅಂತಹ ವ್ಯತ್ಯಾಸಗಳಿಲ್ಲ. ಆದರೆ ಕಾದಂಬರಿಯ ನಿಲುವು ಮಾತ್ರ ಭಿನ್ನವಾದುದು. ಹೆಗ್ಗಡಿತಿಯಲ್ಲಿ ಕಥೆಯಿದ್ದರೂ ಕಥನ ತಂತ್ರಕ್ಕೆ ನಾವೀನ್ಯತೆ ಇಲ್ಲ. ಆದರೆ ಮದುಮಗಳು ಕಾದಂಬರಿಯಲ್ಲಿ ಅನೇಕ ಉಪಾಯಗಳಿವೆ. ಹಳೆಯ ಮತ್ತು ಹೊಸ ಜಗತ್ತಿನ ಸಂಘರ್ಷವಿದೆ. ಕಾದಂಬರಿಯ ಅಂತರ್ಯದಲ್ಲಿ ಬಂಡಾಯದ ಮನೋಭಾವ ಮಡುಗಟ್ಟಿದೆ. ಈ ಕಾದಂಬರಿಯಲ್ಲಿ ಜೋಡಿ ವ್ಯಕ್ತಿಗಳ ಕಥನ ದಟ್ಟವಾಗಿ ನಿರೂಪಿತವಾಗಿವೆ.

ಕಾದಂಬರಿಯಲ್ಲಿ ಮೇಗರವಳ್ಳಿಯ ಹೆದ್ದಾರಿಯಲ್ಲಿ ಬರುವ ಅಂತಕ್ಕನ ಕಾಫಿ ಹೋಟೆಲು ಆಧುನಿಕತೆಗೆ ಒಂದು ಪ್ರತೀಕವಾಗಿದೆ. ತೇಜಸ್ವಿಯವರ 'ಜುಗಾರಿ ಕ್ರಾಸ್' ಕಾದಂಬರಿಗೆ ಅಂತಕ್ಕನ ಹೋಟೆಲು ಒಂದು ಪ್ರೇರಕ ಶಕ್ತಿಯಾಗಿದೆ ಎಂದು ಊಹಿಸಬಹುದು. ಈ ಅಂತಕ್ಕನ ಹೋಟೆಲಿನ ಪಕ್ಕ ಒಂದು ಶಾಲಾ ಕಟ್ಟಡ ತಲೆ ಎತ್ತುತ್ತದೆ. ಇದೂ ಕೂಡ ಆಧುನಿಕತೆಗೆ ಸಂಕೇತವಾಗಿದೆ. ಶಾಲೆಯ ಪಕ್ಕ ಒಂದು ಬಾವಿಯನ್ನು ತೋಡಿಸಲಾಗುತ್ತದೆ. ಆದರೆ ಅಂತಕ್ಕನ ಮಗಳು ಕಾವೇರಿ ದೇವಯ್ಯನ ಪ್ರೇಮಕ್ಕೆ ಸಿಕ್ಕಿ ಕೊನೆಗೆ ಆಕೆ ಉಂಗುರ ಪಡೆಯುವ ಆಸೆಯಿಂದ ಚೀಂಕ್ರ ಮತ್ತು ಅಜ್ಜೀಸಾಬಿಯರ ಅತ್ಯಾಚಾರಕ್ಕೆ ಒಳಗಾಗಿ ಅವಮಾನ ತಡೆಯಲಾಗದೆ ಅದೇ ಶಾಲೆಯ ಬಾವಿಗೆ ಬಿದ್ದು ಸಾಯುತ್ತಾಳೆ. ಏನೂ ಅರಿಯದ ಮುಗ್ಧ ಕಾವೇರಿಯನ್ನು ಉಂಗುರದ ಪ್ರಸಂಗವು ಬಲಿತೆಗೆದುಕೊಳ್ಳುತ್ತದೆ. ಕೊನೆಗೆ ಅಂತಕ್ಕನ ಹೋಟೆಲು ವಿದ್ಯಾರ್ಥಿಗಳ ವಸತಿನಿಲಯವಾಗುತ್ತದೆ. ಗುತ್ತಿಯ ನಾಯಿ ಹೊಳೆಯಲ್ಲಿ ಮುಳುಗಿ ಮಾಯವಾಗುತ್ತದೆ. ಗುತ್ತಿ ತನ್ನ ಜೊತೆಗಾತಿ ತಿಮ್ಮಿಯೊಡನೆ ದೇಶಾಂತರ ಹೋಗುತ್ತಾನೆ. ಹೀಗೆ 'ಮದುಮಗಳು' ಕಾದಂಬರಿಯಲ್ಲಿ ಬರುವ ಪ್ರಾಣಿಜಗತ್ತು ಹಾಗೂ ಮುಗ್ಧ ಮಹಿಳೆ ಮತ್ತು ಮಕ್ಕಳ ಜಗತ್ತು ದುರಂತಕ್ಕೆ ಒಳಗಾಗುವುದನ್ನು ಕಾಣುತ್ತೇವೆ. ಕುವೆಂಪು ಅವರಿಗೆ ಕಥನಕಲೆ ಜನ್ಮಜಾತವಾದ ಕಲೆ. ಗದ್ಯದಲ್ಲೇ ಆಗಲಿ ಪದ್ಯದಲ್ಲಿಯೇ ಆಗಲಿ ಕಥನ ಅವರಲ್ಲಿ ತನ್ನ ರಹಸ್ಯಗಳನ್ನೆಲ್ಲ ಬಿಚ್ಚಿಡುತ್ತದೆ. ಅವರ ಕಥನಕಲೆ ಮಹತ್ವದ್ದಾಗಿದೆ.

ಕನ್ನಡ ಕಥನ ಪರಂಪರೆಗೆ ಶಿವರಾಮ ಕಾರಂತರ ಕೊಡುಗೆ ಅಪಾರ. ಇವರು ಸುಮಾರು ನಾಲ್ವತ್ತಕ್ಕೂ ಹೆಚ್ಚು ಕಾದಂಬರಿಗಳ ಮೂಲಕ ಕಥನದ ವೈವಿಧ್ಯತೆಯನ್ನು ವಿಸ್ತರಿಸಿದ್ದಾರೆ. ಇವರ ಕಾದಂಬರಿಗಳಲ್ಲಿ ಸಮಕಾಲೀನ ಜೀವನದ ಬಗ್ಗೆ ಇರುವ ಗಾಢ ಶ್ರದ್ಧೆ ಎದ್ದುಕಾಣುತ್ತದೆ. ಕಾರಂತರು ತಮ್ಮದೇ ಆದ ದೃಷ್ಟಿಕೋನದ ಮೂಲಕ ಬದುಕನ್ನು

ಅರ್ಥೈಸಿದ್ದಾರೆ. ವೈವಿಧ್ಯಮಯವಾದ ಬದುಕಿಗೆ ಒಂದು ಸುಸಂಗತಿಯನ್ನು ತಮ್ಮ ವ್ಯಕ್ತಿತ್ವದ ಮೂಲಕವೆ ನಿರ್ಮಾಣ ಮಾಡುವುದು ಕಾರಂತರ ವಿಶೇಷ ತತ್ವವಾಗಿದೆ. ಕಾರಂತರು ಪ್ರಧಾನವಾಗಿ ಕಾದಂಬರಿಯನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡಿದ್ದಾರೆ. ಅವರ ಈ ಅಭಿವ್ಯಕ್ತಿಯಲ್ಲಿ ಕಥನವೇ ಪ್ರಧಾನವಾಗಿದೆ. ಅದರಲ್ಲಿ ಸಮಕಾಲೀನತೆಯನ್ನು ಇತಿಹಾಸವಾಗಿಸುವಲ್ಲಿ ಸೂಕ್ಷ್ಮತೆಯಿಂದ ನಿರ್ವಹಿಸಿದ್ದಾರೆ. ಕಾದಂಬರಿಯಲ್ಲಿನ ಕಥನ ಅವರಿಗೆ ಸಮರ್ಥವಾಗಿ ಒಲಿದುಬಂದಿದೆ. ಅವರ 'ಚೋಮನದುಡಿ', 'ಬೆಟ್ಟದ ಜೀವ', 'ಅಳಿದ ಮೇಲೆ', 'ಮೈಮನಗಳ ಸುಳಿಯಲ್ಲಿ', 'ಸರಸಮ್ಮನ ಸಮಾಧಿ', 'ಮರಳಿ ಮಣ್ಣಿಗೆ' -ಮುಂತಾದ ಕಾದಂಬರಿಗಳು ಕಥನ ಪರಂಪರೆಗೆ ಉಜ್ವಲ ಕೊಡುಗೆಗಳಾಗಿವೆ. ಚೋಮನ ದುಡಿಯ ಚೋಮ, ಮರಳಿ ಮಣ್ಣಿಗೆಯ ಪಾರ್ವತಿ, ಅಳಿದ ಮೇಲೆ ಕಾದಂಬರಿಯ ಯಶವಂತರಾಯ, ಬೆಟ್ಟದ ಜೀವದ ಗೋಪಾಲಯ್ಯ ಇವರು ವ್ಯಕ್ತಿಚಿತ್ರಗಳಾಗಿ ಕಂಡುಬರುತ್ತಾರೆ. ಇವರೆಲ್ಲ ನಿಜಜೀವನದಲ್ಲಿ ಹುಟ್ಟಿದ ಪಾತ್ರಗಳಾಗಿವೆ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಮೂರು ತಲೆಮಾರುಗಳ ಇತಿಹಾಸವನ್ನು ಕಥನವನ್ನಾಗಿ ಮಾಡಲಾಗಿದೆ. 'ಚೋಮನದುಡಿ'ಯಲ್ಲಿ ಚೋಮ ಮತ್ತು ಅವನ ದುಡಿಯ ಸಂಬಂಧಗಳನ್ನು ಅವಿಭಾಜ್ಯವಾಗಿ ಚಿತ್ರಿಸಲಾಗಿದೆ. ಚೋಮ ನೆಲದ ಅಕಾಂಕ್ಷೆಯಿಂದ ಹೋರಾಡುತ್ತಾನೆ. ಆದರೆ ಅವನಿಗೆ ಭೂಮಿ ದಕ್ಕುವುದಿಲ್ಲ. ಚೋಮ ಮತ್ತು ಗೋಪಾಲಯ್ಯ ಒಂದಕ್ಕೊಂದು ವಿರುದ್ಧವಾದ ವ್ಯಕ್ತಿತ್ವವುಳ್ಳವರು. ಚೋಮ ಪರಾವಲಂಬಿ, ಗೋಪಾಲಯ್ಯ ಸ್ವಾವಲಂಬಿ. ಚೋಮ ಭೂಮಿಗಾಗಿ ಪರದಾಡಿದರೆ ಗೋಪಾಲಯ್ಯ ಕಾಡನ್ನು ಕಡಿದು ಭೂಮಿಯನ್ನು ಪಡೆದುಕೊಂಡು ತನ್ನ ಸ್ವಾತಂತ್ರ್ಯವನ್ನು ಸ್ಥಾಪಿಸುತ್ತಾನೆ. ಇಬ್ಬರೂ ಜಾತಿಯಲ್ಲಿ ಬೇರೆ ಬೇರೆ. ಗೋಪಾಲಯ್ಯ ಬ್ರಾಹ್ಮಣನಾದರೆ ಚೋಮ ಕೀಳುಜಾತಿಯವನು. ಇಬ್ಬರಿಗೂ ಭೂಮಿಯ ಒಡೆತನದ ಪ್ರಶ್ನೆ ಎದುರಾಗಿದೆ. 'ಅಳಿದ ಮೇಲೆ' ಕಾದಂಬರಿಯ ಯಶವಂತರಾಯರದು ಹೊಸಬಗೆಯ ವ್ಯಕ್ತಿತ್ವ. ಅವರು ತೀರಿಕೊಂಡ ಮೇಲೆ ನಿರೂಪಕ ಅವರ ವ್ಯಕ್ತಿತ್ವವನ್ನು ಪುನಾರಚಿಸಲು ತೊಡಗುತ್ತಾನೆ. ಮನೋವೈಜ್ಞಾನಿಕ ನೆಲೆಯಲ್ಲಿ ಯಶವಂತರಾಯರ ವ್ಯಕ್ತಿತ್ವವನ್ನು ವಿವರಿಸಲು ಕಾದಂಬರಿ ತೊಡಗುತ್ತದೆ. ಕಾರಂತರ ಎಲ್ಲಾ ಕಾದಂಬರಿಗಳು ಮುಖ್ಯವಾಗಿ ಕಥೆಯನ್ನು ಹೇಳುತ್ತವೆ. ಕಥೆಯ ಬೆಳವಣಿಗೆಯ ಕ್ರಮವನ್ನು ಚಾಚುತಪ್ಪದೆ ಅನುಸರಿಸಿಕೊಂಡು ಹೋಗುತ್ತವೆ. ಬದುಕನ್ನು ಪ್ರಯೋಗಶೀಲತೆಗೆ ಒಡ್ಡಿ ಕಥನದ ಅರ್ಥಪರಂಪರೆಗಳನ್ನು ಸೃಷ್ಟಿಸುತ್ತವೆ.

ನವೋದಯ ಕಥಾಸಾಹಿತ್ಯದಲ್ಲಿ ಮಾನವೀಯತೆ ಮತ್ತು ಆದರ್ಶ ವ್ಯಕ್ತಿತ್ವದ ನಿರ್ಮಾಣ ಪ್ರಧಾನವಾಗಿ ಕಂಡುಬಂದರೆ, ಪ್ರಗತಿಶೀಲ ಲೇಖಕರಾದ ಅನಕೃ, ನಿರಂಜನ, ಚದುರಂಗ, ಬಸವರಾಜ ಕಟ್ಟೀಮನಿ ಅವರ ಕಾದಂಬರಿಗಳಲ್ಲಿ ಕಥನದ ಗುಣ ಪ್ರಧಾನವಾಗಿದೆ. ಮಧ್ಯಮವರ್ಗದ ಓದುಗವಲಯವನ್ನು ವಿಸ್ತರಿಸುವಲ್ಲಿ ಈ ಪ್ರಗತಿಶೀಲ ಲೇಖಕರ ಕಥನ ಪರಿಣಾಮಕಾರಿಯಾಗಿ ಕೆಲಸ ಮಾಡಿದೆ. ನಿರಂಜನರ 'ಚಿರಸ್ಮರಣೆ', 'ಮೃತ್ಯುಂಜಯ', ಚದುರಂಗರ 'ಸರ್ವಮಂಗಳ', 'ವೈಶಾಖ', ಕಟ್ಟೀಮನಿಯವರ 'ಜ್ವಾಲಾಮುಖಿಯ ಮೇಲೆ', 'ಮಾಡಿಮಡಿದವರು', ಅನಕೃರವರ 'ಸಂಧ್ಯಾರಾಗ', 'ಜೀವನಕಲೆ' -ಮುಂತಾದ ಕಾದಂಬರಿಗಳು ಕನ್ನಡ ಕಥನ ಪರಂಪರೆಗೆ ಮಹತ್ವದ ಕೊಡುಗೆಗಳಾಗಿವೆ.

ಕನ್ನಡದ ನವ್ಯ ಕಥನ ಆಧುನಿಕ ಸಂವೇದನೆಯಿಂದ ಕೂಡಿದೆ. ವೈಯಕ್ತಿಕ ಸಮಸ್ಯೆಯನ್ನು ಸಾಮಾಜಿಕ ನೆಲೆಯಿಂದ ವಿಶ್ಲೇಷಿಸುವ ನೆಲೆ ನವ್ಯ ಕಾದಂಬರಿಗಳಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಆಧುನಿಕ ಮನುಷ್ಯ ಮತ್ತು ಸಮಾಜ ಇವುಗಳ ನಡುವಿನ ಬಿಕ್ಕಟ್ಟುಗಳನ್ನು ಹಾಗೂ ತಲ್ಲಣಗಳನ್ನು ವಿಶ್ಲೇಷಿಸುವ ನವ್ಯಕಥನ ಕುತೂಹಲಕಾರಿಯಾಗಿದೆ. ಚಂದ್ರಶೇಖರ ಕಂಬಾರರ 'ಸಿಂಗಾರೆವ್ವ ಮತ್ತು ಅರಮನೆ', ಶಂಕರ ಮೊಕಾಶಿಯವರ 'ಗಂಗವ್ವ ಮತ್ತು ಗಂಗಾಮಾಯಿ', ಯಶವಂತ ಚಿತ್ತಾಲರ 'ಶಿಕಾರಿ', ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ 'ಜುಗಾರಿ ಕ್ರಾಸ್', ಪಿ.ಲಂಕೇಶರ 'ಮುಸ್ಸಂಜೆಯ ಕಥಾಪ್ರಸಂಗ', ಯು.ಆರ್.ಅನಂತಮೂರ್ತಿಯವರ 'ಅವಸ್ಥೆ', ಶಾಂತಿನಾಥ ದೇಸಾಯಿಯವರ 'ಓಂಣಮೋ', ಎಸ್.ಎಲ್.ಭೈರಪ್ಪನವರ 'ಗೃಹಭಂಗ', ದೇವನೂರು ಮಹಾದೇವ ಅವರ 'ಕುಸುಮಬಾಲೆ' -ಈ ಕಾದಂಬರಿಗಳಲ್ಲಿ ಕನ್ನಡ ಕಥನ ಪರಂಪರೆಯು ಅನೇಕ ಪ್ರಯೋಗಶೀಲತೆಯ ಮೂಲಕ ಪ್ರಕಟವಾಗಿದೆ. ಕನ್ನಡ ಕಾದಂಬರಿಗಳಲ್ಲಿ ೨೦ನೆಯ ಶತಮಾನದ ಕನ್ನಡದ ಬದುಕು ಅನೇಕ ಸಂಘರ್ಷಾತ್ಮಕ ನೆಲೆಗಳಲ್ಲಿ ಕಾಣಿಸಿಕೊಂಡಿದೆ. ಆಧುನಿಕ ಮನುಷ್ಯನ ಅನನ್ಯತೆಯ ಹುಡುಕಾಟವು ಕನ್ನಡ ಕಥನ ಪರಂಪರೆಯಲ್ಲಿ ನಿರಂತರವಾಗಿ ಹಾಗೂ ದಟ್ಟವಾಗಿ ಪ್ರಕಟವಾಗಿದೆ. ಕನ್ನಡ ಕಥನವು ಸಮಕಾಲೀನ ಬದುಕನ್ನು ಇತಿಹಾಸವಾಗಿಸುವಲ್ಲಿ ಮತ್ತು ಆ ಮೂಲಕ ಸಾಂಸ್ಕೃತಿಕ ಮೌಲ್ಯಗಳನ್ನು ನಿರ್ಮಿಸುವಲ್ಲಿ ಪ್ರಮುಖ ಪ್ರಕಾರವಾಗಿ ತನ್ನ ಜವಾಬ್ದಾರಿಯನ್ನು ಅತ್ಯಂತ ಅರ್ಥಪೂರ್ಣವಾಗಿ ನಿರ್ವಹಿಸಿದೆ.



## ಅಡಿಟಿಪ್ಪಣಿ

೧. ಕೀರ್ತಿನಾಥ ಕುರ್ತಕೋಟಿ, ಸಂಸ್ಕೃತಿ ಸ್ಪಂದನ, ಕಥೆಯ ಕಥೆ

೨. ವಿಜಯ ಡಿ, ಸಂಪ್ರತಿ, ವಿಚಾರ ವಿಮರ್ಶೆ, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪುಟ : ೧೯

೩. ಹಂಪ ನಾಗರಾಜಯ್ಯ, ವಡ್ಡಾರಾಧನೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೬೮, ಪುಟ : ೫೭ - ೫೮

೪. ಅಶೋಕ ಟಿ.ಪಿ, ಸಾಹಿತ್ಯ ಸಂದರ್ಭ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೧, ಪುಟ : ೧

೫. ಮುಗಳಿ ರಂ.ಶ್ರೀ, ಸಾಹಿತ್ಯೋಪಾಸನೆ, ಶಾರದಾಮಂದಿರ ಪ್ರಕಾಶನ, ಮೈಸೂರು, ೧೯೫೫, ಪುಟ : ೪೭ - ೪೮

೬. ನಾಗರಾಜ್ ಡಿ.ಆರ್, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೬

೭. ಆಮೂರ ಜಿ.ಎಸ್, ಕನ್ನಡ ಕಥನ ಸಾಹಿತ್ಯ : ಕಾದಂಬರಿ, ಶ್ರೀ ಹರಿ ಪ್ರಕಾಶನ, ಧಾರವಾಡ, ೧೯೯೪, ಪುಟ : ೧೫ - ೧೬

೮. ಶ್ರೀಕಂಠ ಕೂಡಿಗೆ, ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು, (ಸಂ) ವಿವೇಕ ರೈ ಬಿ.ಎ, ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ೧೯೮೭, ಪುಟ : ೬೧



೩

# ವಸಾಹತುಶಾಹಿ ಸಂಸ್ಕೃತಿಯ ಮತಾಂತರ ಪ್ರಕ್ರಿಯೆಗೆ ಕುವೆಂಪು ಕಥನ ತೋರಿದ ಪ್ರತಿಕ್ರಿಯೆ

## ೧. ವಸಾಹತುಶಾಹಿ ಮತ್ತು ಮತಾಂತರ

ಹತ್ತೊಂಬತ್ತು ಮತ್ತು ಇಪ್ಪತ್ತನೇ ಶತಮಾನದ ಭಾರತದ ಸಾಂಸ್ಕೃತಿಕ ಬದುಕನ್ನು ವಸಾಹತು ಸಂದರ್ಭವು ಅನೇಕ ಸ್ಥಿತ್ಯಂತರಗಳಿಗೆ ಗುರಿಪಡಿಸಿತು. ಈ ಕಾಲಮಾನದಲ್ಲಿ ವಸಾಹತು ಸಂಸ್ಕೃತಿಯ ಸಂಪರ್ಕದಿಂದ ಅನೇಕ ಮಟ್ಟಗಳಲ್ಲಿ ಸಾಂಸ್ಕೃತಿಕ ಸಂಘರ್ಷವೊಂದು, ಮುಖಾಮುಖಿಯಾಗುವುದನ್ನು ಕಾಣುತ್ತೇವೆ. ಅಂದರೆ ಹೊರಗಿನ ಶಕ್ತಿಗಳ ಧಾರೆ ಭಾರತೀಯ ಜೀವನವನ್ನು ಒಂದು ಬಗೆಯ ಆಧುನಿಕ ವಿಲಕ್ಷಣ ಪ್ರಭಾವ ಮತ್ತು ತಲ್ಲಣಗಳಿಗೆ ಗುರಿಪಡಿಸಿತು. ನಮ್ಮ ಸಾಮಾಜಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ಹಾಗೂ ವ್ಯಷ್ಟಿ ಮತ್ತು ಸಮಷ್ಟಿ ಬದುಕಿನಲ್ಲಿ ಹೊಸ ವಿಚಾರ ಮತ್ತು ಆಲೋಚನೆಗಳ ಗಾಳಿ ಬೀಸತೊಡಗಿ ಅನೇಕ ಬದಲಾವಣೆಗಳಿಗೆ ಎಡೆಮಾಡಿಕೊಟ್ಟಿತು.

ಈ ಹಿನ್ನೆಲೆಯಲ್ಲಿ ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಈ ಎರಡೂ ಕಾದಂಬರಿಗಳು ವಸಾಹತು ಅನುಭವವನ್ನು ಮುಖ್ಯ ಭಿತ್ತಿಯಾಗಿ ಹೊಂದಿದ್ದು ಈ ಶತಮಾನದ ಮುಖ್ಯ ಸಾಂಸ್ಕೃತಿಕ ದಾಖಲೆಗಳಂತಿವೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ರಚನೆಯ ಕಾಲ ಸ್ವಾತಂತ್ರ್ಯಾನಂತರದ್ದಾದರೂ, ಇಡೀ ಕಥನ ನಡೆಯುವುದು ಸಂಪೂರ್ಣವಾಗಿ ವಸಾಹತು ಸಂಸ್ಕೃತಿಯ ಪ್ರಾದೇಶಿಕ ಹಾಗೂ ರಾಷ್ಟ್ರೀಯ ಬದುಕಿನಲ್ಲಿ ನೆಲೆಯೂರುತ್ತಿದ್ದ ಸಂದರ್ಭದಲ್ಲಿ. ಹೀಗಾಗಿ ರಾಷ್ಟ್ರ ಹಾಗೂ ಸ್ಥಳೀಯ ವ್ಯಷ್ಟಿ ಮತ್ತು ಸಮಷ್ಟಿ ಬದುಕಿನ ಬದಲಾವಣೆಗಳಿಗೆ ಕಾರಣವಾಗುತ್ತಿರುವ ಸಾಮಾಜಿಕ, ರಾಜಕೀಯ ಸಂಗತಿಗಳು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಉದ್ದಕ್ಕೂ ಬರುವುದನ್ನು ಕಾಣುತ್ತೇವೆ. ಬ್ರಿಟಿಷ್ ಆಳ್ವಿಕೆಯ ಸಂದರ್ಭದಲ್ಲಿ ಕ್ರಿಶ್ಚಿಯನ್ ಪಾದ್ರಿಗಳು ಹೊತ್ತು ತಂದ ಸ್ಕೂಲು, ಆಸ್ಪತ್ರೆ, ಬೈಬಲ್ಲು, ಬೈಸಿಕಲ್ಲು, ಲಾಟೀನು - ಇವು ಮಲೆನಾಡಿಗೆ ಪ್ರವೇಶಿಸಿ ಜನರ ಬದುಕಿನಲ್ಲಿ ಹೊಸ ವಿಸ್ಮಯಗಳನ್ನು ಹುಟ್ಟು ಹಾಕಿದ ಕಾಳಜಿಗಳು 'ಮದುಮಗಳು' ಕಾದಂಬರಿಯಲ್ಲಿ ಮುಖ್ಯ ಪಾತ್ರವಹಿಸುತ್ತವೆ.

ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದ ಅಸಂಖ್ಯ ಸಾಂಸ್ಕೃತಿಕ ದಾಖಲೆಗಳಿಗೆ ಈ ಕೃತಿ ಆಕರವಾಗುತ್ತದೆ. ಅಂತೆಯೇ ಎರಡು ಸಂಸ್ಕೃತಿಗಳ ಸಂಪರ್ಕದಿಂದ ಈ ಬಗೆಯ ಸಂಘರ್ಷಾತ್ಮಕ ಬದುಕು ಸ್ಥಿತ್ಯಂತರಗೊಳ್ಳುತ್ತಿರುವುದನ್ನು ಚಿತ್ರಿಸುತ್ತದೆ. ಈ ಚಿತ್ರಣಗಳು ಬಹುಮುಖ್ಯ ಆಯಾಮವಾಗಿ ಮೈ ತಳೆಯುತ್ತದೆ. ಈ ಆಯಾಮಗಳು ಹಾಗೂ ಈ ಕಾಲಮಾನದ ಆಗು - ಹೋಗುಗಳನ್ನು, ಅವು ವ್ಯಷ್ಟಿ ಮತ್ತು ಸಮಷ್ಟಿ ಬದುಕಿನಲ್ಲಿ ಉಂಟುಮಾಡಿದ ಪ್ರಭಾವ ಪರಿಣಾಮಗಳನ್ನು ಕುವೆಂಪು ಕಥಾಸಾಹಿತ್ಯವೆಲ್ಲವೂ ಮುಖ್ಯ ಭಿತ್ತಿಯಾಗಿ ಚಿಂತಿಸುತ್ತದೆ.

ಮತಾಂತರದ ಪ್ರಕ್ರಿಯೆ ಅತ್ಯಂತ ಪ್ರಾಚೀನ ಕಾಲದಿಂದಲೂ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಮುಖ್ಯ ನೆಲೆಯಾಗಿದೆ. ಭಿನ್ನ ಧರ್ಮಗಳು ಮುಖಾಮುಖಿಯಾಗುವ ಸಂದರ್ಭದಲ್ಲಿ ಈ ಪ್ರಕ್ರಿಯೆ ತನ್ನ ಧರ್ಮ ಮತ್ತು ರಾಜಕೀಯ ಯಂತ್ರವನ್ನು ನೆಲೆಯೂರಲು ಒಂದು ಅಸ್ತ್ರವಾಗಿ ಬಳಕೆಯಾಗುವುದನ್ನು ಕಾಣುತ್ತೇವೆ. ಅಂದರೆ ಈ ಮತಾಂತರ ಪ್ರಕ್ರಿಯೆ ಭಿನ್ನ ಧರ್ಮಗಳು ತಮ್ಮ ತಮ್ಮ ಧರ್ಮೀಯರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಲು ಮತ್ತು ತಮ್ಮ ರಾಜಕೀಯ ಪ್ರಾಬಲ್ಯವನ್ನು ಗಟ್ಟಿಯಾಗಿ ನೆಲೆಯೂರಲು ನಡೆಸುವ ರಾಜಕೀಯ ಹುನ್ನಾರ. ಇಂಥ ಹುನ್ನಾರಗಳು ಮೇಲುನೋಟಕ್ಕೆ ಹೇಗೆ ಕಂಡರೂ ಆಂತರಿಕವಾಗಿ ಯಾವ ಧಾರ್ಮಿಕ ನೆಲೆಯಿಂದ ನೋಡಿದರೂ, ಆಕ್ರಮಣ ಕಾರಿಯಾಗಿಯೇ ಮೂಲಭೂತವಾದದ ಮತೀಯ ನೆಲೆಯಿಂದಲೇ ಮತಾಂತರ ಪ್ರಕ್ರಿಯೆ ನಿರಂತರವಾಗಿ ನಡೆದಿದೆ ಎಂದರೆ ಉತ್ಪ್ರೇಕ್ಷೆಯಲ್ಲ. ಮತಾಂತರ ಪ್ರಕ್ರಿಯೆಗೆ ಧರ್ಮವೊಂದು ಕಂಡುಕೊಳ್ಳುವ ದಾರಿಗಳು, ಒಳಸಂಚುಗಳು ಅನೇಕ. ಇಂತಹ ಒಳಸಂಚುಗಳ ಹಿಂದೆ ಇರುವ ಮನೋಧರ್ಮಗಳು ಅಮಾನವೀಯವಾಗಿಯೂ, ನೋವಿನ ಸಂಗತಿಗಳಾಗಿಯೂ ಪ್ರಭಾವ ಬೀರುವುದನ್ನು ಅನೇಕ ಸಾಂಸ್ಕೃತಿಕ ದಾಖಲೆಗಳು ಸ್ಪಷ್ಟಪಡಿಸುತ್ತವೆ. ಬ್ರಿಟಿಷ್ ಸಾಮ್ರಾಜ್ಯಶಾಹಿ ಸಂಸ್ಕೃತಿಯೂ ಭಾರತದಂತಹ ರಾಷ್ಟ್ರಗಳನ್ನು ವಸಾಹತುಗಳನ್ನಾಗಿ ಮಾಡಿಕೊಂಡ ಸಂದರ್ಭದಲ್ಲಿ ಮತಾಂತರ ಪ್ರಕ್ರಿಯೆ ತುಂಬಾ ದೊಡ್ಡ ಪ್ರಮಾಣದಲ್ಲಿಯೇ ತನ್ನ ಉದ್ದೇಶವನ್ನು ಸಾಧಿಸಿದ್ದನ್ನು, ಅನೇಕ ಸಾಂಸ್ಕೃತಿಕ ಪಠ್ಯಗಳು ಹಲವು ಸ್ತರಗಳಲ್ಲಿ ವಿಶದಪಡಿಸುತ್ತವೆ. ಈ ಪ್ರಕ್ರಿಯೆಯ ಹಿಂದಿರುವ ಮತೀಯ ಧೋರಣೆಗಳು ಹಲವು ಮಾರ್ಗಗಳನ್ನು ತುಂಬಾ ಎಚ್ಚರಿಕೆಯಿಂದಲೇ ರೂಪಿಸುತ್ತವೆ. ಅದು ಬಲತ್ಕಾರ, ಅಸಂಖ್ಯ ಆಮಿಷಗಳನ್ನು ಮುಂದೆ ಮಾಡಿಕೊಂಡು ತನ್ನ ಉದ್ದೇಶವನ್ನು ಈಡೇರಿಸಿಕೊಳ್ಳುತ್ತದೆ. ಇಂತಹ ಪ್ರಕ್ರಿಯೆಯೊಂದನ್ನು, ಬ್ರಿಟಿಷ್ ವಸಾಹುತುಶಾಹಿ ಸಂಸ್ಕೃತಿಯು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ತನ್ನ ಕಾಲೋನಿಯೊಂದರ ಯಃಕಶ್ಚಿತ್ ಮಲೆನಾಡಿನ ಪರಿಸರದಲ್ಲಿ ಹೇಗೆ ಮತಾಂತರ ಪ್ರಕ್ರಿಯೆಯ ಮುಖೇನ ಬ್ರಿಟಿಷ್ ಸಾಮ್ರಾಜ್ಯಶಾಹಿ ಸಂಸ್ಕೃತಿಯನ್ನು ನೆಲೆಯೂರಿಸಲು ತಂತ್ರಗಳನ್ನು ರೂಪಿಸುತ್ತಿತ್ತು ಎಂಬುದನ್ನು ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಹಾಗೂ 'ಕಾನೂರು ಹೆಗ್ಗಡಿತಿ' ಕಾದಂಬರಿಗಳ ವಿಶ್ಲೇಷಣೆಯಿಂದ ಕಂಡುಕೊಳ್ಳಬಹುದು.

ಮತಾಂತರ ಪ್ರಕ್ರಿಯೆಯನ್ನು ಇಪ್ಪತ್ತನೇ ಶತಮಾನದ ಕನ್ನಡ ಕಥನ ಸಾಹಿತ್ಯ ಗಾಢವಾಗಿ ಚಿಂತಿಸಿದೆ. ಮುಖ್ಯವಾಗಿ ನವೋದಯದ ಲೇಖಕರಾದ ಮಾಸ್ತಿಯವರ ಅನೇಕ ಕಥೆಗಳಲ್ಲಿ ಹಾಗೂ ಅವರ ಎರಡು ಕಾದಂಬರಿಗಳಲ್ಲಿ ಈ ಚಿಂತನೆಯಿದೆ. ಹಿಂದೂ - ಕ್ರೈಸ್ತ, ಜೈನ - ಲಿಂಗಾಯಿತ, ಹಿಂದೂ - ಮುಸ್ಲಿಂ ಈ ಧರ್ಮಗಳ ನಡುವಿನ ಮತಾಂತರದ ಪ್ರಕ್ರಿಯೆಯ ನಡುವಿನ ಸಂಘರ್ಷವನ್ನು ಮಾಸ್ತಿ ಕೃತಿಗಳು ಪ್ರಕಟಿಸುತ್ತವೆ. ಹಾಗೆಯೇ ಶಿವರಾಮ ಕಾರಂತರ 'ಚೋಮನ

ದುಡಿ' ಮತಾಂತರದ ವಾಗ್ವಾದಗಳನ್ನು ವಿಭಿನ್ನ ನೆಲೆಯಲ್ಲಿ ಮಂಡಿಸುವ ಕಾದಂಬರಿಯಾಗಿಯೂ ಪ್ರಸಿದ್ಧಿಯಾಗಿದೆ. ಹೀಗೆ ಕನ್ನಡ ಕಥನ ಸಾಹಿತ್ಯದಲ್ಲಿ ಮತಾಂತರದ ಪ್ರಕ್ರಿಯೆ ಬೇರೆ ಬೇರೆ ಆಶಯ, ಧೋರಣೆ ಮತ್ತು ನೆಲೆಗಳಲ್ಲಿ ಮಂಡಿತವಾಗಿರುವುದನ್ನು ಇಲ್ಲಿ ನೆನಪಿಸಿಕೊಳ್ಳುವುದು ತಪ್ಪಾಗಲಾರದೆಂದು ಭಾವಿಸುತ್ತೇನೆ. ಸ್ವಾತಂತ್ರ್ಯಾನಂತರದಲ್ಲಿ ಬರಹಕ್ಕೆ ಕೈಹಾಕಿದ ಕೆಳವರ್ಗಗಳಿಂದ ಬಂದ ಅನೇಕ ಲೇಖಕರು ಮತಾಂತರದ ಪ್ರಕ್ರಿಯೆಯನ್ನು ಭಿನ್ನ ನೆಲೆಗಳಲ್ಲಿ ಒಂದ ವಾಗ್ವಾದಕ್ಕೆ ಒಳಪಡಿಸಿರುವುದನ್ನು ಒಂದು ಮುಖ್ಯ ಅಧ್ಯಯನವಾಗಿಯೂ ನಡೆಸಬೇಕಾದ ಅಗತ್ಯವಿದೆ. ಸ್ವಾತಂತ್ರ್ಯಾನಂತರದ ಕನ್ನಡ ಕಥನ ಸಾಹಿತ್ಯ ಮತಾಂತರದ ಪ್ರಕ್ರಿಯೆಯನ್ನು ಬೇರೊಂದು ನೆಲೆಯಲ್ಲಿಯೇ ಚಿಂತಿಸುತ್ತದೆ. ಇಸ್ಲಾಂ, ಶೂದ್ರ, ದಲಿತ ಹಾಗೂ ಸ್ತ್ರೀ ಸಂವೇದನೆಯ ಕೃತಿಗಳು ಹಿಂದೂ ಅಥವಾ ಇಸ್ಲಾಂ ಧರ್ಮದ ಧಾರ್ಮಿಕತೆಯ ಅಮಾನವೀಯ ಮೌಲ್ಯಗಳನ್ನು ಪ್ರಶ್ನಿಸುತ್ತಾ, ಅಂತರಜಾತಿ ವಿವಾಹ ಮೊದಲಾದ ಸಾಮಾಜಿಕ ಹೋರಾಟಗಳನ್ನು ಸಂಕಥನಗೊಳಿಸತ್ತಾ, ವಿಭಿನ್ನ ನೆಲೆಗಳಲ್ಲಿ ಸಾಂಸ್ಕೃತಿಕ ವಾಗ್ವಾದಗಳನ್ನಾಗಿ ಮಂಡಿಸುತ್ತಿರುವುದನ್ನು ಕಾಣಬಹುದಾಗಿದೆ.

ಕ್ರೈಸ್ತ ಪಾದ್ರಿಯೊಬ್ಬನು ಹಳ್ಳಿಯ ಬೋಯಿಗಳಿಬ್ಬರ ಸಹಜವಾದ ನಂಬಿಕೆ - ಜ್ಞಾನವನ್ನು ಮೌಢ್ಯವೆಂದು ತಿಳಿದು, ನಾಗರೀಕತೆಯ ಅಹಂಕಾರದಿಂದ ಸುಸಂಸ್ಕೃತಗೊಳಿಸುವ ಕ್ರಿಯೆಯಲ್ಲಿ ಮಾಸ್ತಿಯವರು ಮತಾಂತರ ಪ್ರಕ್ರಿಯೆಯನ್ನು ವಿಡಂಬಿಸುತ್ತಾರೆ. ಸ್ಥಳೀಯ ಸಾಮಾನ್ಯರ ನಂಬಿಕೆ, ಆಚಾರ ವಿಚಾರಗಳನ್ನು ಮೌಢ್ಯಗಳೆಂದು ತತ್ವರಹಿತವಾದುವೆಂದು ತಿಳಿದು, ಆಚಾರ ವಿಚಾರಗಳನ್ನು ಉದ್ಧಾರ ಮಾಡುತ್ತೇವೆಂದು ತೊಡಗುವ ಕ್ರಿಯೆಯನ್ನು ಅತ್ಯಂತ ಸಹಜವಾಗಿ ಮಾಸ್ತಿ ತಮ್ಮ 'ಇಲ್ಲಿಯ ತೀರ್ಪು' ಕಥೆಯಲ್ಲಿ ಪ್ರಶ್ನಿಸುತ್ತಾರೆ. ನಾವು ಸುಸಂಸ್ಕೃತರು, ನಮ್ಮದು ನಾಗರೀಕತೆ, ಹಾಗಾಗಿ ಬೇರೆಯವರನ್ನು ನಮ್ಮಂತೆಯೇ ಮಾಡಬೇಕು ಎಂಬ ಧೋರಣೆಯಿಂದ ಅಜ್ಞಾನದಲ್ಲಿರುವವರಿಗೆ ಸುಜ್ಞಾನವನ್ನು ಕೊಡಲಿಕ್ಕಾಗಿ, ಇಂಗ್ಲೆಂಡಿನಿಂದ ಇಲ್ಲಿಗೆ ಬಂದ ಕ್ರೈಸ್ತ ಪಾದ್ರಿ ಆರ್ಥರ್ ಹೆನ್ರಿ ಸಾಹೇಬರ ಮನೋಧರ್ಮವನ್ನು ಅತ್ಯಂತ ಮುಗ್ಧತೆಯಿಂದ ಮೆಲುದನಿಯಲ್ಲಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇವರಿಗೆ ಜ್ಞಾನವನ್ನು ಉಂಟು ಮಾಡಬೇಕೆಂಬ ನಾಗರೀಕ ಅಹಂಕಾರವನ್ನೇ ಸಹಜ ಮುಗ್ಧತೆಯೊಂದಿಗೆ ಮುಖಾಮುಖಿಯಾಗಿಸಿ ಮತಾಂತರದಂತಹ ಪ್ರಕ್ರಿಯೆಯನ್ನು ಜಿಜ್ಞಾಸೆಗೆ ಒಳಪಡಿಸುತ್ತಾರೆ.

> " ನಮ್ಮಲ್ಲಿ ಅನೇಕರಿಗೆ ಈ ಧರ್ಮವು ತತ್ತ್ವರಹಿತವಾದುದೆಂದೂ, ಉದ್ಧಾರಕ ಶಕ್ತಿಯಿಲ್ಲದುದೆಂದೂ ತೋರಬಹುದು. ಸುಸಂಸ್ಕೃತವಾದ ನಮ್ಮ ಬುದ್ಧಿಗೆ ಕ್ಲಿಷ್ಟವಾದ ತತ್ವಗಳೇ ಸಮ್ಮತ: ಸುಲಭವಾದ ತತ್ತ್ವಗಳಿಂದ ನಾವು ಜಿತರಾಗುವುದಿಲ್ಲ. ಇದು ನಾಗರೀಕತೆಯ ಹೃದಯ. .....ನಾವು ರಾಮಾಬೋಯಿಯ ತಿಳಿವನ್ನು ನೋಡಿ ಇದು ಮಾನವನನ್ನು ಉದ್ಧಾರ ಮಾಡಬಲ್ಲ ತಿಳಿವಲ್ಲ, ಇವನನ್ನು ನಮ್ಮಂತೆಯೇ ಮಾಡಬೇಕು, - ಎನ್ನುವೆವು. ಆರ್ಥರ್ ಹೆನ್ರಿ ಸಾಹೇಬರ ಮತವು ಇದೇ. ಇವರು ರಾಮಾಬೋಯಿಯನ್ನು ಮತ್ತು ಅವನಂತಹ ಒರಟು ಜನರನ್ನು ಅವರ ಈ ತೆರೆದ ಅಜ್ಞಾನದಿಂದ ಉಳಿಸಿ ಅವರಿಗೆ ಸುಜ್ಞಾನವನ್ನು ಕೊಡಲಿಕ್ಕಾಗಿ ಇಂಗ್ಲೆಂಡಿನಿಂದ ಇಲ್ಲಿಗೆ ಬಂದಿದ್ದಾರೆ. ಬಹಳಮಟ್ಟಿಗೆ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಆದರೆ ಮಾಡುವುದರಲ್ಲಿ ಸ್ವಲ್ಪ

ಸರಿಯಾದ ಮಾರ್ಗವನ್ನು ಬಿಟ್ಟಿದ್ದರಿಂದಲೋ, ಇಲ್ಲ ಸರಿಯಾಗಿದ್ದರೂ ಸಜ್ಜನರಿಗೆ ಆಗಾಗ ತೊಂದರೆಗಳು ಬರಬೇಕಾಗಿರುವುದರಿಂದಲೋ, ಅವರ ಬೋಧನೆಯ ಫಲವಾಗಿ - ಹೀಗೆ ಹೇಳಬಹುದು - ರಾಮಾಬೋಯಿಯೂ ಮತ್ತು ತಿಮ್ಮಾಬೋಯಿಯೂ ಈದಿನ ನನ್ನ ಕೋರ್ಟಿನ ಮುಂದೆ ತಪ್ಪಿಸ್ಥರಾಗಿದ್ದಾರೆ: ಅರ್ಥರ್ ಹೆನ್ರಿಯವರು ನಷ್ಟಪಟ್ಟು ಪಿರ್ಯಾದಿಯಾಗಿ ನಿಂತಿದ್ದಾರೆ." [೧]

ಈ ಮೇಲಿನ ಉದ್ಧರಣೆಯನ್ನೇ ಗಮನಿಸುವುದಾದರೆ ಅರ್ಥರ್ ಹೆನ್ರಿ ಸಾಹೇಬರು ಬಿತ್ತುವ ವೈಚಾರಿಕತೆಯಿಂದ ತಿಮ್ಮಾಬೋಯಿ ಮತ್ತು ರಾಮಾಬೋಯಿ ಮಾಡುವ, ರಾಮನಗುಡಿ ಮತ್ತು ಚರ್ಚಿನ ಕಳ್ಳತನಗಳ ವಿಚಾರಣೆಯ ಸಂದರ್ಭವನ್ನು ಮುಖಾಮುಖಿಯಾಗಿಸಿ, ಮತಾಂತರ ಪ್ರಕ್ರಿಯೆಯ ಹಿಂದಿರುವ ಉದ್ಧಾರಕ ಮನೋಧರ್ಮವನ್ನು ಮಾಸ್ತಿಯವರು ಅತ್ಯಂತ ಮಾರ್ಮಿಕವಾಗಿ ಪ್ರಶ್ನಿಸುತ್ತಾರೆ. ಬಾದಶಹನ ದಂಡನೆಯ ಕಥೆಯಲ್ಲಿಯೂ ಮತ್ತು ಇನ್ನು ಅನೇಕ ಕಥೆಗಳಲ್ಲಿ ಭಿನ್ನಧರ್ಮೀಯರ ಜನಾಂಗಗಳ ನಡುವಿನ ಮತಾಂತರ ಪ್ರಶ್ನೆಗಳನ್ನು ಮುಖಾಮುಖಿಯಾಗಿಸಿರುವುದು ಅಧ್ಯಯನಕ್ಕೆ ಗುರಿಪಡಿಸಬೇಕಾದ ಸಂಗತಿ ಎಂಬುದನ್ನು ಇಲ್ಲಿ ಸೂಚಿಸ ಬಯಸುತ್ತೇನೆ.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಈ ದೃಷ್ಟಿಯಿಂದ ಚಾರಿತ್ರಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಅತ್ಯಂತ ಮುಖ್ಯವಾಗಿ ಕಾಣುತ್ತದೆ. ಕಾದಂಬರಿಯ ಒಟ್ಟು ಆಶಯ - ಧೋರಣೆಗಳ ಬಗೆಗೆ ನಿರೂಪಕನ ನಿಲುವುಗಳು ನೇರವಾಗಿಯೇ ಇಲ್ಲಿ ಪ್ರಕಟವಾಗುತ್ತವೆ. ಮತಾಂತರದ ಪ್ರಕ್ರಿಯೆಯ ಬಗೆಗೆ ನಿರೂಪಕನ ನಿಲುವುಗಳು ನಿಚ್ಚಳವಾಗಿಯೇ ಇಲ್ಲಿ ಕಾಣಿಸುತ್ತವೆ. ಮತಾಂತರವನ್ನು ಕುರಿತ ತನ್ನ ಖಚಿತ ಧೋರಣೆ ಯಾವುದೆಂಬುದು ನಿರೂಪಕನಿಗೆ ಇಲ್ಲಿ ಸ್ಪಷ್ಟವಿದೆ. ಭಾರತೀಯ ಮತ್ತು ಪಾಶ್ಚಾತ್ಯ ಪುರೋಹಿತಶಾಹಿಯ ಎರಡು ಧೋರಣೆಗಳ ಬಗೆಗೂ ಕಟಕಿ ವ್ಯಂಗ್ಯಗಳು ಕಾಣಿಸುತ್ತವೆ. ಸ್ಥಳೀಯ ಪುರೋಹಿತಶಾಹಿಯು ಕೆಳವರ್ಗಗಳ ಮೇಲೆ ತಾನು ಸ್ಥಾಪಿಸದ ಯಾಜಮಾನ್ಯದ ಕ್ರೌರ್ಯದಿಂದ ಬೇಸತ್ತ ಪ್ರಜ್ಞೆಯೊಂದು ಮತಾಂತರಗೊಳ್ಳಲು ದ್ವಂದ್ವದ ನೆಲೆಯಲ್ಲಿ ಸಿಕ್ಕಿಕೊಂಡಿರುವ ದುರಂತವನ್ನು ಇಲ್ಲಿ ಕಾಣುತ್ತೇವೆ.

"೧೮೯೩ ನೆಯ ಇಸವಿ ಸೆಪ್ಟೆಂಬರು ೧೧ ನೆಯ ತೇದಿ ಸೋಮವಾರ ತೀರ್ಥಹಳ್ಳಿಯ ಪಾದ್ರಿ ಅಥವಾ ಉಪದೇಶಿ ಜೀವರತ್ನಯ್ಯ ಕಾಡುದಾಟಿ, ಆಗತಾನೆ ಕಳೆಕಿತ್ತು ತೆವರು ಕುಯ್ದಾಗಿದ್ದ ಗದ್ದೆಕೋಗಿನ ಅಂಚುಗಳನ್ನು ಹತ್ತಿ ಹಾರಿ ತೋಟದ ಬೇಲಿಯ ತಡಬೆಯನ್ನು ಎಚ್ಚರಿಕೆಯಿಂದ ಏರಿ ಇಳಿದು, ಅಡಕೆ ಮರದ ಸಾರದ ಮೇಲೆ ಅಡೆಹಳ್ಳವನ್ನು ಉತ್ತರಿಸಿ, ಮನೆಯೆಡೆಯ ಕಣದ ಬೇಲಿಯೊಡ್ಡೆಗೆ ಹಾಕಿದ್ದ ಉಣುಗೋಲನ್ನು ಸರಿಸಿ, ಸಿಂಧುವಳ್ಳಿ ಮನೆಗೆ ಪ್ರವೇಶಿಸಿದಂದು ತಾನು ಎಂತಹ ಲೋಕ ಪ್ರಸಿದ್ಧವಾಗಲಿರುವ ಜಗದ್ ಭವ್ಯ ಮಹದ್ ಘಟನೆಯೊಂದರೊಡನೆ ಪ್ರತಿಸ್ಪರ್ಧಿ ಯಾಗಿದ್ದೇನೆ ಎಂಬುದನ್ನು ಅರಿತಿರಲಿಲ್ಲ. ಆ ದಿನವೆ ಕ್ರೈಸ್ತಮತ ಶ್ರದ್ಧೆಯ ಮತ್ತು ಮಿಶನರಿ ಮತಾಂಧತೆಯ ಶಕ್ತಿಕೇಂದ್ರವಾಗಿದ್ದ ಅಮೇರಿಕಾ ದೇಶದ ಚಿಕಾಗೊ ನಗರದಲ್ಲಿ

ನೆರೆದಿದ್ದ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಹಿಂದೂಧರ್ಮದ ಮತ್ತು ವೇದಾಂತ ದರ್ಶನದ ಮಹೋನ್ನತಿಯನ್ನು ವಿಶ್ವವೈಶಾಲ್ಯವನ್ನು ತಮ್ಮ ಸಿಂಹ ಕಂಠದಿಂದ ಘೋಷಿಸಿದ್ದರು! ಅದನ್ನು ಆಲಿಸಿದ್ದ ಅನ್ಯಧರ್ಮೀಯ ವಿದ್ವಜ್ಜನ ಸಮೂಹವು ಆನಂದೋನ್ಮತ್ತವಾಗಿ ಜಯಘೋಷ ಮಾಡಿತ್ತು! ಹಿಂದೂಧರ್ಮ ಮತ್ತು ವೇದಾಂತ ದರ್ಶನದ ದಿಗ್ವಿಜಯ ಧ್ವಜ ಗಗನಚುಂಬಿಯಾಗಿ ಏರಿ ಹಾರಿ ಲೋಕಲೋಚನಗಳನ್ನೆ ಬೆರಗುಗೊಳಿಸಿತ್ತು! ವಿಂಧ್ಯ ಹಿಮಾಚಲ ಸಹ್ಯಾದ್ರಿಗಳಲ್ಲಿಯೂ ಆ ದಿವ್ಯಧ್ವನಿ ಅನುರಣಿತವಾಗಿತ್ತು.

ಆಗಿತ್ತೆ? ಎಲ್ಲಿ ಆಗಿತ್ತು? ಹಾಗಿದ್ದರೆ ಉಪದೇಶಿ ಜೀವರತ್ನಯ್ಯ ಸಿಂಧುವಳ್ಳಿ ಚಿನ್ನಪ್ಪಗೌಡರನ್ನು ಕಿಲಸ್ತರ ಜಾತಿಗೆ ಸೇರಿಸಲು ಎಂದಿಗಾದರೂ ಸಾಧ್ಯವಾಗುತ್ತಿತ್ತೇ? ನಿಜ, ಅವರಿನ್ನೂ ಸೇರಿರಲಿಲ್ಲ: ಆದರೆ, ದೀವದಾನೆ ಕಾಡಾನೆಯನ್ನು ಆಕರ್ಷಿಸಿ ಖೆಡ್ಡಾಕ್ಕೆ ಕೆಡಹಲು ಪ್ರಯತ್ನಿಸುವಂತೆ, ಪಾದ್ರಿ ಜೀವರತ್ನಯ್ಯ ಚಿನ್ನಪ್ಪನ ಕಾಲಡಿಯ ಕುರುಡು ಆಚಾರ ಮತ್ತು ಮೂಢ ನಂಬಿಕೆಗಳ ಭೂಮಿಯನ್ನು ಸಡಿಲಗೊಳಿಸಿ, ಅಗೆದು ತೆಗೆದು, ಕ್ರೈಸ್ತಮತದ ಖೆಡ್ಡಾ ಕಂದಕವನ್ನು ಮೆಲ್ಲಗೆ ನಿರ್ಮಿಸುತ್ತಿದ್ದನು.

ಅತ್ತ ಉತ್ತರಾರ್ಧಗೋಲದ ಬಹುದೂರ ಸಾಗರದಾಚೆಯ ಒಂದು ಆಧುನಿಕ ನಾಗರೀಕತೆಯ ಮತ್ತು ವೈಜ್ಞಾನಿಕ ಪ್ರಗತಿಯ ಶ್ರೀಮಂತ ದೇಶದಲ್ಲಿ ಪ್ರಪ್ರಾಚೀನ ಭಾರತ ಸಂಸ್ಕೃತಿಯ ಸರ್ವೋತ್ತಮ ಪ್ರತಿನಿಧಿಯೊಬ್ಬನು ವೇದಾಂತ ದರ್ಶನದ ಮೇಲೆ ನಿಂತಿರುವ ಸನಾತನ ಹಿಂದೂಧರ್ಮದ ಸರ್ವೋತ್ಕೃಷ್ಟತೆಯನ್ನು ಅಧಿಕಾರವಾಣಿಯಿಂದ ಪ್ರಸಾರ ಮಾಡುತ್ತಿದ್ದಾಗಲೆ, ಅದನ್ನೆಲ್ಲ ಸದ್ದುಗದ್ದಲವಿಲ್ಲದೆ ಮೂದಲಿಸುವಂತೆ, ಯಕಃಶ್ಚಿತ ಪಾದ್ರಿಯೊಬ್ಬನು - ಅದರಲ್ಲಿಯೂ ನೇಟಿವ್ ಪಾದ್ರಿ - ಘೋರಾರಣ್ಯಮಯವಾದ ಸಹ್ಯಾದ್ರಿ ಶ್ರೇಣಿಯ ಮಲೆನಾಡಿನ ಕೊಂಪೆಯ ಅಜ್ಞಬೇಸಾಯಗಾರನೊಬ್ಬನಿಗೆ ಹಿಂದೂ ಧರ್ಮದ ಅನಾಚಾರ, ಅವಿವೇಕ, ಸಂಕುಚಿತಮನೋಭಾವ, ಜಾತಿಮತ ಪಕ್ಷಪಾತ, ಬ್ರಾಹ್ಮಣರ ತಿರಸ್ಕಾರ, ಶೂದ್ರರ ದೈನ್ಯ, ಅಧೋಗತಿ, ಕಲ್ಲು ಮಣ್ಣು ಮರ ದೆವ್ವಗಳ ಪೂಜೆ ಇತ್ಯಾದಿಗಳನ್ನು - ಯೇಸುಕ್ರಿಸ್ತನ ಮತ್ತು ಕ್ರೈಸ್ತಮತದ ಪರೋಪಕಾರ, ಪರಾನುಕಂಪನ ನೀತಿ, ತ್ಯಾಗ, ಭಕ್ತಿ, ಉದ್ಧಾರಕ ಸಾಮಾರ್ಥ್ಯ ಇತ್ಯಾದಿಗಳನ್ನು - ಕುರಿತು ಮನಮುಟ್ಟುವಂತೆ ಉಪದೇಶ ಮಾಡುತ್ತಿದ್ದನು, ಗೌಡರ ಮನೆಯ ಚಾವಡಿಯಲ್ಲಿಯೇ ಕುಳಿತು, ಅವನ ಗದ್ದೆ, ತೋಟ, ಅಂಗಳದ ತುಳಸಿಕಟ್ಟೆಯ ದೇವರು ಮತ್ತು ಎದುರಿಗೆ ಕಾಣುತ್ತಿದ್ದ ಭೂತದ ಬನ ಇವುಗಳ ಇದಿರಿನಲ್ಲಿಯೇ!

ಅಮೆರಿಕಾದ ಚಿಕಾಗೊ ಬಹುದೂರದಲ್ಲಿದ್ದಿರಬಹುದು? ವಿವೇಕಾನಂದರ ಉತ್ತಾಲ

ಧ್ವನಿ ಮಲೆನಾಡಿನ ಕೊಂಪೆಗೆ ಮುಟ್ಟದಿದ್ದಿರಬಹುದು? ಆದರೆ ಸಮೀಪದಲ್ಲಿಯೆ ಇದ್ದುವಲ್ಲ - ಶೃಂಗೇರಿ, ಧರ್ಮಸ್ಥಳ, ಇತ್ಯಾದಿ ಪವಿತ್ರಕ್ಷೇತ್ರಗಳ ಗುರುಪೀಠಗಳು? ಅವೇನು ಮಾಡುತ್ತಿದ್ದುವು? ಅದ್ವೈತ ತತ್ತ್ವದಿಂದ ಬೌದ್ಧಧರ್ಮವನ್ನ ಭರತವರ್ಷದಿಂದ ಅಟ್ಟಿ ವೈದಿಕ ಧರ್ಮಸ್ಥಾಪನೆ ಮಾಡಿದನೆಂದು ಹೇಳಲಾಗುತ್ತಿರವ ಆಚಾರ್ಯ ಶಂಕರನ ಮೂಲ ಪೀಠದಲ್ಲಿ ವಿರಾಜಮಾನರಾಗಿದ್ದ ಸನ್ಯಾಸಿವರೇಣ್ಯರು ಏನು ಮಾಡುತ್ತಿದ್ದರು?"[೨]

ಮತಾಂತರದ ಹಿಂದಿರುವ ಹುನ್ನಾರಗಳ ಬಗೆಗೆ ಕಟು ವಿಮರ್ಶೆ ಇದ್ದಂತೆ, ಸ್ಥಳೀಯ ಧಾರ್ಮಿಕ ಸಂಸ್ಥೆಗಳ ಬಗೆಗೂ ಕಾದಂಬರಿಯಲ್ಲಿ ತೀವ್ರ ಖಂಡನೆ ಇದೆ. ಚಾರಿತ್ರಿಕ ಘಟನೆಯೊಂದನ್ನು ನಿಖರವಾಗಿ ದಾಖಲಿಸುತ್ತಾ, ವಸಾಹತುಶಾಹಿ ಕಾಲಮಾನದ ಸಾಂಸ್ಕೃತಿಕ ಸಂದರ್ಭವೊಂದನ್ನು ಮುಖಾಮುಖಿಯಾಗಿಸುವುದು, ವಿಚಕ್ಷಣತೆಗೆ ಗುರಿಪಡಿಸುವುದು, ಮಾರ್ಮಿಕವಾಗಿದೆ. ಮತ್ತೊಂದು ಮಾರ್ಮಿಕ ವಿಚಾರವೆಂದರೆ ಅಮೆರಿಕಾದ ಚಿಕಾಗೋದಲ್ಲಿ ಭಾರತೀಯ ಸಂಸ್ಕೃತಿಯ ಸರ್ವೋತ್ತಮ ಪ್ರತಿನಿಧಿಯಾದ ಸ್ವಾಮಿ ವಿವೇಕಾನಂದರು ಸನಾತನ ಹಿಂದೂ ಧರ್ಮದ ವೇದಾಂತದರ್ಶನ, ಸರ್ವೋತ್ಕೃಷ್ಟತೆಯನ್ನ ಸಾಗರದಾಚೆ ಪ್ರಸಾರ ಮಾಡುತ್ತಿದ್ದಾಗಲೇ, ಬ್ರಿಟಿಷ್ ವಸಾಹತು ಕಾಲೋನಿಗಳಲ್ಲಿ ಅಂತದ್ದೇ ಅಸಂಖ್ಯ ಧರ್ಮಪ್ರಸಾರದ ಪ್ರಕ್ರಿಯೆಗಳು ನಡೆಯುತ್ತಿದ್ದುದರ ವಿಚಾರವನ್ನು ನಿರೂಪಕ ಮುಖಾಮುಖಿಯಾಗಿಸುವುದರೊಂದಿಗೆ ವಿರಾಟ ವ್ಯಂಗ್ಯವೊಂದನ್ನು ಪ್ರಕಟಿಸುತ್ತಾರೆ.

ಮಲೆನಾಡಿನ ಪ್ರತಿಷ್ಠಿತ ಮನೆತನಕ್ಕೆ ಸೇರಿದ ಚಿನ್ನಪ್ಪಗೌಡರಂತವರನ್ನು ಮತಾಂತರಗೊಳಿಸುವುದು ಸುಲಭವಲ್ಲ. ಆದರೂ ಅದು ಸಾಧ್ಯವೆಂಬ ನಂಬಿಕೆಯಿದೆ ಸ್ಥಳೀಯ ಧರ್ಮದ ಅನಾಚಾರಗಳಲ್ಲಿ ಸಿಕ್ಕಿ ನರಳುತ್ತಿದ್ದ ಚಿನ್ನಪ್ಪಗೌಡರಂತಹವರನ್ನು ಅಂತದ್ದೇ ಮತ್ತೊಂದು ಧರ್ಮವೊಂದು ತನ್ನ ಮತಕ್ಕೆ ಸೇರಿಸಿಕೊಳ್ಳುವ ಹುನ್ನಾರಿನ ಪ್ರಕ್ರಿಯೆಯನ್ನು ಕಾದಂಬರಿ ವಿಶ್ಲೇಷಿಸುತ್ತದೆ. 'ದೀವದಾನೆ' ಕಾಡಾನೆಯನ್ನು ಆಕರ್ಷಿಸಿ ಖೆಡ್ಡಾಕ್ಕೆ ಕೆಡಹಲು ಪ್ರಯತ್ನಿಸುವಂತೆ ನೇಟಿವ್ ಪಾದ್ರಿ ಜೀವರತ್ನಯ್ಯ ಚಿನ್ನಪ್ಪನ ಕಾಲಡಿಯ ಕುರುಡು ಆಚಾರ ಮತ್ತು ಮೂಢನಂಬಿಕೆಗಳ ಭೂಮಿಯನ್ನು ಸಡಿಲಗೊಳಿಸಿ ಅಗೆದು ತೆಗೆದು ಕ್ರೈಸ್ತಮತದ ಖೆಡ್ಡಕಂದಕವನ್ನು ನಿರ್ಮಿಸುತ್ತಿದ್ದನು - ಎಂಬಲ್ಲಿ ಹಿಂದೂ ಧರ್ಮದ ಅಮಾನವೀಯತೆ ಮತ್ತು ಮೌಢ್ಯತೆಗಳ ಬಗೆಗೆ ಚಿನ್ನಪ್ಪನಂಥ ಯುವಕರಲ್ಲಿ ಎಚ್ಚರವೊಂದನ್ನು ಮೂಡಿಸುತ್ತಾ, ಸ್ಥಳೀಯ ಬದುಕಿಗೆ ಪರಿಚಿತವಲ್ಲದ ಸುಲಭವಾಗಿ ಎಟುಕದ ಆಕರ್ಷಕ ಆಮಿಷಗಳನ್ನು ಮುಂದುಮಾಡಿ ತಮ್ಮ ಧರ್ಮವನ್ನು ವಿಸ್ತರಿಸುತ್ತಿರುವ ಪ್ರಕ್ರಿಯೆಯು ಇಲ್ಲಿದೆ.

ಜೀವರತ್ನಯ್ಯನ ಉಪದೇಶ ಮತ್ತು ಆಮಿಷಗಳು ಫಲಕಾರಿಯಾಗಲು ಮುಖ್ಯ ಕಾರಣ ಹಿಂದೂ ಧರ್ಮದಲ್ಲಿನ ಪುರೋಹಿತಶಾಹಿಯ ಅಮಾನವೀಯ ಮೌಲ್ಯಗಳೇ. ಹಿಂದೂ ಧರ್ಮದ ಅನಾಚಾರ, ಅವಿವೇಕ, ಸಂಕುಚಿತ ಮನೋಭಾವ, ಜಾತಿಮತ ಪಕ್ಷಪಾತ, ಬ್ರಾಹ್ಮಣರ ತಿರಸ್ಕಾರ, ಶೂದ್ರರ ದೈನ್ಯ, ಅಧೋಗತಿ, ಕಲ್ಲು, ಮಣ್ಣು, ಮರ, ದೈವಗಳ ಪೂಜೆ ಇತ್ಯಾದಿಗಳನ್ನು ಕ್ರೈಸ್ತಮತದ ಪರೋಪಕಾರ, ಪರಾನುಕಂಪನ ರೀತಿ, ತ್ಯಾಗಭಕ್ತಿ, ಉದ್ಧಾರಕ ಸಾಮಾರ್ಥ್ಯಗಳನ್ನು ಹೀಗೆ ಎರಡು ಧರ್ಮಗಳ ಧಾರ್ಮಿಕ ಧೋರಣೆಗಳನ್ನು ಮುಖಾಮುಖಿಯಾಗಿಸಿರುವಲ್ಲಿ ಪುರೋಹಿತ ಶಾಹಿಯ ಅಮಾನವೀಯತೆ ಮತ್ತು ಕ್ರೈಸ್ತಧರ್ಮದ ಹುನ್ನಾರುಗಳು ಒಮ್ಮೆಗೆ ನಮ್ಮ ಗಮನಕ್ಕೆ ಬರುತ್ತವೆ. ಹಾಗೆ

ಎರಡು ಧರ್ಮಗಳ ಮುಖಾಮುಖಿಯಾಗಿರುವಲ್ಲಿ ಆಧುನಿಕ ಜಗತ್ತಿನ ಚಿನ್ನಪ್ಪ ಮತ್ತು ದೇವಯ್ಯನಂತಹ ಜಾಗೃತ ಪ್ರಜ್ಞೆಯ ಯುವಕರನ್ನು ಮತಾಂತರದ ಖೆಡ್ಡಾಕ್ಕೆ ನೇಟಿವ್ ಪಾದ್ರಿಯೊಬ್ಬ ಕೆಡಹುತ್ತಿರುವ ಚಿತ್ರ ರೂಕ್ಷವಾದದ್ದು. ಅಸಂಖ್ಯಾತ ಮೌಢ್ಯ ನಂಬಿಕೆಗಳ ಪರಿಸರದಲ್ಲಿಯೇ ತನ್ನ ಉದ್ದೇಶವನ್ನು ಅನ್ಯ ಧರ್ಮಿಯನೊಬ್ಬ ಈಡೇರಿಸಿಕೊಳ್ಳುತ್ತಿರುವ ಪ್ರಕ್ರಿಯೆ ಒಂದು ಕಡೆ ನಡೆಯುತ್ತಿದ್ದರೆ, ಮತ್ತೊಂದು ಕಡೆ ಸಾಗರಾದಾಚೆ ಹಿಂದೂ ಧರ್ಮದ ಮಾನವೀಯ ಮೌಲ್ಯಗಳ ಪ್ರಸಾರ ಮಾಡುತ್ತಿದ್ದ ಸಂದರ್ಭದಲ್ಲಿ ಧಾರ್ಮಿಕ ವಕ್ತಾರರಂತೆ ಸೋಗು ಹಾಕಿದ್ದ ಸ್ಥಳೀಯ ಮಠಮಾನ್ಯಗಳ ಜವಬ್ದಾರಿಯನ್ನು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಸಂವೇದನೆ ಪ್ರಶ್ನಿಸುತ್ತದೆ. p.159 ಹಾಗೆಯೇ ಸ್ಥಳೀಯ ಮಠಮಾನ್ಯಗಳ, ಗುರುಪೀಠಗಳ ವಾಸ್ತವ ಚಿತ್ರಣವನ್ನು ಕಾದಂಬರಿ ಈ ಕೆಳಕಂಡಂತೆ ದಾಖಲಿಸುತ್ತದೆ.

p.160 > "ಅಜ್ಞರೂ ಮೌಢ್ಯಾಂಧರೂ ಆಗಿದ್ದ ಶೂದ್ರವರ್ಗದ ಸಾಮಾನ್ಯ ಜನರಿಂದ ಪಾದ ಪೂಜೆ ಮಾಡಿಸಿಕೊಳ್ಳುತ್ತಿದ್ದರು; ಅಡ್ಡಪಲ್ಲಕ್ಕಿ ಸೇವೆ ಸಲ್ಲಿಸಿಕೊಳ್ಳುತ್ತಿದ್ದರು; ದಾನ, ದಕ್ಷಿಣೆ, ಸಾಷ್ಟಾಂಗ ನಮಸ್ಕಾರಗಳನ್ನು ಸ್ವೀಕರಿಸುತ್ತಿದ್ದರು. ಆಶೀರ್ವಾದ ಮಾಡುತ್ತಿದ್ದರು! ತಮ್ಮತಮ್ಮ ಪಂಗಡಕ್ಕೆ ಸೇರಿದ ಬ್ರಾಹ್ಮಣೋತ್ತಮರಿಗೆ, ಭೂಸುರರಿಗೆ, ಸಮಾರಾಧನೆ ಮಾಡಿಸಿ ಹೊಟ್ಟೆ ತುಂಬಿಸುತ್ತಿದ್ದರು. ಬಹುಶ: ಶಾಸ್ತ್ರಕ್ಕಾಗಿ, ತಮ್ಮ ವರ್ಗಕ್ಕೆ ಸೇರಿದ ವಿದ್ವಾಂಸರನ್ನು ನೆರಪಿ ವಾಕ್ಯಾರ್ಥ ಏರ್ಪಡಿಸುತ್ತಿದ್ದರೂ ಇರಬಹುದು. ಶೂದ್ರರು ವೇದೋಪನಿಷತ್ತುಗಳನ್ನು ಓದುವುದಿರಲಿ, ಕೇಳಿದರೂ ಅವರ ಕಿವಿಗೆ ಸೀಸ ಕರಗಿಸಿ ಹೊಯ್ಯುವ ನರಕ ಶಿಕ್ಷೆಯನ್ನು ವಿಧಿಸಿ, ಅದಕ್ಕೆ ಧರ್ಮಶಾಸ್ತ್ರವೆಂದು ಹೆಸರಿಟ್ಟರು. ಶೂದ್ರರಿಗೆ ವೇದಾಂತ ಬೋಧನೆ ಮಾಡುವ ಪಾಪಕ್ಕೆ ಏಕೆ ಪಕ್ಕಾಗುತ್ತಾರೆ? ಕಾವಲಿಲ್ಲದ ಕೋಟೆಗೆ ನುಗ್ಗಲು ಶತ್ರುವಿಗೆ ಸೈನ್ಯಬೇಕೆ? ರಕ್ಷಕರಿಲ್ಲದ ದುರ್ಗವನ್ನು ಗೆಲ್ಲಲು ನಿಪುಣ ಸೈನಿಕನೊಬ್ಬನಾದರೂ ಸಾಕು! ತಮ್ಮ ಧರ್ಮದ ವಿಚಾರವಾದ ಯಾವ ಬುದ್ಧಿಪೂರ್ವಕ ಜ್ಞಾನವೂ ಇಲ್ಲದೆ, ಪರಂಪರಾಗತವಾದ ಅಂಧ ಆಚಾರಸಮೂಹಗಳನ್ನೇ ತತ್ವಗಳೆಂದು ನಂಬಿ, ಆಲೋಚನಾಶಕ್ತಿ ಲವಲೇಶವೂ ಇಲ್ಲದಿದ್ದವರನ್ನು, ಜಡಬುದ್ಧಿ ಗಳನ್ನು, ಮತಾಂತರಗೊಳಿಸುವುದು ಸುಲಭವಲ್ಲ; ಆದರೆ ಜಡಬುದ್ಧಿಗಳಾಗದೆ ತುಸು ಮಟ್ಟಿಗೆ ಜಾಗೃತಮತಿಗಳಾಗಿಯೂ ತಮ್ಮ ಮತಧರ್ಮದ ಸನಾತನ ಮೂಲ ತತ್ವ ಗಳನ್ನರಿಯದವರ ನಂಬಿಕೆಗಳನ್ನು ಅಲ್ಲಾಡಿಸುವುದು ಅಷ್ಟೇನು ಕಷ್ಟವಲ್ಲ. ಪಾದ್ರಿ ಜೀವರತ್ನಯ್ಯ ಮಲೆನಾಡಿನ ಗೌಡರುಗಳಲ್ಲಿ ಅಂಥವರನ್ನೇ ಪತ್ತೆಹಚ್ಚಿ ತನ್ನ ಕೆಲಸಕ್ಕೆ ಕೈ ಹಾಕಿದ್ದನು. ಸಿಂಧುವಳ್ಳಿ ಚಿನ್ನಪ್ಪನೆ ಪಾದ್ರಿಯ ಮೊತ್ತಮೊದಲನೆಯ ಬೇಟೆ ಯಾಗಿದ್ದನು."[2] p.160

ತನ್ನ ಅವಿವೇಕತನದಿಂದ, ಅನಾಚಾರದಿಂದ ಅಜ್ಞರನ್ನಾಗಿಯೂ, ಮೂಢರನ್ನಾಗಿಯೂ ಸೃಷ್ಟಿಸಿದ್ದ ಶೂದ್ರವರ್ಗದ ಧಾರುಣಸ್ಥಿತಿ ಈ ಮೇಲಿನ ಉದ್ಧರಣೆಯಲ್ಲಿದೆ. ತನ್ನ ಸೇವಾಕಾರ್ಯಗಳಲ್ಲಿ ದುಡಿಸಿಕೊಳ್ಳಲೆಂದೆ ಶೂದ್ರರಲ್ಲಿ ಉಂಟು

ಮಾಡಿದ್ದ ಮೌಢ್ಯಗಳ ವಿಚಾರವು ಇಲ್ಲಿ ವೇದ್ಯವಾಗುತ್ತದೆ. ಶೂದ್ರರ ಮತ್ತು ಪುರೋಹಿತರ ನಡುವಿನ ಪಕ್ಷಪಾತದ ಧೋರಣೆಯ ವಿಚಾರಗಳು ಇಲ್ಲಿ ವಿದಿತವಾಗುತ್ತವೆ. ಯಾಂತ್ರಿಕ ಶಾಸ್ತ್ರಾಚಾರಗಳ ಬಗೆಗೆ ಖಂಡನೆ ಇದೆ, ಶೂದ್ರ ಸಮುದಾಯ ವೇದೋಪನಿಷತ್ತುಗಳನ್ನು, ಅವುಗಳಲ್ಲಿನ ಧೋರಣೆ - ಆಶಯಗಳನ್ನು ಓದಿನ ಮೂಲಕ ತಿಳಿಯುವ ಹಕ್ಕನ್ನು ಕಸಿದುಕೊಂಡು, ಶೂದ್ರರನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದ ಪುರೋಹಿತಶಾಹಿಯ ಅನೈತಿಕತೆಯ ಬಗ್ಗೆ ಅಮಾನವೀಯತೆಯ ಬಗ್ಗೆ ಆಕ್ರೋಶವಿದೆ. ಅಂದರೆ ಶೂದ್ರನೊಬ್ಬನು ಶಿಕ್ಷಣ ಪಡೆಯುವುದು ಮಹಾಪಾಪವೆಂಬ ಧೋರಣೆಯನ್ನು ಶೂದ್ರರಲ್ಲಿ ಬಿತ್ತಿ, ಶಿಕ್ಷಣದಿಂದ ವಂಚಿತರನ್ನಾಗಿ ಮಾಡಲು ಶಾಸ್ತ್ರಗಳನ್ನು ಮುಂದಿಟ್ಟ ಪುರೋಹಿತಶಾಹಿ ವ್ಯವಸ್ಥೆಯನ್ನು ಕುವೆಂಪು ಇಲ್ಲಿ ತೀವ್ರವಾಗಿ ಪ್ರಶ್ನಿಸುತ್ತಾರೆ. ಈ ಎಲ್ಲಾ ಕಾರಣಗಳಿಂದ "ಹಿಂದೂಧರ್ಮ ಕಾವಲಿಲ್ಲದ ಕೋಟೆಯಂತೆಯೂ, ರಕ್ಷಕರಿಲ್ಲದ ದುರ್ಗದಂತೆಯೂ" ಆಗಿದೆ. ಆದರೂ ಭಿನ್ನ ಧರ್ಮವೊಂದು ಗಾಢವಾಗಿ ಕೆಳವರ್ಗಗಳ ಮೇಲೆ ಪರಿಣಾಮ ಬೀರಲಾರದ ವಾಸ್ತವ ಅಂಶವು ಇಲ್ಲಿದೆ. ವೇದಾಂತ ದರ್ಶನದ ಮಾನವೀಯ ಮೌಲ್ಯಗಳಾಗಲಿ, ಜ್ಞಾನವಾಗಲಿ ಇಲ್ಲದ ವರ್ಗವೊಂದು ಸನಾತನ ಅಂಧಾಚಾರಗಳನ್ನೇ ತತ್ವಗಳೆಂದು ನಂಬಿ ಸ್ವಂತ ಆಲೋಚನಾ ಶಕ್ತಿಗಳಿಲ್ಲದ ಜಡ ಬುದ್ಧಿಗಳನ್ನು, ಹಳೆಯತಲೆಮಾರನ್ನು ಮತಾಂತರಗೊಳಿಸುವುದು ಕ್ರೈಸ್ತ ಪಾದ್ರಿ ಜೀವರತ್ನಯ್ಯನಿಗೆ ಸುಲಭವಲ್ಲ. ಆದ್ದರಿಂದ ಜಾಗೃತಮತಿಗಳಾದ ಸನಾತನ ಧರ್ಮದ ಮೂಲ ತತ್ವಗಳನ್ನು ಅರಿಯದ ಸಿಂಧುವಳ್ಳಿ ಚಿನ್ನಪ್ಪ ಹಾಗೂ ಬೆಟ್ಟಳ್ಳಿ ದೇವಯ್ಯನಂತವರ ಯುವಪೀಳಿಗೆಯನ್ನು ತನ್ನ ಮತಾಂತರ ಖೆಡ್ಡಾಕ್ಕೆ ಬೀಳಿಸಲು ಪಾದ್ರಿ ಜೀವರತ್ನಯ್ಯ ಪ್ರಯತ್ನಿಸುತ್ತಾನೆ.

ಹೊಸ ಸಂಸ್ಕೃತಿಯೊಂದರ ಸಂಪರ್ಕಕ್ಕೆ ಒಳಗಾದ ಸಿಂಧುವಳ್ಳಿ ಚಿನ್ನಪ್ಪನಂತವರ ವೇಷಭೂಷಣಗಳಲ್ಲಿ ಕಾಣಿಸಿಕೊಂಡ ಬಾಹ್ಯ ಬದಲಾವಣೆಗಳು ಸ್ಥಳೀಯ ಪರಿಸರದಲ್ಲಿ ಆಕರ್ಷಕವಾಗಿಯೂ, ಕುತುಹಲವಾಗಿಯೂ ಕಾಣಿಸಿಕೊಳ್ಳುತ್ತವೆ. ದೀವದಾನೆಯನ್ನಾಗಿ ಪಳಗಿಸಿಕೊಂಡ ಸಿಂಧುವಳ್ಳಿ ಚಿನ್ನಪ್ಪನನ್ನು ಮುಂದುಮಾಡಿಕೊಂಡು ಮಲೆನಾಡಿನ ಪ್ರತಿಷ್ಠಿತ ಗೌಡರ ಕುಟುಂಬಗಳೊಂದಿಗೆ ಸ್ನೇಹ ಸಂಪಾದಿಸಲು ತೊಡಗುವ ಪ್ರಕ್ರಿಯೆಯಲ್ಲಿಯೂ ಕ್ರೈಸ್ತ ಪುರೋಹಿತಶಾಹಿಯ ತಂತ್ರವಿದೆ. ~~ಸ್ಥಳೀಯ ಅಥವಾ~~ ಹಳೆಯ ರಾಜಕೀಯ ವ್ಯವಸ್ಥೆಯೊಂದು ಹಿಂದೆ ಸರಿದು ಹೊಸ ಸಾಮ್ರಾಜ್ಯವೊಂದು ಸುಭದ್ರವಾಗಿ ತಳವೂರುತ್ತಿದ್ದ ಸಮಯದಲ್ಲಿ ಆಡಳಿತ ಪದ್ಧತಿಯಿಂದ ನಿರ್ಮಾಣವಾದ ಗೊಂದಲಗಳು, ಸಮಸ್ಯೆಗಳು, ಆ ಸಮಸ್ಯೆಗಳಿಗೆ ಸಹಾಯ ಮಾಡುವ ನೆಪದಲ್ಲಿ ಒಂದು ಪರಿಸರದ ಜನತೆಯ ವಿಶ್ವಾಸಕ್ಕೆ ಪಾತ್ರವಾಗುವ ಪ್ರಕ್ರಿಯೆಯನ್ನು ಇಲ್ಲಿ ಕಾಣುತ್ತೇವೆ.

ಹೊಸ ಸಾಮ್ರಾಜ್ಯಶಾಹಿಯೊಂದು ಹೊತ್ತು ತರುವ ಕಾನೂನು, ಅಧಿಕಾರ, ಭಾಷೆಯ ಯಾಜಮಾನ್ಯ, ವೈಜ್ಞಾನಿಕ ಸಲಕರಣೆಗಳು, ಸುಧಾರಣೆ ನೆಪದಲ್ಲಿ ಬರುವ ಹೊಸ ಹೊಸ ಇಲಾಖೆಗಳು, ಯಂತ್ರಗಳು ವಿಸ್ಮಯವಾಗಿ ಕಂಡಂತೆ ಭಯುದ ವಾತಾವರಣ ಅನ್ಯ ಸಂಸ್ಕೃತಿಯೊಂದರಲ್ಲಿ ಮನೆಮಾಡಿಕೊಳ್ಳಲು ಅನುಕೂಲವಾಗಿ ಪರಿಣಮಿಸಿ, ನೆಲೆಯೂರುವ ಪ್ರಕ್ರಿಯೆಯನ್ನು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಸಂವೇದನೆ ಚಿಂತಿಸುತ್ತದೆ.

> "………ಹಳೆಯ ರಾಜ್ಯಗಳಳಿದು ಬ್ರಿಟಿಷ್ ಚಕ್ರಾಧಿಪತ್ಯ ಸುಭದ್ರವಾಗಿ ಕಾಲೂರುತ್ತಿದ್ದ
> ಆ ಕಾಲದಲ್ಲಿ ಹೊಸ ಕಾನೂನುಗಳು ಹೊಸ ಹೆಸರಿನ ಅಧಿಕಾರಿಗಳು ಹೊಸ ಹೊಸ

ರೂಲೀಸುಗಳು ಜಾರಿಗೆ ಬರುತ್ತಿದ್ದುದರಿಂದ ತಕ್ಕಮಟ್ಟಿಗೆ ಇಂಗ್ಲಿಷ್ ತಿಳಿದಿದ್ದ ಆ ಪಾದ್ರಿ ಸರಕಾರದ ವ್ಯವಹಾರಗಳಲ್ಲಿ ಅವರಿಗೆ ನೀಡುತ್ತಿದ್ದ ನೆರವು. ಹಳ್ಳಿಯವರು ತೀರ್ಥಹಳ್ಳಿಗೆ ಹೋದಾಗ ಆಸ್ಪತ್ರೆ, ಡಾಕ್ಟರು, ಅಮಲ್ದಾರರು, ಪೋಲೀಸಿನವರು, ಪೋಸ್ಟಾಫೀಸು, ಕಾಫಿ, ಹೋಟೆಲ್, ಇಸ್ಕೂಲು ಮುಂತಾದ ತಾವು ಹಿಂದೆಂದೂ ಕೇಳದಿದ್ದ ಭಾಷೆಯ ಹೆಸರುಗಳಿಗೇ ದಿಗಿಲು ಪಟ್ಟುಕೊಳ್ಳುತ್ತಿದ್ದಾಗ, ಪಾದ್ರಿಯಿಂದ ಅವರಿಗೆ ತುಂಬಾ ಉಪಕಾರವಾಗುತ್ತಿತ್ತು. ಆ ಅನುಕೂಲಕ್ಕಾಗಿ ಅವರು ಪಾದ್ರಿಯ ನಿಂದನಾತ್ಮಕವೂ ಖಂಡನಾತ್ಮಕವೂ ಆಗಿದ್ದ ಉಪದೇಶವನ್ನೆಲ್ಲ ನಗೆಮೊಗದಿಂದ ಲಘುವಾಗೆಣಿಸಿ ಸಹಿಸಿಕೊಂಡು ಹೋಗುತ್ತಿದ್ದರು. ಪಾದ್ರಿಯೂ ವಯಸ್ಸಾದ ದೊಡ್ಡವರ ಆ ರೀತಿಯ ಅಲಕ್ಷ್ಯವನ್ನು ಮನಸ್ಸಿಗೆ ಹಾಕಿಕೊಳ್ಳುತ್ತಿರಲಿಲ್ಲ. ಏಕೆಂದರೆ, ಅವನಿಗೆ ಗೊತ್ತಿತ್ತು, ತರುಣರು ತನ್ನ ಪ್ರಭಾವಕ್ಕೆ ಕ್ರಮೇಣ ಒಳಗಾಗುತ್ತಾರೆ ಎಂಬ ಸತ್ಯಸಂಗತಿ.

ಆ ದಿನ ರಾತ್ರಿ ಊಟದ ಸಮಯ ಬಂದಾಗಲಂತೂ ಬೆಟ್ಟಳ್ಳಿಯ ಮನೆಯಲ್ಲಿ ಒಂದು ಕ್ರಾಂತಿಯ ವಾತಾವರಣವೆ ಏರ್ಪಟ್ಟಿತ್ತು. ಮುಂಡಿಗೆಯ ಮರೆಯಲ್ಲಿ, ಬಾಗಿಲುಸಂದಿಯಲ್ಲಿ, ಅಡಿಗೆಮನೆಯಲ್ಲಿ, ಕೋಣೆಗಳಲ್ಲಿ ಎಲ್ಲೆಲ್ಲಿಯೂ ಗುಸುಗುಸು, ಏನೊ ಅನಿಶ್ಚಯ, ಗಡಿಬಿಡಿ: ರಾಜಕೀಯ ಮಹಾಕ್ರಾಂತಿಯ ದಿನದಂದು ಆ ರಾಜ್ಯದ ರಾಜಧಾನಿಯಲ್ಲಿ ನಡೆಯಬಹುದಾದ ಉದ್ವಿಗ್ನ ಪರಿಸ್ಥಿತಿಯಂತೆ!" [೪]

ಭಿನ್ನಧರ್ಮೀಯನೊಬ್ಬನಿಗೆ ಊಟ ಬಡಿಸುವ ಸಾಮಾನ್ಯ ವಿಚಾರದ ಬಗೆಗೆ ಬೆಟ್ಟಳ್ಳಿ ಮನೆಯಲ್ಲಿ ಏರ್ಪಡುವ ಕ್ರಾಂತಿಯ ವಾತಾವರಣ ಹೊಸ ಧರ್ಮವೊಂದರ ಸಂಪರ್ಕದಿಂದ ಎದುರಾಗುವ ತಲ್ಲಣಗಳನ್ನು ಪ್ರಕಟಿಸುತ್ತದೆ. ಅಂತಹ ತಲ್ಲಣಗಳ ಸಂದರ್ಭದಲ್ಲಿ ಬೆಟ್ಟಳ್ಳಿ ಮನೆಯಲ್ಲಿ ಊಟಕ್ಕೆ ಹಾಕುವ ಪ್ರಕ್ರಿಯೆ ಒಂದು ನಾಟಕದ ಸನ್ನಿವೇಶದಂತೆ ಕಾಣಿಸುತ್ತದೆ. ತನ್ನ ಧರ್ಮದ ಅತ್ಯಂತ ಕೆಳಸ್ತರದವನಿಗಿಂತಲೂ, ಅಸ್ಪೃಶ್ಯನಿಗಿಂತಲೂ ಅನ್ಯ ಧರ್ಮಿಯನು ಕಡೆಯಾಗಿ ಕಾಣುತ್ತಾನೆ. ಊಟಕ್ಕೆ ಹಾಕುವ ಈ ನಾಟಕೀಯ ಸನ್ನಿವೇಶದಲ್ಲಿ ಕಿಲಸ್ತರ ಪಾದ್ರಿಯನ್ನು ಊಟಕ್ಕೆ ಕೂರಿಸುವ ಸ್ಥಳದ ಬಗ್ಗೆ ಹಾಗೂ ಬಾಳೆಎಲೆ ಹಾಕುವಾಗ ಕೀತು ಹಾಕಬೇಕೊ, ಕುಡಿಹಾಕಬೇಕೊ, ಕಂಡುಹಾಕಬೇಕೊ ಎಂಬ ವಿಚಾರಗಳ ಜಿಜ್ಞಾಸೆಯಲ್ಲಿಯೂ, ಅನ್ನವನ್ನು ಯಾರು ಬಡಿಸಬೇಕೆಂಬ ವಿಚಾರದ ಸಮಸ್ಯೆಗಳಲ್ಲಿಯೂ ಜಾತಿ ಕೆಡುವುದು ಮಹಾ ಅಪರಾಧವೆಂಬಂತೆ ಮಲೆನಾಡಿನ ಈ ಕೌಟುಂಬಿಕ ವಾತಾವರಣ ಪರಿಚಯಿಸುತ್ತದೆ. ಆದರೆ ಪಾದ್ರಿ ಜೀವರತ್ನಯ್ಯನ ಮೊದಲ ಭೇಟಿಯ ಸಂದರ್ಭದಲ್ಲಿ ಎದುರಾದ ಈ ಬಗೆಯ ಗೊಂದಲಗಳು, ಅನುಮಾನಗಳು ಆನಂತರ ಇಲ್ಲವಾಗಿ ಹೊಸ ಸಂಸ್ಕೃತಿಯೊಂದು ಹೊತ್ತು ತರುವ ಆಕರ್ಷಣೆಗಳಿಗೆ ಮತ್ತು ಅವರ ಸೇವಾ ಕಾರ್ಯಗಳಲ್ಲಿ ಮಲೆನಾಡಿನ ಬದುಕು ಬದಲಾಗುವುದನ್ನು ಕಾಣುತ್ತೇವೆ.

ದೇವಯ್ಯ ಮತ್ತು ಚಿನ್ನಪ್ಪಗೌಡನ ಬಾಹ್ಯ ಮತ್ತು ಆಂತರಿಕ ಬದಲಾವಣೆಗಳು ಮೊದಮೊದಲು ಅಪಶಕುನಗಳಂತೆ ಕಂಡು ಬಂದರೂ, ಆನಂತರ ನಿಧಾನಗತಿಯಲ್ಲಿ ಹೊಂದಿಕೊಳ್ಳುವುದನ್ನು ಕಾಣುತ್ತೇವೆ. ವಸಾಹತು ಸಂಸ್ಕೃತಿಯು

ಹೊತ್ತುತಂದ ಆಧುನಿಕ ವಸ್ತು ಪ್ರಪಂಚದೊಂದಿಗೆ ಹೊಸ ವಿಚಾರಧಾರೆಯೊಂದು ಮಲೆನಾಡನ್ನು ಪ್ರವೇಶಿಸುತ್ತಿರುವ ಚಿತ್ರಣವು ಇಲ್ಲಿದೆ. ಇದನ್ನು ದೇವಯ್ಯನ ಬಾಹ್ಯ ಮತ್ತು ಆಂತರಿಕ ಬದಲಾವಣೆಗಳಲ್ಲಿಯೂ, ಆರೋಗ್ಯ ಮತ್ತು ನೈರ್ಮಲ್ಯದ ಬಗೆಗಿನ ಅವನ ಧೋರಣೆಗಳಲ್ಲಿಯೂ, ಮಲೆನಾಡಿನ ಧಾರ್ಮಿಕ ವಿಚಾರಗಳ ಬಗೆಗೆ ಅವನು ತೋರುವ ಪ್ರತಿಕ್ರಿಯೆಗಳಲ್ಲಿಯೂ ಕಾಣುತ್ತೇವೆ. ಹಾಗೆಯೇ ಪಾದ್ರಿ ಜೀವರತ್ನಯ್ಯನ ಮುಖಾಂತರವಾಗಿ ಹರಿದುಬರುವ ಹೊಸ ವಿಚಾರಧಾರೆಗಳು ಮತ್ತು ಸ್ಥಳೀಯ ಪಾರಂಪರಿಕ ವಿಚಾರಧಾರೆಗಳು ಮುಖಾಮುಖಿಗೊಳ್ಳುವುದನ್ನು ಇದೇ ಭಾಗದಲ್ಲಿ ಕಾಣುತ್ತೇವೆ. ಕಿಲಸ್ತರ ಪಾದ್ರಿ ಜೀವರತ್ನಯ್ಯನ ವೈಚಾರಿಕತೆಗೆ ಮಾರುಹೋದ ದೇವಯ್ಯನ ಕಾಮುಕತೆಯನ್ನು ನಿಯಂತ್ರಿಸುವುದು "ಕಲ್ಲೂರ ಗಣಪತಿ". ಇದಕ್ಕೆ ಪೂಜೆ ಸಲ್ಲಿಸಿದ ನಂತರ ಎಂದು ನಡೆದುಕೊಳ್ಳುವ ನೆಪದಲ್ಲಿ ಬಾಣಂತಿ ಹೆಂಡತಿಯ ಆರೋಗ್ಯ ರಕ್ಷಣೆಗಾಗಿ, ರೂಢಿಸುವ ಸಾಂಪ್ರದಾಯಿಕ ವ್ರತಾಚಾರಣೆಗಳ ಹಿಂದಿರುವ ವಿವೇಕವನ್ನು ತಿಳಿಯಲಾರದ್ದನ್ನು ಈ ಕಾದಂಬರಿಯ ಸಂವೇದನೆ ಪ್ರಶ್ನಿಸುತ್ತದೆ. ಹಾಗೆಯೇ ಹೊಸ ಪಾದ್ರಿಯ ವೈಚಾರಿಕತೆ ಮತ್ತು ಅವನ ಪಾಂಡಿತ್ಯದ ಜೊತೆಗೆ ಗಡ್ಡದಯ್ಯನ ವೇದಾಂತ ದರ್ಶನವನ್ನು ಮುಖಾಮುಖಿಯಾಗಿಸುವ ಪ್ರಕ್ರಿಯೆಯು ಮಾರ್ಮಿಕವಾಗಿದೆ.

ಮೊದಲೇ ಹೇಳಿದಂತೆ, ವಸಾಹತು ಸಂಸ್ಕೃತಿ ತನ್ನ ಅಧಿಕಾರಯಂತ್ರವನ್ನು ತನ್ನ ಕಾಲೋನಿಗಳಲ್ಲಿ ಬಲಗೊಳಿಸಲು ಮತಾಂತರವನ್ನು ಒಂದು ಅಸ್ತ್ರದಂತೆ ಬಳಸಿದ್ದನ್ನು 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಪ್ರಮುಖ ಭಿತ್ತಿಯಾಗಿ ಚಿಂತಿಸುತ್ತದೆ. ಅಂದರೆ ಬ್ರಿಟಿಷರ ರಾಜಕೀಯ ಯಂತ್ರ ತನ್ನ ಅಸ್ತಿತ್ವವನ್ನು ಬಲಗೊಳಿಸುವ ದೆಸೆಯಲ್ಲಿ ಶಿಕ್ಷಣ, ಆರೋಗ್ಯ, ಹೊಸ ಹೊಸ ಯಂತ್ರೋಪಕರಣಗಳು, ಮೊದಲಾದ ಸುಧಾರಣಾವಾದಿ ಪ್ರಯತ್ನಗಳಿಗೆ ಕೈಹಾಕಿ ಸ್ಥಳೀಯ ಜನರ ನಂಬಿಕೆಗೆ ವಿಶ್ವಾಸಕ್ಕೆ ಹತ್ತಿರವಾಗುತ್ತಾ ತನ್ನ ಧರ್ಮವನ್ನು ವಿಸ್ತರಿಸುವ ಕೆಲಸವನ್ನು ಮಾಡಿತು. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಈ ಕೆಳಗಿನ ಉದ್ಧರಣೆ ಈ ಮೇಲಿನ ಅಂಶವನ್ನು ವಿಶದಪಡಿಸುತ್ತದೆ.

> "ಆಗತಾನೆ ಹಳೆಯ ತರಹದ ಕೂಲಿಮಠಗಳ ಕಾಲವೂ ಹಳೆಯ ವಿದ್ಯಾಭ್ಯಾಸ ಪದ್ಧತಿಯೂ ಮುಕ್ತಾಯಗೊಂಡು, ಆಂಗ್ಲೇಯರ ಆಡಳಿತದ ರೀತಿಯೂ ಇಂಗ್ಲೀಷಿನ ಪ್ರಭಾವವೂ ಮೊಳೆದೋರುತ್ತಿದ್ದ ಸಂಧಿಸಮಯ. ಮಲೆನಾಡಿನ ಆ ಹೊಸ ಪ್ರಭಾವದ ಮುಂಬೆಳಕನ್ನು ಮೊತ್ತ ಮೊದಲು ತರುವುದರಲ್ಲಿ ಕ್ರೈಸ್ತ ಪಾದ್ರಿಗಳ ಕಾರ್ಯ ಗಣನೀಯವಾಗಿತ್ತು. ಶ್ಲಾಘನೀಯವಾಗಿತ್ತು. ತಮ್ಮ ಮತಕ್ಕೆ ಜನರನ್ನು ಸೇರಿಸಿಕೊಳ್ಳುವ ಧಾರ್ಮಿಕ ಪ್ರಯತ್ನಕ್ಕೆ ಪೀಠಿಕೆಯಾಗಿತ್ತು ಈ ಲೌಕಿಕ ಸೇವಾ ಕರ್ಮ. ಸಾಮಾನ್ಯಜನ ಬಹುಕಾಲದಿಂದಲೂ ಹಿಂದೂಧರ್ಮದ ಹೆಸರಿನಲ್ಲಿ ಬ್ರಾಹ್ಮಣರು ಒಡ್ಡಿದ ಮೂಢ ಮತಾಚಾರಗಳ ಕೂಣಿಗೆ ಸಿಕ್ಕು ಬಿದ್ದಿದ್ದರು. ಅವರನ್ನು ಆ ಕೂಣಿಯಿಂದ ತಪ್ಪಿಸಿ ರಕ್ಷಿಸುವ ನೆವದಲ್ಲಿ ಕ್ರೈಸ್ತ ಪಾದ್ರಿಗಳು ತಮ್ಮ ಮತದ ಬಲೆಯನ್ನು ಬೀಸಿ ಅದರೊಳಕ್ಕೆ ಹಾರಿ ಬೀಳುವ ಪ್ರಾಣಿಗಳನ್ನು ಭಕ್ಷಿಸುವ ಅಥವಾ ಅವರ ರೀತಿಯಲ್ಲಿ ರಕ್ಷಿಸುವ ಅಭಿಸಂಧಿಯನ್ನಿಟ್ಟುಕೊಂಡಿದ್ದರು. ಮಂಡಗದ್ದೆಯಲ್ಲಿ ಹೆರಿಗೆ ಆಸ್ಪತ್ರೆ ಸ್ಥಾಪಿಸಿದಂತೆ

ತೀರ್ಥಹಳ್ಳಿ ದೇವಂಗಿ ಮೊದಲಾದೆಡೆಗಳಲ್ಲಿ ಸ್ಕೂಲುಗಳನ್ನೂ ಸ್ಥಾಪಿಸಿದ್ದರು. ಮಲೇರಿಯಾದಲ್ಲಿ ನರಳಿ ನೂರಕ್ಕೆ ತೊಂಬತ್ತೊಂಬತ್ತರಷ್ಟು ಬಸುರಿ - ಬಾಣಂತಿ - ಸಾವನ್ನಪ್ಪುತ್ತಿದ್ದ ತರುಣ ವಯಸ್ಸಿನ ಮಾತೆಯರನ್ನು ಕಾಪಾಡಿ, ತಾವು ಕರುಣೆಯ ಅವತಾರವಾಗಿದ್ದ ಯೇಸುಕ್ರಿಸ್ತನ ಅನುಯಾಯಿಗಳೆಂಬುದನ್ನು ಪ್ರತ್ಯಕ್ಷ ನಿದರ್ಶನದಿಂದ ತೋರಿಸಿಕೊಟ್ಟು, ಜನರ ಅನುರಾಗ ವಿಶ್ವಾಸಗಳನ್ನು ಕೃತಜ್ಞತೆಯನ್ನು ಸೂರೆಗೊಂಡು, ಅದನ್ನು ತಮ್ಮ ಮೂಲೋದ್ದೇಶ ಮತ್ತು ಮೂಲ ಕರ್ತವ್ಯವಾಗಿದ್ದ ಮತಾಂತರ ಗೊಳಿಸುವ ಕಾರ್ಯಕ್ಕೆ ಉಪಯೋಗಿಸಿಕೊಂಡರು." [8]

ಹಳೆಯ ವಿದ್ಯಾಭ್ಯಾಸಪದ್ಧತಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ, ವಸಾಹತು ಶಿಕ್ಷಣ ಕ್ರಮಕ್ಕೆ ಆಕರ್ಷಿತಗೊಳ್ಳುತ್ತಿರುವ ಬಗೆಯನ್ನು ಇಲ್ಲಿ ಕಾಣುತ್ತೇವೆ. ಹೊಸ ಶಿಕ್ಷಣ ಹೊತ್ತು ತಂದ ಜ್ಞಾನ ಪ್ರಪಂಚವು ಮಲೆನಾಡಿನ ಬದುಕಿನಲ್ಲಿ ಹೊಸ ಪ್ರಭಾವದ ಮುಂಬೆಳಕನ್ನು ಮೂಡಿಸುತ್ತಿರುವುದರ ಸೂಚನೆಗಳು ಇಲ್ಲಿವೆ. ತಮ್ಮ ಮತಕ್ಕೆ ಜನರನ್ನು ಸೇರಿಸಿಕೊಳ್ಳುವ ಮತಾಂತರದ ಆಮಿಷವಾಗಿ ಮೇಲು ನೋಟಕ್ಕೆ ಆಧುನಿಕ ಶಾಲೆ ಕಂಡರೂ ಪುರೋಹಿತಶಾಹಿಯ ಕಬಂಧಬಾಹುಗಳ ಹಿಡಿತದಿಂದ ಬಿಡಿಸಿಕೊಳ್ಳಲು ಹೊಸ ಶಾಲೆ ಹೊಸ ಎಚ್ಚರವನ್ನು ಮೂಡಿಸಿತು ಎಂಬ ವಿಚಾರ ಕಾದಂಬರಿಯ ಉದ್ದಕ್ಕೂ ಕಾಣಸುತ್ತದೆ.

ಸ್ಥಳೀಯ ಪುರೋಹಿತಶಾಹಿಯ ಮತಾಚಾರಗಳ ಕ್ರೌರ್ಯವನ್ನು ಮುಂದುಮಾಡಿ ಅಂತಹುದೇ ಮತ್ತೊಂದು ಧಾರ್ಮಿಕ ಹಿಡಿತಕ್ಕೆ ಸಿಕ್ಕಿಕೊಳ್ಳುವ ಅಪಾಯದ ಬಗೆಗೂ ಕುವೆಂಪು ಸಂವೇದನೆ ಎಚ್ಚರ ವಹಿಸುತ್ತದೆ. ಅಂದರೆ ಸ್ಥಳೀಯ ಪುರೋಹಿತಶಾಹಿಯು ಕೆಳವರ್ಗಗಳನ್ನು ಮೌಢ್ಯಮತಾಚಾರಗಳ ಬಲೆಗೆ ಸಿಲುಕಿಸಿದ ಸಂದರ್ಭವೊಂದನ್ನ ಕ್ರೈಸ್ತ ಪಾದ್ರಿಗಳು ತಮ್ಮ ಮತಪರವಾದ ಅಂತಹುದೇ ತಂತ್ರಕ್ಕೆ ಗುರಿಪಡಿಸಿಕೊಂಡ ಬಗೆಯನ್ನು ವಿಶ್ಲೇಷಿಸುತ್ತದೆ. ಒಂದು ಧರ್ಮದ ಕ್ರೌರ್ಯಕ್ಕೆ ಸಿಲುಕಿದ ಕೆಳವರ್ಗವನ್ನು ಅಂತಹುದೇ ಮತ್ತೊಂದು ಧರ್ಮದ ಕ್ರೌರ್ಯಕ್ಕೆ ಗುರಿಪಡಿಸುವುದನ್ನು ಕಾದಂಬರಿಯ ಇಂಥ ಅನೇಕ ಭಾಗಗಳು ಪ್ರಶ್ನಿಸುತ್ತವೆ.

ತಮ್ಮ ಮಲೆನಾಡಿನ ಗ್ರಾಮೀಣ ಬದುಕು ಸ್ಥಿತ್ಯಂತರಗೊಳ್ಳುತ್ತಿರುವ ಅಸಂಖ್ಯ ಸಮೃದ್ಧ ವಿವರಗಳನ್ನು ಕುವೆಂಪು ಕಥನಗಳು ಪರಿಚಯಿಸುತ್ತವೆ. ಈ ಕಥನಗಳು ಸಮಾಜ ವ್ಯವಸ್ಥೆಯ ಊಳಿಗಮಾನ್ಯ ಸಂದರ್ಭ ಹಾಗೂ ಕೆಳಸ್ತರದ ಕೂಲಿಕಾರರ ಸಂಬಂಧಗಳ ಅಂತರ್ ಪ್ರಕ್ರಿಯೆಗಳನ್ನು ದಟ್ಟ ವಿವರಗಳೊಂದಿಗೆ ಪರಿಚಯಿಸುತ್ತವೆ. ಹಾಗೆಯೇ ನಮ್ಮ ಕೆಳಸ್ತರದ ಬದುಕಿನ ಆಂತರ್ಯದಲ್ಲಿಯೇ ಪ್ರಕಟವಾಗುವ ಸೂಕ್ಷ್ಮವಾದ ಆಂತರಿಕ ಸಂಘರ್ಷವನ್ನು ದಾಖಲು ಮಾಡುತ್ತವೆ. ಕೆಳವರ್ಗದ ಚೈತನ್ಯವನ್ನು, ಆ ಚೈತನ್ಯದ ಪ್ರತಿರೋಧದ ನೆಲೆಗಳನ್ನು ಒಟ್ಟಾರೆ ಅಭಿವ್ಯಕ್ತಿಗೆ ಗುರಿಪಡಿಸುವುದು ಕುವೆಂಪುರವರ ಸೃಜನಶೀಲತೆಯ ಮುಖ್ಯ ಆಶಯವಾಗಿದೆ.

ಈ ಬಗೆಯ ಚಿಂತನೆ ಕುವೆಂಪು ಅವರ ಕಾದಂಬರಿಗಳಲ್ಲಿ ಪ್ರಕಟವಾಗಿರುವುದನ್ನು ಡಿ.ಆರ್. ನಾಗರಾಜ್, ಎಸ್. ಚಂದ್ರಶೇಖರ್, ಕೆ.ಸಿ. ಶಿವಾರೆಡ್ಡಿ ಮತ್ತು ರಾಜಾರಾಮ ಹೆಗಡೆ ಮೊದಲಾದವರು ಈಗಾಗಲೇ ವಿಶ್ಲೇಷಣೆಗೆ ಗುರಿಪಡಿಸಿರುವುದನ್ನು ಈ ಕೆಳಗಿನ ಉದ್ಧರಣೆಗಳಲ್ಲಿ ಕಾಣಬಹುದು.

"...... ವರ್ಗಗಳು ಪ್ರಜ್ಞಾವಂತ ವರ್ಗಗಳಾಗಿ ರೂಪುಗೊಂಡು ಪ್ರಗತಿಪರ ಚಾರಿತ್ರಿಕ ಹೋರಾಟ ನಡೆಸುವುದು ಇಂತಹ ಸಮಾಜಗಳಲ್ಲಿ ಅಸಾಧ್ಯ ಕೂಡ. ತುಂಬಿ ತುಳುಕುವ ದಾರಿದ್ರ್ಯವಿದ್ದರೂ, ಶೋಷಣೆಯಿದ್ದರೂ ಒಂದು ವರ್ಗ ತನಗಾಗಿ ಇದನ್ನು ಪ್ರತಿಭಟಿಸುವುದು ಸಾಧ್ಯವಾಗುವುದಿಲ್ಲ. ಬಂಡವಾಳಶಾಹಿ ಪೂರ್ವದ ಈ ಸಮಾಜ ವ್ಯವಸ್ಥೆಗಳಲ್ಲಿ ವಾಸ್ತವ ವ್ಯವಸ್ಥೆ ಮತ್ತು ನ್ಯಾಯಬದ್ಧ ವ್ಯವಸ್ಥೆಗಳ ನಡುವೆ ಘರ್ಷಣೆ ಖಚಿತವಾಗಿ ರೂಪುಗೊಂಡಿರುವುದಿಲ್ಲ. ಇಲ್ಲಿರುವ ಅಶಾಂತಿಯ, ಸಂಘರ್ಷದ ಸ್ವರೂಪವೇ ಬೇರೆ. ಇದನ್ನೇ ಊಳಿಗಮಾನ್ಯ ಪದ್ಧತಿಯೊಳಗೆ ನಡೆಯುವ 'ಮೌನ ಸಂಘರ್ಷ' ಎನ್ನುವುದು. ತತ್ವಜ್ಞಾನಿ ಹೂವಯ್ಯ ಗುರುತಿಸಿಲ್ಲದ ಈ ಸಂಘರ್ಷವನ್ನು ಕಲಾವಿದ ಕುವೆಂಪು ಗುರುತಿಸಿದ್ದಾರೆ.

"....... ಅಂದರೆ ನಾನು ಮೇಲೆ ಹೇಳಿದ ಅಶಾಂತಿಯ, ಮೌನ ಸಂಘರ್ಷದ ಜ್ವಾಲಾಮುಖಿಗಳು ಕಾದಂಬರಿಯ ಮುಖ್ಯಸತ್ವ. ಪ್ರತಿಯೊಂದು ಘಟನೆಯೂ ಇಲ್ಲಿ ವರ್ಗ ಸಂಬಂಧಗಳ ಹಿನ್ನೆಲೆಯಲ್ಲಿಯೇ ನಡೆಯುತ್ತಿದೆ. ...... ಅಷ್ಟೇ ಅಲ್ಲದೆ, ಜಾತಿ ಪದ್ಧತಿಯ ತೆಕ್ಕೆಯಿಂದ ಬಿಡಿಸಿಕೊಳ್ಳಲು ಬ್ರಾಹ್ಮಣೇತರ ಜಾತಿಗಳು ನಡೆಸುತ್ತಿದ್ದ ಪ್ರಯತ್ನದ ಚಿತ್ರಣವೂ ಇಲ್ಲಿ ಅತ್ಯಂತ ಮಾರ್ಮಿಕವಾಗಿ ಬಂದಿದೆ. ಕ್ರೈಸ್ತ ಮತವನ್ನು ಒಪ್ಪಿಕೊಳ್ಳುವುದೆಂದರೆ ಸಾಮಾಜಿಕ ಚಲನೆಗೆ ಏಣಿ ಇದ್ದಂತೆ ಎಂಬ ತಿಳುವಳಿಕೆ ಇಲ್ಲಿಯ ಮತಾಂತರದ ಹಿಂದಿರುವ ಶಕ್ತಿ."[೬]

"...... ಭಾರತೀಯ ಸಂಸ್ಕೃತಿ ಪಾಶ್ಚಾತ್ಯ ಸಂಸ್ಕೃತಿಯಂತೆ ಇಲ್ಲ ಎಂಬುದು. ಭಾರತೀಯ ಸಂಸ್ಕೃತಿಯ ಸ್ಥಿತಿಯನ್ನು ಅವೈಚಾರಿಕ ಸ್ಥಿತಿಯೊಂದು, ಆ ಕಾರಣದಿಂದ ಭಾರತೀಯರಿಗೆ ಒಳ್ಳೆಯದಾಗಬೇಕಾದರೆ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಪ್ರಗತಿಯ ಜರೂರು ಇದೆಯೆಂದೂ ಹಾಗೂ 'ವಸಾಹತುಶಾಹಿ' ಈ ಪ್ರಗತಿಯನ್ನು ಸಾಧಿಸಲು ಅನಿವಾರ್ಯವೆಂದು ವಿಚಾರವಾದ ಹಾಗೂ ವಿಜ್ಞಾನವನ್ನು ಆಧರಿಸಿದ ಆಧುನಿಕತೆಯ ವಾದ ಬೆಳೆಯುತ್ತದೆ."

"....... ಅಂದರೆ ಹಿಂದೂಧರ್ಮ ಅವನತಿ ಹೊಂದಿದೆ, ಬ್ರಾಹ್ಮಣರ ಪುರೋಹಿತಶಾಹಿ ಅದಕ್ಕೊಂದು ಕಾರಣ, ಹಿಂದೂಧರ್ಮ ತನ್ನ ಸತ್ವವನ್ನು ಪುನಃ ಜಾಗೃತಗೊಳಿಸಿಕೊಳ್ಳಬೇಕು, ಮೂಢಾಚಾರಗಳು ತೊಲಗಬೇಕು ಎಂಬ ಹಂಬಲಗಳೆಲ್ಲ ಈ ಆಧುನಿಕ ರಾಷ್ಟ್ರೀಯ ಪ್ರಜ್ಞೆಗಳ ತರ್ಕಗಳಾಗಿವೆ. ಕ್ರಿಶ್ಚಿಯನ್ ಪಾದ್ರಿಗಳು ಹಿಂದೂ ಧರ್ಮದ ಈ ದುರ್ಬಲಾವಸ್ಥೆಯ ದುರುಪಯೋಗ ಮಾಡಿಕೊಳ್ಳಲು ಕಾಯುತ್ತಿರುತ್ತಾರೆ."

"....... ಭಾರತೀಯ ಅಂಧ ವಿಶ್ವಾಸಗಳನ್ನು ಟೀಕಿಸಿ ತಮ್ಮ ಧರ್ಮ ಪ್ರಚಾರ ಮಾಡುತ್ತಿರುವ ಕ್ರಿಶ್ಚಿಯನ್ ಪಾದ್ರಿಗಳು ಇಲ್ಲೂ ಇದ್ದಾರೆ. ಆದರೆ ವಿಫಲ ಯತ್ನ ಮಾಡುತ್ತಿರುವ ಮೂರ್ಖರಾಗಿ ಅವರು ನೋಡಲ್ಪಟ್ಟಿದ್ದಾರೆ. ಅಂದರೆ ಪಾದ್ರಿಗಳ ತರ್ಕಕ್ಕೆ ನಿಲುಕದ ಅದ್ಭುತವಾಗಿ 'ಹಿಂದೂ ಧರ್ಮ'ವನ್ನು ಪ್ರತಿಷ್ಠಾಪಿಸಲಾಗಿದೆ. ಇದು ಕೇವಲ ಸನಾತನ ಹಿಂದೂ ಧರ್ಮದ ಸಂದರ್ಭದಲ್ಲಿ ಮಾತ್ರವಲ್ಲ, ತೀರ ಅವೈಜ್ಞಾನಿಕ ಎನ್ನಬಹುದಾದ ಸಂಪ್ರದಾಯಗಳ ಸಂದರ್ಭದಲ್ಲಿ ಕೂಡ ದೃಷ್ಟಾಂತವಾಗುತ್ತದೆ."[೭]

"....... ಮತ್ತೊಂದು ಹಂತದಲ್ಲಿ ಬ್ರಾಹ್ಮಣ ವಲಯ ಗ್ರಾಮೀಣ ಕೆಳವರ್ಗವನ್ನು ಮೂಢ ಮತಾಚಾರಗಳ ಬಲಿಗೆ ಸಿಲುಕಿದ ಸಂದರ್ಭವನ್ನು ಕ್ರೈಸ್ತ ಪಾದ್ರಿಗಳು ತಮ್ಮ ಪರವಾದ ತಂತ್ರಕ್ಕೆ ಗುರಿಪಡಿಸಿಕೊಂಡ ಕಾರ್ಯವನ್ನು ಕೂಡ ಇಲ್ಲಿ ಕಾಣುತ್ತೇವೆ. ಎಂದರೆ ಒಂದು ಧರ್ಮದ ಕ್ರೌರ್ಯಕ್ಕೆ ಸಿಲುಕಿದ್ದ ಕೆಳವರ್ಗವನ್ನು ಅಂತದ್ದೇ

ಸ್ವಾರ್ಥಸಾಧನೆಯ ಆಶಯಗಳಿಂದ ಕೂಡಿದ ಮತ್ತೊಂದು ದರ್ಮಕ್ಕೆ ಸೆಳೆದುಕೊಳ್ಳುವುದನ್ನು ಕುವೆಂಪು ತಮ್ಮ ಕಾದಂಬರಿಗಳಲ್ಲಿ ವಿವೇಚಿಸುತ್ತಾರೆ."

"........ ಸಾಂಪ್ರದಾಯಿಕ ಧರ್ಮದ ಕುಸಿತದಲ್ಲಿ ಬಿದ್ದು ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿದ್ದ ನಮ್ಮ ಗ್ರಾಮ ಜೀವನವು ಅಂಥದ್ದೇ ಕ್ರೂರವಾದ ಮತ್ತೊಂದು ವ್ಯವಸ್ಥೆಗೆ ಬಲಿ ಬೀಳುವ ಈ ಕ್ರೌರ್ಯದ ಮುಖೇನ ಕುವೆಂಪು ಅವರ ಕಾದಂಬರಿಗಳು ಒಂದು ಮುಖ್ಯ ಶೋಧನಾವಲಯವನ್ನು ನಿರ್ಮಿಸಿವೆ. ಇಂಥ ಅನೇಕ ಭಾಗಗಳು ಎರಡೂ ಕಾದಂಬರಿಯ ಉದ್ದಕ್ಕೂ ವ್ಯಾಪಿಸಿಕೊಂಡಿರುವುದನ್ನು ನಾವು ಗುರುತಿಸುತ್ತೇವೆ." "

"........ ಮೆಶನರಿಗಳು, ಮತಾಂತರದ ಪ್ರಸ್ತಾಪ ಬಂದಾಗಲೆಲ್ಲಾ ಕಾದಂಬರಿಗಳು ಸ್ವಧರ್ಮದ ಸಮರ್ಥನೆಗೆ ತೊಡಗುತ್ತವೆ. ಆದರೆ ಆಂತರಿಕವಾದ ಪುರೋಹಿತಶಾಹಿ-ಶೂದ್ರ ವರ್ಗದಲ್ಲಿ ನಡುವೆ ಸಂಘರ್ಷವೇರ್ಪಟ್ಟಾಗ ಕಾದಂಬರಿಗಳು ತೆಗೆದುಕೊಳ್ಳುವ ನಿಲುವು ಬೇರೆ ರೀತಿಯದು."

" ಎರಡೂ ಕಾದಂಬರಿಗಳು ದಟ್ಟವಾದ ಪ್ರಾದೇಶಿಕ ವಿವರಗಳಿಂದ ಕೂಡಿರುವುದೇ ಆದಕ್ಕೆ ರಾಷ್ಟ್ರೀಯತಾ ಆಯಾಮವನ್ನು ತಂದುಕೊಡುತ್ತವೆ. ಕ್ರೈಸ್ತ ಮೆಶನರಿಗಳು ಮತ್ತು ಅವರ ಮತಾಂತರ ಚಟುವಟಿಕೆಗಳ ಖಂಡನೆಯೇ ಇಲ್ಲಿ ರಾಷ್ಟ್ರೀಯತೆಯನ್ನು ಎತ್ತಿ ಹಿಡಿಯುವ ತಂತ್ರವಾಗಿ ಬಳಕೆಯಾಗಿದೆ."

" ಆದರೆ ವಸಾಹತುಸಾಹಿ-ಕ್ರೈಸ್ತ ಮೆಶನರಿಗಳ ಷಡ್ಯಂತ್ರಗಳನ್ನು ಖಂಡಿಸುವ ನಿಲುವನ್ನು ಹೊಂದಿರುವ ಕಾದಂಬರಿಗಳು ಆಧುನಿಕತೆಯನ್ನು ಒಪ್ಪಿಕೊಂಡಿರುವುದು ಗಮನಿಸಬೇಕಾದ ಅಂಶ. ಹಾಗೆಂದು ಆಧುನಿಕತೆಯನ್ನು ಅದರ ಎಲ್ಲ ಅನಿಷ್ಟಗಳೊಂದಿಗೆ ಒಪ್ಪಿಕೊಳ್ಳಲಾಗಿದೆ ಎಂದಲ್ಲ. ಹಾಗೆ ನೋಡಿದರೆ ಕಾದಂಬರಿಗಳಲ್ಲಿ ಆಧುನೀಕರಣಗಳ ಬಗ್ಗೆ ವ್ಯಕ್ತವಾಗುವುದು ಸುಧಾರಣಾವಾದಿ ಮನೋಭಾವ. ಆಧುನಿಕತೆ ಎಷ್ಟು ಬೇಕೋ ಅಷ್ಟು, ನಮಗೆ ಎಲ್ಲಿಯವರೆಗೆ ಅನುಕೂಲಕರವೋ ಅಲ್ಲಿಯವರೆಗೆ, ಆಧುನಿಕತೆ-ಸಂಪ್ರದಾಯಗಳ ನಡುವಣ ಸಂಘರ್ಷಗಳನ್ನು ದಾಖಲಿಸುವ ಕಾದಂಬರಿಗಳು ಅವೆರಡನ್ನೂ ಎದುರಾಳಿಗಳನ್ನಾಗಿ ಚಿತ್ರಿಸುವುದಿಲ್ಲ."

ಸಂಸ್ಕೃತಿಯ ನೆನಪುಗಳನ್ನು ನಾಶಗೊಳಿಸಿ ಆ ಸ್ಥಾನದಲ್ಲಿ ಹೊಸ ಸಾಂಸ್ಕೃತಿಕ ರಚನೆಗಳನ್ನು ತಂದಿರಿಸುವುದು ವಸಾಹತು ಧೋರಣೆಯ ಮುಖ್ಯ ಗುರಿ. ಇಂತಹ ಸೂಕ್ಷ್ಮ ಅವಸ್ಥಾಂತರಗಳು ಹೊಸ ವಸ್ತು - ವಿವರಗಳು ಮಲೆನಾಡಿನ ಜೀವನವನ್ನು ಹೇಗೆ ಪ್ರವೇಶಿಸುತ್ತವೆ ಎಂಬುದನ್ನು ಎರಡೂ ಕಾದಂಬರಿಗಳು ಚಿಂತಿಸುತ್ತವೆ! ಹೊಸ ವಸ್ತುಗಳ ಪ್ರವೇಶ ಮನುಷ್ಯ ಮನುಷ್ಯರ ನಡುವೆ ಅಗಾಧ ವಿಸ್ಮಯಕ್ಕೆ ಕಾರಣವಾಗುತ್ತಿರುವಂತೆಯೇ ಮಾನಸಿಕ ಯಾತನೆ, ಭಯ, ಸಂಭ್ರಮಗಳು ಮಲೆನಾಡನ್ನು ಆವರಿಸುತ್ತಿರುವುದನ್ನು ಈ ಕಾದಂಬರಿಗಳು ಪ್ರಕಟಿಸುತ್ತವೆ. ಹೊಸ ವಸ್ತುವೊಂದರ ಪ್ರವೇಶವು ಮನಸ್ಥಿತಿಯ ಹೇರುವಿಕೆ ಎಂಬುದನ್ನು ಬೈಸಿಕಲ್ಲು, ಗಡಿಯಾರ, ಲಾಟೀನು ಮೊದಲಾದ ಆಧುನಿಕ ಯಂತ್ರೋಪಕರಣಗಳ ಪ್ರವೇಶದ ಸಂದರ್ಭಗಳು ವಿಶದಪಡಿಸುತ್ತವೆ.

ತೀರ್ಥಹಳ್ಳಿ ಪಾದ್ರಿ ಜೀವರತ್ನಯ್ಯ, ಉತ್ಸಾಹಿಯುವಕನಾಗಿದ್ದ ಬೆಟ್ಟಳ್ಳಿ ದೇವಯ್ಯನಿಗೆ ಬೈಸಿಕಲ್ ಕಲಿಸುವ ಸುದ್ದಿ ಸುತ್ತಮುತ್ತಲ ಹಳ್ಳಿಗಳಿಗೆ ಹಬ್ಬ ನಿರ್ಮಾಣವಾಗುವ ವಾತಾವರಣವೇ ರೂಕ್ಷವಾಗಿದೆ. ಎತ್ತಿನಗಾಡಿಯೇ ಅಪೂರ್ವವು, ಆಶ್ಚರ್ಯಕರವು ಆಗಿದ್ದ ಆ ಕಾಲದ ಹಳ್ಳಿಗರಿಗೆ ಬೈಸಿಕಲ್ ಎಂಬ ವಿದೇಶಪದವು ಬೀಸೇಕಲ್ಲು ಎಂಬ

ಪದಕ್ಕೆ ಸಮನಾಗಿ, ಮತಾಂತರವಾಗಿ ನಿರ್ಮಾಣವಾಗುವ ನಾಟಕೀಯ ಸನ್ನಿವೇಶವು ಹೊಸ ವಸ್ತುವೊಂದರ ಪ್ರವೇಶದ ಅಸಂಖ್ಯ ಮನೋವಲಯಗಳನ್ನು ಪ್ರಕಟಿಸುತ್ತದೆ.

ಸಮತಟ್ಟಿನ ಪ್ರದೇಶವೇ ದುರ್ಲಭವಾಗಿದ್ದ ಮಲೆನಾಡಿಗೆ ಬೈಸಿಕಲ್ ನ ಪ್ರವೇಶದ ಸನ್ನಿವೇಶವನ್ನು ಕುವೆಂಪು ಕಥನ ಮಾರ್ಮಿಕವಾಗಿ ವಿಡಂಬಿಸುತ್ತದೆ. ಪಾದ್ರಿ ಜೀವರತ್ನಯ್ಯ ಬೈಸಿಕಲ್ಲನ್ನು ತಾನೇ ನೂಕಿಕೊಂಡೊ, ಹತ್ತಿಕೊಂಡೊ ಬರುವುದಕ್ಕೆ ಬದಲಾಗಿ ಅದನ್ನು ಹೊತ್ತು ತರುವಂತೆ ಬಚ್ಚನಿಗೆ ಆಜ್ಞೆಮಾಡುವುದು, ಆಧುನಿಕ ನಾಗರೀಕತೆಯ ಪ್ರಭಾವಕ್ಕೆ ಒಳಗಾದ ಬಚ್ಚನು ತನ್ನ ಕೇರಿಯ ಆಳುಕಾಳುಗಳನ್ನು ತಿರಸ್ಕಾರ, ದ್ವೇಷ, ಅಸೂಯೆಗಳಿಂದ ನೋಡುವುದು ಮತ್ತು ಬೈಸಿಕಲ್‌ನ್ನು ಹೊತ್ತು ತರಲು ಒಪ್ಪುವ ಹಾಗೂ ಅದನ್ನು ಹೊತ್ತು ತರಲಾಗದೆ ಯಂತ್ರಾವಲೋಕನದಲ್ಲಿಯೇ ಮಗ್ನನಾಗುವ ಚಿತ್ರಗಳು, ಸ್ಥಳೀಯ ಬದುಕಿನಲ್ಲಿ ಯಂತ್ರವು ನಿರ್ಮಾಣ ಮಾಡಿದ ಕೂತೂಹಲ, ಭಯ, ಆತಂಕಗಳನ್ನು ಪರಿಚಯಿಸುತ್ತದೆ.

ಆಧುನಿಕ ವಸ್ತುವಿನ ಬಗೆಗಿನ ಕೂತೂಹಲ, ಸಂಭ್ರಮಗಳಲ್ಲಿ ಮುಳುಗಿಹೋದ ಜನ ಸಾಮಾಜಿಕ ಅಂತರಗಳನ್ನು (ಜಾತಿಮತಗಳನ್ನು) ಮರೆತು ನಾ ಮುಂದು, ತಾ ಮುಂದು ಎಂದು ಆಧುನಿಕ ವಸ್ತುವನ್ನು ನೋಡಲು ಮುಟ್ಟಲು ನಿರ್ಮಾಣವಾಗುವ ಸನ್ನಿವೇಶ ಆಧುನಿಕತೆಯ, ಸಾಮಾಜಿಕ ಹೊಸ ಸಂಬಂಧವನ್ನು ಪರಿಚಯಿಸುತ್ತದೆ. ಜನರ ನೂಕಾಟದಲ್ಲಿ ಮುಟ್ಟಬಹುದಾದವರು, ಮುಟ್ಟಬಾರದವರು ಎಂಬ ಭೇದಭಾವ ಮರೆತದ್ದು ಮಾತ್ರವಲ್ಲದೆ, ಅದಕ್ಕಿಂತಲೂ ಮುಖ್ಯವಾಗಿ ಅದು ಪಾದ್ರಿಗೆ "ಮತ ಪ್ರಚಾರಕ್ಕೆ ಬೈಬುಲ್ಲು ಏಸುಕ್ರಿಸ್ತನಿಗಿಂತಲೂ ಬೈಸಿಕಲ್ಲೆ ಹೆಚ್ಚು ಪ್ರಭಾವಶಾಲಿ!" ಎಂಬ ಧಾರುಣ ಸತ್ಯವೊಂದನ್ನು ಕಾಣಿಸುತ್ತದೆ. ಬೈಸಿಕಲ್ ಸವಾರಿಯ ಸಮಷ್ಟಿ ಚಿತ್ರಣ ದೇವಯ್ಯನಂತಹ ಯುವಕರು ಮತಾಂತರಗೊಳ್ಳಲು ಒಡ್ಡಿದ ಆಮಿಷಗಳಿಗೆ, ಆಕರ್ಷಣೆಗಳಿಗೆ ಒಳಗಾಗಿ ನಡೆಸುವ ನಾಟಕಗಳಾಗಿದ್ದುವೇ ಹೊರತು ವಾಸ್ತವವಾಗಿ ಮತಾಂತರಗೊಳ್ಳುವ ನೈಜ ಮನಃಸ್ಥಿತಿಯೊಂದು ರೂಪುಗೊಂಡಿರಲಿಲ್ಲ ಎಂಬ ಸತ್ಯವನ್ನೂ ಈ ಸನ್ನಿವೇಶ ಪ್ರಕಟಿಸುತ್ತದೆ.

> "ದೇವಯ್ಯನ ಆಜ್ಞೆಯಂತೆ ಏಳೆಂಟು ಮಾರು ಉದ್ದದ ಒಂದು ಗಳುವನ್ನು ತಂದು ಬೈಸಿಕಲ್ಲಿನ ಹ್ಯಾಂಡ್ಲಿಗೆ ಜೋಡಿಸಿ, ಬಳ್ಳಿಗಳಿಂದ ಬಿಗಿದು ಸುತ್ತಿದರು. ದೂರನಿಂತು ನೋಡುತ್ತಿದ್ದವರಲ್ಲಿ ಐದಾರು ಆಳುಗಳನ್ನು ಬಳಿಗೆ ಕರೆದರು. ತಿಮ್ಮಿಯ ಅಪ್ಪ ದೊಡ್ಡಬೀರನಾದಿಯಾಗಿ ನಾ ಮುಂದು, ತಾ ಮುಂದು ಎಂದು ತವಕಿಸಿ ಬಂದವರನ್ನು ಗಾಡಿಯ ನೊಗಕ್ಕೆ ಎತ್ತು ಕಟ್ಟುವಂತೆ, ಆ ಕಡೆ ಮೂವರನ್ನು ಈ ಕಡೆ ಮೂವರನ್ನು ಗಳುವಿಗೆ ಕೈಗೊಡುವಂತೆ ಮಾಡಿದರು. ಅತ್ತಿತ್ತ ಅಲ್ಲಾಡದೆ ನೆಟ್ಟಗೆ ನಿಂತ ಬೈಸಿಕಲ್ಲಿನ ಸೀಟಿಗೆ ದೇವಯ್ಯ ಧೈರ್ಯವಾಗಿ ಹತ್ತಿ ಕೂತನು. ಗಳು ಹಿಡಿದವರು ಬೈಸಿಕಲ್ಲನ್ನು ಎಳೆದುಕೊಂಡು ಹೊರಟರು. ಗಳುವಿಗೆ ಭದ್ರವಾಗಿ ಕಟ್ಟಿದ್ದ ಹ್ಯಾಂಡಲ್ ತಿರುಗುವ ಸಂದರ್ಭವೇ ಇರಲಿಲ್ಲ. ಅದು ಗಳು ಹಿಡಿದವರ ವಶವಾಗಿ ಅವರು ಎಳೆದಷ್ಟೆ ವೇಗದಲ್ಲಿ, ಅವರು ಎಳೆದತ್ತ ಹೋಗುತ್ತಿತ್ತೇ ವಿನಾ ದೇವಯ್ಯನ ವಶದಲ್ಲಿರಲಿಲ್ಲ. ಆದರೆ ಬೈಸಿಕಲ್ಲು

> ಹೋಗುವ ಅಥವಾ ಬೀಳುವ ಭಯ ಒಂದಿನಿತೂ ಇರದ ಅವನು ದಂಡಿಗೆಯ ಮೇಲೆ ಕುಳಿತಂತೆ ಖುಷಿಯಾಗಿ ಸವಾರಿ ಮಾಡುತ್ತಿದ್ದನು. ಆದರೆ ಪಾದ್ರಿಗೆ ಗೊತ್ತಿತ್ತು: ಅದರ ಪ್ರಯೋಜನ ಬರಿಯ ನಲಿಯುವಿಕೆಯಾಗಿತ್ತೆ ಹೊರತು ಕಲಿಯುವಿಕೆ ಆಗಿರಲಿಲ್ಲ."[೧೦]

ಪಾದ್ರಿಗೆ ಗೊತ್ತಿದ್ದಂತೆ ಬೈಸಿಕಲ್ ಕಲಿಯುವಿಕೆಯ ಪ್ರಯೋಜನ ಬರಿಯ ನಲಿಯುವಿಕೆಯಾಗಿತ್ತೇ ಹೊರತು, ಕಲಿಯುವಿಕೆಯಾಗಿರಲಿಲ್ಲ ಎಂಬ ಮಾತು ದೇವಯ್ಯನಿಗೆ ಮತಾಂತರದ ಬಗೆಗಿದ್ದ ಗಾಢ ನಂಬಿಕೆಯನ್ನೇ ವಿಡಂಬಿಸುತ್ತದೆ. ಇದೇ ಭಾಗದ ಹೆಗ್ಗುಡ್ಡದ ನೆತ್ತಿಯ ನೆರಳು ಕಣಿವೆಯಲ್ಲಿ ಸೃಷ್ಟಿ ಸೌಂದರ್ಯವನ್ನು ವೀಕ್ಷಿಸುತ್ತಾ ಭಗವಂತನಿಗೆ ಸಲ್ಲಿಸುವ ಪ್ರಾರ್ಥನೆಯ ಸನ್ನಿವೇಶವು ಪಾದ್ರಿ ಜೀವರತ್ನಯ್ಯ ತನ್ನ ಮತದ ಧಾರ್ಮಿಕತೆಯನ್ನು ಅನ್ಯ ಮತಸ್ಥರ ಮೇಲೆ ಮುದ್ರಿಸುವ ಕುಶಲತೆಗಾಗಿಯೇ ಸೃಷ್ಟಿಯಾದುದೆಂಬುದನ್ನು ಕಾದಂಬರಿಯ ನಿರೂಪಕ ಸ್ಪಷ್ಟಪಡಿಸುತ್ತಾರೆ.

ಸನಾತನ ಧರ್ಮದ ಹಿಡಿತದಿಂದ ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿದ್ದ ಗ್ರಾಮ ಸಮಾಜವು ಅಂತಹುದೇ ಕ್ರೂರವಾದ ಇನ್ನೊಂದು ವ್ಯವಸ್ಥೆಗೆ ಬಲಿಯಾಗುವ ಸನ್ನಿವೇಶಗಳ ಕ್ರೌರ್ಯದ ಮುಖೇನ ಈ ಕಾದಂಬರಿಗಳು ಒಂದು ಮುಖ್ಯ ವಿಶ್ಲೇಷಣೆ ಮಾಡುತ್ತವೆ. ಇಂಥ ಅನೇಕ ಸನ್ನಿವೇಶಗಳು ಕಾದಂಬರಿಯ ಉದ್ದಕ್ಕೂ ಹರಡಿಕೊಂಡಿರುವುದನ್ನು ಗುರುತಿಸಬಹುದು.

ವಸಾಹತುಶಾಹಿ ಸಂಸ್ಕೃತಿಯು ಹೊತ್ತು ತಂದ ಕ್ರೈಸ್ತಮತ ಪ್ರಚಾರ ಹಾಗೂ ಕ್ರೈಸ್ತರು ಕೈಗೊಳ್ಳುತ್ತಿರುವ ಉದ್ಧಾರ ಕಾರ್ಯಗಳ ಆಕರ್ಷಣೆಗಳು ಒಂದು ಕಡೆಯಾದರೆ, ಭಾರತೀಯ ಧಾರ್ಮಿಕ ಪರಂಪರೆ ಪರಮಹಂಸ ಮತ್ತು ವಿವೇಕಾನಂದರ ಮೂಲಕ ಹೊಸ ಹೊಸ ವಿಮರ್ಶೆ ವಿಶ್ಲೇಷಣೆಗಳಿಗೆ ಗುರಿಯಾಗಿ, ಮಾನವೀಯ ನೆಲೆಯಲ್ಲಿ ಪಾರಂಪರಿಕ ಧರ್ಮವನ್ನು ಅರ್ಥೈಸಿಕೊಳ್ಳುತ್ತಿರುವ ಪ್ರಯತ್ನಗಳು ನಡೆಯುತ್ತಿರುವುದನ್ನು ಎರಡೂ ಕಾದಂಬರಿಗಳಲ್ಲಿ ಕಾಣುತ್ತೇವೆ. ಮುಕುಂದಯ್ಯ ಮತ್ತು ದೇವಯ್ಯರು ಗಡ್ಡದಯ್ಯನೊಡನೆ ನಡೆಸಿದ ಸಂವಾದದಲ್ಲಿ ಇಂತಹ ಅನೇಕ ಪ್ರಶ್ನೆಗಳು ಸಂಘರ್ಷಾತ್ಮಕ ನೆಲೆಯಲ್ಲಿ ವಿಶ್ಲೇಷಣೆಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಹಿಂದೂಮತ, ಜಾತಿಪದ್ಧತಿ, ಬ್ರಾಹ್ಮಣರಿಂದ ಬ್ರಾಹ್ಮಣೇತರರಿಗೆ ಆಗುತ್ತಿರುವ ಅನ್ಯಾಯ, ಹಿಂದೂ ದೇವರುಗಳಲ್ಲಿ ಕಂಡು ಬರುವ ಅನೈತಿಕ ವ್ಯಾಪಾರ, ಕ್ರೈಸ್ತ ಮತ ಪ್ರಚಾರ, ಕ್ರೈಸ್ತರು ಕೈಗೊಳ್ಳುತ್ತಿರುವ ಉದ್ಧಾರ ಕೌರ್ಯ ಮೊದಲಾದ ಪ್ರಶ್ನೆಗಳಿಗೆ ಸನ್ಯಾಸಿ ಗಡ್ಡದಯ್ಯನು ಮುಕುಂದಯ್ಯನ ಪ್ರಶ್ನೆಗಳಿಗೆ ತೋರುವ ಪ್ರತಿಕ್ರಿಯೆಯಲ್ಲಿ ಒಂದು ಕಾಲದ ಸಾಮಾಜಿಕ, ಧಾರ್ಮಿಕ ಹಾಗೂ ಸಾಮುದಾಯಿಕ ಬದುಕಿನ ವ್ಯಾಖ್ಯೆಯೊಂದನ್ನು ಈ ಕೃತಿಗಳು ಪ್ರಕಟಿಸುತ್ತವೆ.

> "ಸಂನ್ಯಾಸಿ ಹಿಂದೂಮತ, ಜಾತಿಭೇದ, ಮತಾಚಾರ ಮೌಢ್ಯ, ಬ್ರಾಹ್ಮಣ ಪುರೋಹಿತ ವರ್ಗದವರಿಂದ ಇತರರಿಗೆ ಆಗುತ್ತಿರುವ ಅನ್ಯಾಯ ಮತ್ತು ಅಪಚಾರ ಅವುಗಳನ್ನು ಕುರಿತ ದೇವಯ್ಯನ ಖಂಡನೆ ಮತ್ತು ಟೀಕೆಗಳಲ್ಲಿ ಬಹುಭಾಗವನ್ನು ಒಪ್ಪಿಕೊಂಡಿದ್ದು ಮಾತ್ರವಲ್ಲದೆ ದೇವಯ್ಯನಿಗಿಂತಲು ಸಮರ್ಥವಾಗಿ ಸ್ವಾರಸ್ಯಕರವಾಗಿ ನಿದರ್ಶನ ಪೂರ್ವಕವಾಗಿ ಅವುಗಳನ್ನು ವಿಸ್ತರಿಸಿದ್ದನು. ಆತನ ತೀಕ್ಷ್ಣ ವಿಡಂಬನೆಗೂ ನಿಶಿತ ಹಾಸ್ಯಕ್ಕೂ ವಶರಾಗಿ ದೇವಯ್ಯ, ಮುಕುಂದಯ್ಯ ಇಬ್ಬರೂ ಒಮ್ಮೊಮ್ಮೆ ಬಿದ್ದುಬಿದ್ದು

ನಕ್ಕೂ ಇದ್ದರು. ಆದರೆ ಯಾವಾಗ ವೇದಾಂತ ತತ್ವಗಳನ್ನು ಆಧರಿಸಿ, ಹಿಂದೂ ಧರ್ಮದ ಮತ್ತು ಭಾರತೀಯ ದೃಷ್ಟಿಯ ಸಮರ್ಥನೆಗೆ ಕೈಹಾಕಿದನೊ ಆಗ ಶ್ರೋತೃಗಳೆಲ್ಲರೂ ಒಂದು ಭೂಮಾನುಭೂತಿಯ ಅನುಭವದಲ್ಲಿ ಡಂಗಾಗಿ ಹೋಗಿದ್ದರು. ಹಿಂದೂಗಳಾಗಿದ್ದ ಅವರು ಅದೆಂತಹ ಮಹೋನ್ನತ ದಿವ್ಯ ದರ್ಶನದ ಆಸ್ತಿಗೆ ಹಕ್ಕುದಾರರಾಗಿದ್ದಾರೆ ಎಂಬುದನ್ನು ಆತನು ವಿವರಿಸಿದಾಗ ಆ ಮಂಟಪದಲ್ಲಿ ಒಂದು ದಿವ್ಯ ಆರಾಧನೆಯ ಸಾನಿಧ್ಯವೆ ಸೃಷ್ಟಿಯಾಗಿತ್ತು! ಅದರಲ್ಲಿಯೂ ಆತನು ಚಿಕಾಗೊ ಸರ್ವಧರ್ಮ ಸಮ್ಮೇಲನದಲ್ಲಿ, ಅಂದಿಗೆ ಮೂರೇ ವರ್ಷಗಳ ಹಿಂದೆ, ಸ್ವಾಮಿ ವಿವೇಕಾನಂದ ಎಂಬೊಬ್ಬ ಸಂನ್ಯಾಸಿ ಹಿಂದೂ ಧರ್ಮದ ಮೇಲ್ಮೆಯ ವಿಚಾರವಾಗಿ ಉಪನ್ಯಾಸ ಮಾಡಿ, ಲೋಕವೆಲ್ಲ ಬೆರಗಾಗುವಂತೆ ದಿಗ್ವಿಜಯಿಯಾಗಿರುವ ಸಂಗತಿಯನ್ನು ರೋಮಾಂಚನಕಾರಿಯಾದ ಭಾಷಾರೀತಿಯಿಂದ ವರ್ಣಿಸಿದಾಗಂತೂ ದೇವಯ್ಯನಿಗೆ ಕುಳಿತುಕೊಳ್ಳಲಾಗಲಿಲ್ಲ; ಎದ್ದುನಿಂತು ಕುಣಿದಾಡಬೇಕೆಂಬ ಮನಸ್ಸನ್ನು ಹೇಗೊ ತಡೆದುಕೊಂಡನು.

ಸಂನ್ಯಾಸಿ ಮತ್ತು ಹೇಳಿದನು: "ಆ ಸ್ವಾಮಿ ವಿವೇಕಾನಂದರು ಇಂಡಿಯಾಕ್ಕೆ ಬರುವ ದಾರಿಯಲ್ಲಿದ್ದಾರೆ. ಬಂದಮೇಲೆ ಭರತಖಂಡವನ್ನೆಲ್ಲ ಸಂಚರಿಸಿ, ಬೋಧಿಸಿ, ಭಾಷಣಮಾಡಿ ಹೊಸದೊಂದು ಯುಗಶಕ್ತಿಯನ್ನೆ ಉದ್ಬೋಧನಗೊಳಿಸುತ್ತಾರೆ. ಹಿಂದೂಧರ್ಮವು ಬ್ರಾಹ್ಮಣ ಪುರೋಹಿತರಿಂದ ಪಾರಾಗಿ, ಕ್ರೈಸ್ತಾದಿ ಮತಪ್ರಚಾರಕರಿಗೆ ದುರ್ಗಮವಾಗಿ, ತನ್ನ ವೇದೋಪನಿಷತ್ತಿನ ಶುದ್ಧ ವೇದಾಂತ ದರ್ಶನದಲ್ಲಿ ಪ್ರತಿಷ್ಠಿತವಾಗುವ ಕಾಲ ಸಮೀಪಿಸುತ್ತಿದೆ. ಅದಕ್ಕಾಗಿ ನಾನೂ, ನನ್ನಂತಹ ಇತರ ಕೆಲವರೂ, ದೇಶದ್ಯಾಂತ ಸಂಚರಿಸಿ, ಸ್ಥಳೀಯ ದೇವತಾಶಕ್ತಿಗಳನ್ನು ಎಚ್ಚರಿಸುತ್ತಿದ್ದೇವೆ. ನಾನು ಸ್ವಾಮಿ ವಿವೇಕಾನಂದರು ಕೊಲಂಬೋ ನಗರಕ್ಕೆ ಬರುವಷ್ಟರಲ್ಲಿ ಈ ಕರ್ತವ್ಯವನ್ನು ಮುಗಿಸಿ, ಅವರನ್ನು ಎದುರುಗೊಂಡು ಸ್ವಾಗತಿಸಲು ಅಲ್ಲಿಗೆ ಹೋಗುವ ಹಾದಿಯಲ್ಲಿದ್ದೇನೆ." ೧೧

ಈ ಮೇಲಿನ ಉದ್ಧರಣೆಯಲ್ಲಿ ಗಡ್ಡದಯ್ಯನ ಉಪದೇಶ ಮುಕುಂದಯ್ಯ ಮತ್ತು ದೇವಯ್ಯರನ್ನು ಒಂದು ಹೊಸ ಜನ್ಮಕ್ಕೆ ಅಥವಾ ಹೊಸಚಿಂತನೆಗೆ ಗುರಿಪಡಿಸುತ್ತದೆ. ಹಾಗೆಯೇ ಕ್ರೈಸ್ತ ಮತಕ್ಕೆ (ಧರ್ಮಕ್ಕೆ) ಮತಾಂತರಗೊಳ್ಳಲು ಸಿದ್ಧನಾಗಿದ್ದ ದೇವಯ್ಯನನ್ನು ಒಳತೋಟಿಗೆ ಗುರಿಪಡಿಸುತ್ತದೆ. P. 170 [ ಪಾದ್ರಿ ಜೀವರತ್ನಯ್ಯ ಒಡ್ಡಿದ ಪದಾರ್ಥಗಳಿಗೂ, ಆಮಿಷಗಳಿಗೂ ಆತನ ಮಗಳ ದಾಕ್ಷಿಣ್ಯಕ್ಕೆ ಸಿಕ್ಕಿಬಿದ್ದು ಮತಾಂತರಕ್ಕೆ ಗುರಿಯಾಗುವ ಗಂಡಾಂತರದಿಂದ ತಪ್ಪಿಸಿಕೊಳ್ಳಲು ಹೂಡುವ ತಂತ್ರದಲ್ಲಿಯೂ ಗಡ್ಡದಯ್ಯನ ವೇದಾಂತ ದರ್ಶನದ ಪ್ರಭಾವ ಕಾಣಿಸುತ್ತದೆ. ] P 170

ಈ ಮೇಲಿನ ದೀರ್ಘ ಉದ್ಧರಣೆಯಲ್ಲಿ ಮತಾಂತರವನ್ನು ಕುರಿತ ಕುವೆಂಪುರವರ ನಿಲುವುಗಳು ಅತ್ಯಂತ ಸ್ಪಷ್ಟವಾಗಿಯೇ ಕಾಣಿಸುತ್ತವೆ. ಪರಮಹಂಸ ಮತ್ತು ವಿವೇಕಾನಂದರ ವಿಚಾರಗಳು ಇಂಥ ನಿಲುವುಗಳ ಹಿಂದೆ ಗಾಢ ಪ್ರಭಾವ ಬೀರಿರುವುದು ಯಾರಿಗಾದರೂ ಸ್ಪಷ್ಟವಾಗುವ ವಿಚಾರವೇ. ಕ್ರೈಸ್ತ ಪಾದ್ರಿಗಳ ಮುಖಾಂತರವಾಗಿ ಮಲೆನಾಡಿಗೆ ಬರುವ ಹೊಸ ಶಾಲೆಯ ಬಗೆಗೆ, ಆ ಮೂಲಕ ಹರಿದು ಬರುವ ಆಧುನಿಕ ಮಾನವೀಯ ವಿಚಾರಧಾರೆಗಳ ಬಗೆಗೆ, ಮತ್ತು ಪುರೋಹಿತಶಾಹಿಯ ಜಾತಿಭೇದ, ಮತಾಚಾರ ಮೌಢ್ಯಗಳನ್ನು ಖಂಡಿಸುವುದರ ಬಗೆಗೆ ಇರುವ ಒಲವು ಆಸ್ಥೆ ಮತಾಂತರಗೊಳ್ಳುವ ಪ್ರಕ್ರಿಯೆಯ ಬಗ್ಗೆ ಕುವೆಂಪು ಸಂವೇದನೆ ಪ್ರಜ್ಞಾ ಪೂರ್ವಕವಾಗಿಯೇ ನಿರಾಕರಿಸುತ್ತದೆ. ಕುವೆಂಪುರವರ ದೃಷ್ಟಿಯಲ್ಲಿ ಮತಾಂತರವೆಂದರೆ 'ಕಾದ ಎಣ್ಣೆಯ ಬಾಣಲಿಯಿಂದ ಉರಿಯುವ ಬೆಂಕಿಗೆ ಬಿದ್ದಂತೆ'. ಹಿಂದೂ ಧರ್ಮದಲ್ಲಿನ ಆರ್ಷೇಯ, ಮಾನವೀಯ ಮೌಲ್ಯಗಳ ಬಗೆಗೆ ಅವರಿಗಿರುವ ಶ್ರದ್ಧೆ ಗಾಢವಾದದ್ದು. ಆದರೆ ವೇದೋಪನಿಷತ್ತುಗಳ ಮಾನವೀಯ ಮೌಲ್ಯಗಳನ್ನು ತಿರುಚಿದ ಅಮಾನವೀಯಗೊಳಿಸಿದ ಪುರೋಹಿತಶಾಹಿಯ ಧೋರಣೆಯನ್ನು ಕುವೆಂಪುರವರ ಸಂವೇದನೆ ಎಲ್ಲ ಕಾಲದಿಂದಲೂ ನಿರಂತರವಾಗಿ ಖಂಡಿಸಿದೆ. ಹಾಗೆಯೇ ಅಂತ ಮಾನವೀಯ ಮೌಲ್ಯಗಳನ್ನು ಅಮಾನವೀಯಗೊಳಿಸಿದ ಪುರೋಹಿತಶಾಹಿ ಧೋರಣೆಗಳನ್ನು, ಪುರಾಣಗಳನ್ನು, ಆಧುನಿಕ ಸಂದರ್ಭದಲ್ಲಿ ಮರು ವ್ಯಾಖ್ಯಾನಗಳಿಗೆ ಅವರ ಸಂವೇದನೆ ಗುರಿಪಡಿಸಿದೆ. ಬೆರಳ್‌ಗೆ ಕೊರಳ್ , ಶೂದ್ರತಪಸ್ವಿ, ಜಲಗಾರ, ಕಲ್ಕಿ ಹೀಗೆ ಅಸಂಖ್ಯ ಕೃತಿಗಳಲ್ಲಿ ಪುರೋಹಿತಶಾಹಿಯ ಧೋರಣೆಗಳನ್ನು ಹಲವು ನೆಲೆಗಳಲ್ಲಿ ನಿರಂತರವಾಗಿ ವಿಮರ್ಶೆಗೆ ಗುರಿಪಡಿಸಿ ಮಾನವೀಯ ನೆಲೆಗಳ ಶೋಧನೆಗೆ ಅವರ ಸಂವೇದನೆ ತೊಡಗುತ್ತದೆ. ಈ ಶತಮಾನದ ಶ್ರೇಷ್ಠ ಮಹಾಕಾವ್ಯವಾದ "ಶ್ರೀ ರಾಮಾಯಣ ದರ್ಶನಂ" ಇಂಥ ಧೋರಣೆಯಿಂದಲೇ ಮೈ ಪಡೆದ ವಿಚಾರವನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ೨೦ನೇ ಶತಮಾನದ ವಿಶ್ವದ ಆರ್ಷೇಯ ಮತ್ತು ಆಧುನಿಕ ಮಾನವೀಯ ವಿಚಾರ ಧಾರೆಗಳ ಮಂಥನದಿಂದ ಎಲ್ಲ ಧರ್ಮ ಮತ ವ್ಯಕ್ತಿಗಳಲ್ಲಿ ಕಂಡುಬರುವ ಪುರೋಹಿತಶಾಹಿಯ ಧೋರಣೆಗಳಿಗೆ, ಮೂಲಭೂತವಾದಿ ಕೃತ್ಯಗಳಿಗೆ ಮುಖಾಮುಖಿಯಾಗಿ ಹೊಸ ಕಾಣ್ಕೆಯೊಂದನ್ನು ಪ್ರಕಟಿಸುತ್ತದೆ. ಹಾಗಾಗಿ ಒಂದು ಧರ್ಮದಲ್ಲಿನ ಪುರೋಹಿತಶಾಹಿಯು ಅಮಾನವೀಯಗೊಳಿಸಿದ ಅನ್ಯಾಯ - ಅಪಚಾರಗಳನ್ನು ಮುಂದು ಮಾಡಿಕೊಂಡು ಅಂಥದ್ದೆ ಮತ್ತೊಂದು ಧರ್ಮದ ಹಿಡಿತಕ್ಕೆ, ಮತಾಂತರಗೊಳ್ಳುವುದರ ಮೂಲಕ, ಸಿಲುಕಿಕೊಳ್ಳುವುದನ್ನು ಕುವೆಂಪು ಸಂವೇದನೆ ಪ್ರಶ್ನಿಸುತ್ತದೆ. ಹಿಂದೂ - ಕ್ರೈಸ್ತ ಪುರೋಹಿತಶಾಹಿಯ ಮತೀಯ ಧೋರಣೆಗಳನ್ನು ಇಂಥ ಮತಾಂತರ ಪ್ರಕ್ರಿಯೆಯ ನೆಲೆಗಳಲ್ಲಿ ಕುವೆಂಪು ಒಟ್ಟಿಗೆ ಪ್ರಶ್ನಿಸುತ್ತಾರೆ. ಆದರೆ ಕ್ರೈಸ್ತ ಪಾದ್ರಿಗಳಿಂದ ಮಲೆನಾಡನ್ನು ಪ್ರವೇಶಿಸುವ ಆಧುನಿಕ ಶಾಲೆ, ಯಂತ್ರಗಳು, ವೈದ್ಯಕೀಯ ಹಾಗೂ ವೈಚಾರಿಕ ನೆಲೆಗಳನ್ನು ಆಹ್ವಾನಿಸುವಂತೆ ಹಿಂದೂ ಧರ್ಮದ ವೇದೋಪನಿಷತ್ತಿನ ಶುದ್ಧ ವೇದಾಂತ ದರ್ಶನದ ಬಗ್ಗೆ ಒಲವು ತೋರುತ್ತಾರೆ. ಗಡ್ಡದಯ್ಯ ಮತ್ತು ದೇವಯ್ಯನ ಮುಖಾಮುಖಿ ಸನ್ನಿವೇಶ ಇಂಥ ಅನೇಕ ವಿಚಾರಗಳನ್ನು ಕಾಣಿಸುತ್ತದೆ.

> "....ಆಗಿನ ಕಾಲದ ಅವಿಭಕ್ತ ಕುಟುಂಬದ ಹಿಂದೂ ಸ್ತ್ರೀಗೆ ಸಹಜವಾಗಿದ್ದ ಅನಿವಾರ್ಯ
> ಮಹೌದಾರ್ಯದಿಂದ, ಕ್ಷಮಿಸಲು ಮಾತ್ರ ಅಲ್ಲದೆ ಒಪ್ಪಿಕೊಳ್ಳಲು ಸಿದ್ಧವಾಗಿದ್ದ
> ದೇವಮ್ಮ ಆತನು ಮತಾಂತರಗೊಳ್ಳುವುದನ್ನು ಮಾತ್ರ ಸಹಿಸಲು ಸಿದ್ಧಳಾಗಿರಲಿಲ್ಲ.

ಆರ್ಷೇಯ ಕಾಲದಿಂದಲೂ ಬಂದಿದ್ದ ತನ್ನ ಪೂರ್ವಿಕರ ದೇವರುಗಳನ್ನಾಗಲಿ, ಆಚಾರಗಳನ್ನಾಗಲಿ, ಶ್ರದ್ಧೆಯನ್ನಾಗಲಿ, ಪೂಜೆ ಪುರಸ್ಕಾರ ರೀತಿಗಳನ್ನಾಗಲಿ, ಸಾಮಾಜಿಕ ಬಂಧು ಬಾಂಧವರನ್ನಾಗಲಿ, ಸಂಪ್ರದಾಯ ಸಂಸ್ಕೃತಿಗಳನ್ನಾಗಲಿ ತ್ಯಜಿಸಿ, ಲಂಗರು ಕಡಿದ ಹಡಗಿನಂತೆ ಕಾಣದ ಕಡಲಿಗೆ ಕೊಚ್ಚಿ ಹೋಗುವುದು ಅವಳ ಜೀವಕ್ಕೆ ಒಪ್ಪಿಗೆಯಾಗಿರಲಿಲ್ಲ..... ಸಿಂಧುವಳ್ಳಿಯ ಚಿನ್ನಪ್ಪಗೌಡರು ಕಿಲಸ್ತರಾದ ಮೇಲೆ ಅವರ ಹೆಂಡತಿಗೆ ಒದಗಿದ್ದ ದುರಂತ ಗತಿಯ ವಿಚಾರವನ್ನು ಕೇಳಿದ್ದ ಅವಳಿಗೆ, ಗಂಡನನ್ನು ಮತಾಂತರ ಹೊಂದುವುದಕ್ಕೆ ಬಿಡುವ ಮುನ್ನ ತಾನು ತನ್ನ ಶಿಶುವಿನೊಡನೆ ಮೃತ್ಯುವನ್ನಪ್ಪುವುದೆ ಶ್ರೇಯಸ್ಕರ ಎಂದು ತೋರಿತ್ತು. ತನ್ನ ಹಣೆಯ ಕುಂಕುಮದೊಡನೆ ತನ್ನ ಗಂಭೀರವಾದ ಹಿಂದೂ ಹೆಸರನ್ನು ಅಳಿಸಿ, ಕಿವಿಯಿಂದ ಕೇಳಬಾರದು ಅಂತಹ ಕುಲಗೆಟ್ಟ ಅಸಹ್ಯ ಹೆಸರನ್ನಿಡುವ ಆ ಮತಕ್ಕೆ ಸೇರುವುದರ ಬದಲು ಬೆಂಕಿಗೆ ಹಾರುವುದೇ ಎಷ್ಟೋ ಸಹ್ಯವೂ ಸುಖಕರವೂ ಆಗಿ ಕಂಡಿತ್ತು. ತನ್ನ ಗಂಡನು ಪಾದ್ರಿಯ ಮಗಳೊಡನೆ ಸಂಬಂಧ ಬೆಳಸಿದ್ದಾನೆ ಎಂಬ ಗುಸುಗುಸು ಸುದ್ದಿ ಅವಳ ಕಿವಿಗೆ ಬಿದ್ದಿದ್ದಾಗ, ಗರತಿ ಹೆಣ್ಣು ಸಂಕಟಪಟ್ಟುಕೊಳ್ಳುವಂತೆ ದುಃಖಿಯಾಗಿದ್ದಳು. ಆದರೆ 'ಗಂಡಸರ ಹಣೆಯ ಬರಹವೇ ಹಾಗೆ. ನನ್ನ ಗಂಡ ಒಬ್ಬನನ್ನ ಬೇರೆಯ ರೀತಿಯಲ್ಲಿ ನಡೆ ಎಂದರೆ ನಡೆಯುತ್ತಾನೆಯೆ? ಭಗವಂತ ನನ್ನ ತಾಳಿ ಕೆಡದಂತೆ ಕಾಪಾಡಿದರೆ ಸಾಕು! ಎಂದು ಸಮಾಧಾನ ತಂದುಕೊಂಡಿದ್ದಳು....." [೧೩]

ಆರ್ಷೇಯ ಕಾಲದಿಂದ ಬಂದಿದ್ದ ಧಾರ್ಮಿಕ ನಂಬಿಕೆಗಳನ್ನು, ಕೌಟುಂಬಿಕ ಸಂಬಂಧಗಳನ್ನು, ಸಾಮಾಜಿಕ ಕಟ್ಟುಪಾಡುಗಳನ್ನು, ಆಚಾರವಿಚಾರಗಳನ್ನು ಒಮ್ಮೆಗೆ ತ್ಯಜಿಸಿ ಮತ್ತೊಂದು ಧರ್ಮಕ್ಕೆ ಮತಾಂತರಗೊಳ್ಳುವುದು ಸಾವಿನಷ್ಟೇ ಸತ್ಯವಾದುದು. ಈ ಮೇಲಿನ ಉದ್ಧರಣೆಯಲ್ಲಿನ ದೇವಮ್ಮನ ಮಾನಸಿಕ ತೊಳಲಾಟದ ನಿರೂಪಣೆಯಲ್ಲಿ ಈ ವಿಚಾರ ಸ್ಪಷ್ಟವಾಗಿಯೇ ಕಾಣಿಸುತ್ತದೆ. ಹೊಸ ಧರ್ಮದ ಧಾರ್ಮಿಕ ಲಾಂಛನಗಳನ್ನು ಧರಿಸುವುದು, ಹೊಸ ಹೆಸರನ್ನು ಇಟ್ಟುಕೊಳ್ಳುವುದು ಅತ್ಯಂತ ನೋವಿನ ಸಂಗತಿಯಾಗಿ, ಅಸಹ್ಯವಾಗಿ, ಮಲೆನಾಡಿನ ಪ್ರತಿಷ್ಠಿತ ಕೌಟುಂಬಿಕ ಬದುಕಿನಲ್ಲಿ ಕಾಣಿಸಿಕೊಳ್ಳುತ್ತದೆ. ಮಲೆನಾಡಿನ ಪ್ರತಿಷ್ಠಿತ ಗೌಡ ಜನಾಂಗದಲ್ಲೂ, ಕೆಳಸ್ತರದ ಎಲ್ಲಾ ಜನವರ್ಗಗಳಲ್ಲೂ, ಸಮಾಜ ಸುಧಾರಣಾ ಸೇವಾ ಕಾರ್ಯಗಳ ಬಗೆಗೆ ಒಲವು ತೋರಿಸಿದ ಆ ಧರ್ಮಕ್ಕೆ ಮತಾಂತರಗೊಳ್ಳುವುದು ಮಹಾ ಅಪರಾಧವಾಗಿಯೂ, ಅಸಹ್ಯವಾಗಿಯೂ ಕಾಣಿಸುತ್ತದೆ. ದಲಿತ ಜನಾಂಗದಲ್ಲಿಯೂ ತಮ್ಮ ತಮ್ಮ ನಂಬಿಕೆ, ಆಚಾರ, ವಿಚಾರಗಳನ್ನು ಬಿಟ್ಟು ಮತ್ತೊಂದು ಧರ್ಮಕ್ಕೆ ಸೇರಲು ನಿರಾಕರಣೆಯಿದೆ.

"ಆ ದ್ಯಾವಯ್ಯಗೌಡ್ರು ಕಿಲಸ್ತರ ಜಾತಿಗೆ ಸೇರ್ತಾರೆ ಅಂತಿದ್ರು ಕಣೇ. ಅದರದ್ದೇ ಏನೋ ಇರಬೇಕು!.....ಅವರಿಗೆ ಏನು ಬಂದಿದೆಯೋ ಏನೊ ಆ ಹಾಳು ಜಾತಿಗೆ ಸೇರಾಕೆ? ಮುತ್ತಿನಂಥ ಹೆಂಡ್ತಿ ಮಕ್ಕಳು ಇರೋವಾಗ?"[೧೪]

ಈ ಮೇಲಿನ ಉಧೃತ ಭಾಗದ ಐತ - ಪಿಂಚಲು ಸಂಭಾಷಣೆಯಲ್ಲಿಯೂ, ದೇವಯ್ಯನು ಒತ್ತಾಯದಿಂದ ಮತಾಂತರಗೊಂಡ ಮೇಲೆ ಅನುಭವಿಸುವ ತೊಳಲಾಟ ಹಾಗೂ ಜನಾಂಗದ ತಿರಸ್ಕಾರದ ಮಾತುಗಳಲ್ಲಿಯೂ, ಮತ್ತು ಕಾದಂಬರಿಯ ಅನೇಕ ಸನ್ನಿವೇಶ ಘಟನೆಗಳಲ್ಲಿ ಈ ವಿಚಾರ ಸ್ಪಷ್ಟವಾಗಿ ಕಾಣಿಸುತ್ತದೆ. 'ಎರೆ ನುಂಗಿ ಗಾಳಕ್ಕೆ ಸಿಕ್ಕಿದ ಮೀನಿನಂತೆ' ಒದ್ದಾಡುತ್ತಿರುವ ಹಾಗೂ ಧರ್ಮ ಸಂಕಟಕ್ಕೆ ಸಿಕ್ಕಿಬಿದ್ದಿದ್ದ ದೇವಯ್ಯನ ತೊಳಲಾಟದಲ್ಲಿ ಮತಾಂತರದ ಸಂಕಟಗಳು ಕಾಣಿಸಿಕೊಳ್ಳುತ್ತವೆ.

> "…..ದೇವಯ್ಯ ಕಾಲವಂಚನೆ ಮಾಡಿ ತಪ್ಪಿಸಿಕೊಳ್ಳಬಹುದೆಂದು ಆಲೋಚಿಸಿ ಮೈಸೂರು ಸಂಸ್ಥಾನದಲ್ಲಿ ಆಗ ಇದ್ದ ಕಾನೂನೊಂದನ್ನು ಪಾದ್ರಿಯ ಗಮನಕ್ಕೆ ತಂದಿದ್ದನು. ಬ್ರಿಟಿಷರ ಆಳ್ವಿಕೆಯ ಪ್ರಾಂತ್ಯಗಳಲ್ಲಿ ಹಿಂದೂ ಅವಿಭಕ್ತ ಕುಟುಂಬದ ಒಬ್ಬನು ಅನ್ಯ ಮತಾವಲಂಬಿಯಾದರೆ ಅವನಿಗೆ ತನ್ನ ಪಿತ್ರಾರ್ಜಿತ ಆಸ್ತಿಯ ಹಕ್ಕು ದಕ್ಕುತ್ತಿದ್ದರೂ, ಮೈಸೂರು ಸಂಸ್ಥಾನದಲ್ಲಿ ಅನ್ಯಮತಾವಲಂಬಿಯಾದವನು ಆ ಹಕ್ಕನ್ನು ಕಳೆದುಕೊಳ್ಳಬೇಕಾಗಿತ್ತು. ಸಿಂಧುವಳ್ಳಿ ಚಿನ್ನಪ್ಪಗೌಡರು ಮತಾಂತರ ಹೊಂದುವಾಗ ಅವರೊಬ್ಬರೆ ಪಿತ್ರಾರ್ಜಿತ ಆಸ್ತಿಗೆ ಏಕಮಾತ್ರ ಹಕ್ಕುದಾರರಾಗಿದ್ದುದರಿಂದ ಆ ಆಸ್ತಿ ಅವರಿಗೆ ಪೂರ್ತಿಯಾಗಿ ದಕ್ಕಿತ್ತು. ಆದರೆ ತಂದೆ ಕಲ್ಲಯ್ಯಗೌಡರು ಇರುವವರೆಗೆ ಕ್ರೈಸ್ತನಾಗುವ ತನಗೆ ಆಸ್ತಿ ಬರುವುದಿಲ್ಲ. ಆದ್ದರಿಂದ ಅವರು ಪರಲೋಕ ಪ್ರಾಪ್ತಿಯನ್ನೈದಿದ ಮೇಲೆಯೆ ತಾನು ಮತಾಂತರ ಹೊಂದುತ್ತೇನೆ ಎಂದು ವಾದಿಸಿದ್ದನು ದೇವಯ್ಯ…..
>
> "ಅದಕ್ಕೆ ಪಾದ್ರಿಯ ಸಮಾಧಾನ ಹೀಗಿತ್ತು: ಬ್ರಿಟಿಷ್ ಚಕ್ರವರ್ತಿನಿಯೂ ಪ್ರೋಟೆಸ್ಟೆಂಟ್ ಕ್ರೈಸ್ತಮತದವಳೆ. ಆದ್ದರಿಂದ ಇಂಡಿಯಾದಲ್ಲಿ ಬ್ರಿಟಿಷ್ ಸರಕಾರವು ಪ್ರೋಟೆಸ್ಟೆಂಟ್ ಮಿಷನರಿಗಳಿಗೆ ನೇಟಿವ್ ಜನರನ್ನು ಮತಾಂತರಗೊಳಿಸುವುದಕ್ಕೆ ಸರ್ವಾಧಿಕಾರವನ್ನು ಸರ್ವ ಸೌಲಭ್ಯಗಳನ್ನು ಕೊಡುತ್ತಾ ಇದೆ. ಮೈಸೂರು ಸಂಸ್ಥಾನವು ನೇಟಿವ್ ಸಂಸ್ಥಾನವಾದರೂ ಅದರ ರಾಜನು ಸಂಪೂರ್ಣವಾಗಿ ಬ್ರಿಟಿಷರ ಅಡಿಯಾಳು. ಬ್ರಿಟಿಷರ ಪ್ರತಿನಿಧಿ ರೆಸಿಡೆಂಟ್ ಸಾಹೇಬರು ಹೇಳಿದ ಹಾಗೆ ಅವನು ಕೇಳಬೇಕಾಗುತ್ತದೆ. ಇಲ್ಲದಿದ್ದರೆ ರಾಜ್ಯವನ್ನೆ ಕಳೆದುಕೊಳ್ಳುತ್ತಾನೆ. 'ನಮ್ಮ ದೊಡ್ಡ ಪಾದ್ರಿಗಳು ಲೇಕ್ ಹಿಲ್ ದೊರೆಗಳು, ರೆಸಿಡೆಂಟರ ಕಿವಿಯಲ್ಲಿ ಒಂದು ಪಿಸುಮಾತು ಉಸಿರಿದರೆ ಸಾಕು, ನಿಮ್ಮ ಪಿತ್ರಾರ್ಜಿತ ಆಸ್ತಿಗೆ ನಿಮ್ಮ ಅರ್ಧಾಂಗಿ ಆಗುವ ನನ್ನ ಮಗಳು ಹಕ್ಕುದಾರಳಾಗಿ ಬಿಡುತ್ತಾಳೆ."[೧೪]

ವಸಾಹತುಶಾಹಿ ಸಂಸ್ಕೃತಿಯ ಯಾಜಮಾನ್ಯ ಯಾವ ಬಗೆಯದೆಂಬುದನ್ನು ಈ ಮೇಲಿನ ಉದ್ಧರಣೆ ಮತ್ತೊಂದು ರೀತಿಯಲ್ಲಿ ಸ್ಪಷ್ಟಪಡಿಸುತ್ತದೆ. ವ್ಯಕ್ತಿಗಳ ಮಾನಸಿಕ ತುಮುಲಗಳಾಗಲಿ, ಸ್ಥಳೀಯ ಪರಿಸರದಲ್ಲಿ ಎದುರಾಗುವ ಅಸಂಖ್ಯ

ದ್ವಂದ್ವಗಳಾಗಲಿ, ಅಧಿಕಾರ ರೂಢ ವ್ಯವಸ್ಥೆಯ ವಸಾಹತುಶಾಹಿ ಸಂಸ್ಕೃತಿಗೆ ಕಾಣಲಾರವು. ಒಂದು ಕಡೆ ಧಾರ್ಮಿಕ ಸಂದರ್ಭ ಮನುಷ್ಯನ ಬದುಕನ್ನು ತಲ್ಲಣಗೊಳಿಸಿದರೆ, ಮತ್ತೊಂದು ಕಡೆ ಭೋಗದ ವಸ್ತು ಪ್ರಪಂಚ ಹೇಗೆ ಕೌಟುಂಬಿಕ ವಿಘಟನೆಗೆ ಕಾರಣವಾಗಬಹುದೆಂಬುದನ್ನು ಈ ಮೇಲಿನ ಉದ್ಧರಣೆಯಿಂದ ತಿಳಿಯಬಹುದಾಗಿದೆ. ಅತ್ಯಂತ ಖಾಸಗಿಯ - ಕೌಟುಂಬಿಕ ಸಂಬಂಧಗಳ ವಿಘಟನೆಗೆ, ವಸಾಹತುಶಾಹಿ ಸಂಸ್ಕೃತಿ ಧೋರಣೆಯಿಂದಾಗುವ ಆಘಾತಗಳು ಯಾವ ಬಗೆಯವು ಎಂಬುದನ್ನು ಈ ಮೇಲಿನ ವರ್ಣನೆಯಿಂದ ತಿಳಿಯಬಹುದಾಗಿದೆ.

P.175 ಸನಾತನ ಭಾರತದಲ್ಲಿ ಹುಟ್ಟಿಬಂದ ಮಾನವೀಯ ತತ್ವಗಳನ್ನು, ದರ್ಶನಗಳನ್ನು ಮರೆಮಾಚಿಸಿ ಜನತೆಯಲ್ಲಿ ಮೌಢ್ಯತೆಯನ್ನು ಬಿತ್ತಿ ತಮ್ಮ ಸ್ವಾರ್ಥನ್ನು ಸಾಧಿಸಿದ ಪುರೋಹಿತಶಾಹಿ ವ್ಯವಸ್ಥೆಯನ್ನು ಪರಮಹಂಸ ಮತ್ತು ವಿವೇಕಾನಂದರ ಸಂವೇದನೆ ತೀವ್ರವಾಗಿ ಖಂಡಿಸಿರುವುದನ್ನು ಚರಿತ್ರೆಯಿಂದ ತಿಳಿಯಬಹುದಾಗಿದೆ. ಪುರೋಹಿತ ಶಾಹಿ ವ್ಯವಸ್ಥೆ ಎಸಗಿದ ಅಪರಾಧಗಳಿಂದ ಮತ್ತು ಶತಶತಮಾನಗಳಿಂದ ಭರತಭೂಮಿಯ ಸಾಮಾನ್ಯ ಜನಕ್ಕೆ ಒದಗಿದ ದುರ್ಗತಿಗಳನ್ನು ಕಂಡ ಇವರ ಸಂವೇದನೆಯು ಮತೀಯ ಮೌಢ್ಯತೆಗೆ ವೈಜ್ಞಾನಿಕ ಪ್ರಜ್ಞೆಯನ್ನು, ಆಧ್ಯಾತ್ಮಿಕತೆಯನ್ನು ಬೋಧಿಸುವುದರೊಂದಿಗೆ ಜನತೆಯಲ್ಲಿ ಹೊಸ ಎಚ್ಚರವನ್ನು ಉಂಟುಮಾಡಬೇಕೆಂದು ಸೂಚಿಸುತ್ತಾರೆ. ಸನಾತನ ಭಾರತೀಯ ಸಂಸ್ಕೃತಿಗೆ ಒದಗಿದ ಕಳಂಕಗಳು ಇಲ್ಲವಾಗಿ, ಆ ಸಂಸ್ಕೃತಿಯು ನೂತನ ಸಂಸ್ಕಾರಗಳನ್ನು ಪಡೆದು ಗಟ್ಟಿಗೊಳ್ಳಬೇಕೆಂಬ ಆಶಯದಿಂದ ಪರಮಹಂಸ - ವಿವೇಕಾನಂದರು ಸರ್ವಧರ್ಮ ಸಮನ್ವಯ ತತ್ವಗಳನ್ನು ಪ್ರಪಂಚದಾದ್ಯಂತ ಸಾರಲು ತೊಡಗಿದ ಕ್ರಿಯೆಯು ಎಲ್ಲ ಬಗೆಯ ದಮನಕಾರಿ ನೆಲೆಗಳಿಗೆ ತೋರಿದ ಪ್ರತಿಕ್ರಿಯೆಯಾಗಿದೆ. ಸನಾತನ ಪುರೋಹಿತಶಾಹಿ ವ್ಯವಸ್ಥೆಯ ಬಗೆಗೆ ತೋರುವ ಪ್ರಕ್ರಿಯೆಯ ಹಾಗೆ, ಕ್ರೈಸ್ತ ಪುರೋಹಿತಶಾಹಿ ಅಧಿಕಾರಸ್ಥ ಬ್ರಿಟಿಷ್ ಸರ್ಕಾರ ಪ್ರಾಬಲ್ಯವನ್ನು ಮುಂದುಮಾಡಿಕೊಂಡು, ಭಾರತದಲ್ಲಿ ಮತಾಂತರಕ್ಕೆ ಕೈ ಹಾಕಿದ್ದನ್ನು ಪ್ರಶ್ನಿಸುವ ವಿಚಾರ ಧಾರೆಯನ್ನು ಈ ಕೆಳಗಿನ ಉದ್ಧರಣೆಯಲ್ಲಿ ನೋಡಬಹುದಾಗಿದೆ: P.175

P.175 "…..ಕ್ರಿ.ಶ. ೧೮೯೩ರಲ್ಲಿ ಚಿಕಾಗೊದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ತಟಕ್ಕನೆ ಯಶೋಗೋಪುರದ ಶಿಖರಕ್ಕೇರಿ ಆಧ್ಯಾತ್ಮಿಕ ಜಗನ್ನಯನ ಕೇಂದ್ರ ಮೂರ್ತಿಯಾಗಿದ್ದ ಸ್ವಾಮಿ ವಿವೇಕಾನಂದರು ಎರಡು ವರ್ಷಗಳ ಕಾಲ ಅಮೆರಿಕಾದ ಅನೇಕ ನಗರಗಳಲ್ಲಿ ಸಂಚರಿಸಿ, ಕ್ರೈಸ್ತಮತ ಸಂಕುಚಿತ ವಲಯದಲ್ಲಿಯೆ ಬೆಳೆದು ಕುಬ್ಜದೃಷ್ಟಿಗಳಾಗಿದ್ದ ಪಾಶ್ಚಾತ್ಯರಿಗೆ ಅಭೂತಪೂರ್ವ ಧೀರೋದಾರ ದೃಷ್ಟಿಯ ವೇದಾಂತದ ಸಂದೇಶವಿತ್ತು ಜಯಡಿಂಡಿಮವನ್ನು ಮೊಳಗಿಸಿದ್ದರಷ್ಟೆ. ತರುವಾಯ ಅವರು ವೇದಾಂತದ ಆಧ್ಯಾತ್ಮಿಕ ಯೋಗಸಾಧನೆಯನ್ನು ಕೈಗೊಳ್ಳಲು ಹಂಬಲಿಸುತ್ತಿದ್ದ ಕೆಲವು ಶಿಷ್ಯ ಶಿಷ್ಯೆಯರೊಡನೆ ಸೆಂಟ್ ಲಾರೆನ್ಸ್ ಮಹಾನದಿಯ ಸುವಿಸ್ತೃತ ಜಲರಾಶಿಯ ಮಧ್ಯೆ ಅರಣ್ಯ ವೃತವಾಗಿದ್ದು ನಿಭೃತವಾಗಿದ್ದ ಸಹಸ್ರದ್ವೀಪೋದ್ಯಾನದ ಒಂದು ಕುಟೀರಕ್ಕೆ ಬಂದು ನಿಂತರು…..

"ನೋಡು ಸೋದರೀ, ನಾನು ಇಂಡಿಯಾದಿಂದ ಇಲ್ಲಿಗೆ ಬಂದು ನಿಮಗೆ ವೇದಾಂತ ಬೋಧನೆ ಮಾಡಿ, ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ನೀಡಿ, ನಿಮ್ಮನ್ನು

ಮತಾಂತರಗೊಳಿಸುವ ರೂಕ್ಷಬರ್ಬರವಾದ ಕಿರಾತ ನೀತಿಗೆ ಕೈ ಹಾಕದೆ, ಕ್ರೈಸ್ತರಿಗೆ, ಯೊಹೂದ್ಯರಿಗೆ, ಮೆಥಡಿಸ್ಟರಿಗೆ, ಪ್ಯೂರಿಟನ್ನರಿಗೆ, ಕ್ಯಾಥೊಲಿಕ್ಕರಿಗೆ, ಅವರವರ ಭಾವದಲ್ಲಿಯೆ, ಅವರವರ ಶ್ರದ್ಧೆಯಲ್ಲಿಯೆ, ಅವರವರು ಮುಂದುವರಿಯುವಂತೆ ಹೇಳಿ, ದೀಕ್ಷೆಕೊಡುವ ಕೆಲಸದಲ್ಲಿದ್ದೇನೆ. ಸ್ವಲ್ಪ ಹೆಚ್ಚು ಕಡಿಮೆ, ಅದೇ ದಿನದಲ್ಲಿ, ಅದೇ ಸಮಯದಲ್ಲಿ, ನನ್ನ ಮಾತೃಭೂಮಿಯ ಒಂದು ಪರ್ವತಾರಣ್ಯ ಪ್ರದೇಶದ ಮೂಲೆಯಲ್ಲಿ, ಕ್ರೈಸ್ತಮತ ಪ್ರಚಾರಕರು ಬ್ರಿಟಿಷ್ ಸರ್ಕಾರದ ರಾಜಕೀಯ ಬಲ ಮತ್ತು ಪ್ರತಿಷ್ಠೆ ಮತ್ತು ಸೌಕರ್ಯ ಸೌಲಭ್ಯಗಳನ್ನು ಪಡೆದು, ವಿದ್ಯಾಭ್ಯಾಸದ ಮತ್ತು ವೈದ್ಯಕೀಯದ ನೆರವೀಯುವ ಬಲೆಯೊಡ್ಡಿ, ಅರಿಯದ ಅಜ್ಞಾನಿಗಳನ್ನು ತಮ್ಮ ಜಾತಿಗೆ ಸೇರಿಸಿಕೊಂಡು, ತಮ್ಮ ಸಂಖ್ಯಾ ಪ್ರಮಾಣವನ್ನು ಹೆಚ್ಚಿಸಿಕೊಳ್ಳುವ ವ್ಯಾಪಾರೀ ಉದ್ಯಮದಲ್ಲಿದ್ದಾರೆ. ಆದರೆ ಆ ಅಜ್ಞಾನೀ ಜನರಲ್ಲಿಯೂ ಒಂದು ಅಂಧವಾದ ಸ್ವಮತನಿಷ್ಠೆ ಇರುವುದರಿಂದ ಅವರು ಮಿಶನರಿಗಳ ಮತಾಂತರ ಕಾರ್ಯವನ್ನು ತಮ್ಮದೇ ಆದ ದಸ್ಯುವಿಧಾನದಿಂದ ವಿಫಲಗೊಳಿಸುತ್ತಿದ್ದಾರೆ." [೧೫]

ಪೌರಾತ್ಯ ಮತ್ತು ಪಾಶ್ಚಾತ್ಯ ಮೌಲ್ಯಗಳನ್ನು ಮುಖಾಮುಖಿಯಾಗಿಸುವುದರೊಂದಿಗೆ ವಿವೇಕಾನಂದರು ಕುಬ್ಜದೃಷ್ಟಿಯ, ಕ್ರೈಸ್ತಪುರೋಹಿತಶಾಹಿಯ ಮತಾಂತರ ಕಾರ್ಯವನ್ನು ಈ ಮೇಲಿನ ಉದ್ಧರಣೆಯಲ್ಲಿ ತೀವ್ರವಾಗಿ ಖಂಡಿಸುವುದನ್ನು ಕಾಣುತ್ತೇವೆ. ಸರ್ವಧರ್ಮ ಸಮನ್ವಯದ ದೃಷ್ಟಿಯನ್ನು ವಿಶ್ವದಾದ್ಯಂತ ಬೆಳಸಿಕೊಳ್ಳಬೇಕೆಂಬುದನ್ನು ಮೇಲಿನ ಉದ್ಧರಣೆ ಸ್ಪಷ್ಟಪಡಿಸುತ್ತದೆ. ಕ್ರೈಸ್ತರಂತೆಯೆ ವಿವೇಕಾನಂದರು ಮತಾಂತರ ಪ್ರಕ್ರಿಯೆಗೆ ತೊಡಗದೆ, ಆಯಾ ಧರ್ಮದವರ, ಆಯಾ ಮತದವರ ಭಾವ - ಶ್ರದ್ಧೆಗಳಲ್ಲಿಯೆ ಮುಂದುವರಿದು ಅವರು ವಿಶ್ವದ ಶಾಂತಿ ಮತ್ತು ಶ್ರೇಷ್ಠತೆಗೆ ಮುಂದಾಗಬೇಕೆಂಬ ಆಶಯವು ಇಲ್ಲಿ ವ್ಯಕ್ತವಾಗುತ್ತದೆ. ಆದರೆ ಅದೇ ಸಂದರ್ಭದಲ್ಲಿ ಭಾರತದಲ್ಲಿ ಕ್ರೈಸ್ತ ಪ್ರಚಾರಕರು ಬ್ರಿಟಿಷ್ ಸರ್ಕಾರದ ರಾಜಕೀಯ ಬಲ ಮತ್ತು ಪ್ರತಿಷ್ಠೆಗಳನ್ನು ತೋರುತ್ತ, ವಿದ್ಯಾಭ್ಯಾಸ ಮತ್ತು ವೈದ್ಯಕೀಯ ಸೇವಾ ಕಾರ್ಯಗಳನ್ನು ಮುಂದುಮಾಡಿಕೊಂಡು, ಅತಂತ್ರದ ಭಾರತೀಯರನ್ನು ಮತಾಂತರದ ಖೆಡ್ಡಾಕ್ಕೆ ಬೀಳಿಸಲು ತೊಡಗುವ ವ್ಯಾಪಾರೀ ಮನೋಭಾವದ ಖಂಡನೆ ಈ ಮೇಲಿನ ಉದ್ಧರಣೆಯಲ್ಲಿ ತೀವ್ರವಾಗಿ ದಾಖಲಾಗಿರುವುದನ್ನು ಕಾಣಬಹುದಾಗಿದೆ.

ಆದರೆ ಬೆಟ್ಟಳ್ಳಿ ದೇವಯ್ಯನ ಸಮಾರಂಭದ ನಾಟಕೀಕರಣದಲ್ಲಿ ಇದಕ್ಕೂ ಭಿನ್ನವಾದ ಕೆಲವು ವಿಚಾರಗಳು ಪ್ರಕಟವಾಗುತ್ತವೆ. ಬಿಳಿಪಾದ್ರಿ ರೆವರೆಂಡ್ ಲೇಕ್ ಹೀಲ್‌ನ ಮಾತಿನಲ್ಲಿ ಪ್ರಕಟವಾಗುವಂತೆ "ನಾವೇನು ನಿಮ್ಮನ್ನು ಬಲತ್ಕಾರವಾಗಿ ಕ್ರೈಸ್ತಮತಕ್ಕೆ ಸೇರಿಸಿಕೊಳ್ಳುತ್ತಿಲ್ಲ.....ಕ್ರೈಸ್ತರಿಗೆ ನಿಮ್ಮ ಕುಟುಂಬ ನಾಶಮಾಡುವ ಉದ್ದೇಶ ಎಂದಿಗೂ ಇರುತ್ತಿರಲಿಲ್ಲ" ಎಂಬ ಮಾತುಗಳಲ್ಲಿ ಕ್ರೈಸ್ತ ಪಾದ್ರಿಯ ಮಾನವೀಯತೆ ವ್ಯಕ್ತವಾಗುತ್ತದೆ. ಆದರೆ ನೇಟಿವ್ ಪಾದ್ರಿ ಜೀವರತ್ನಯ್ಯ, 'ಉಪದೇಶಿ ಸ್ಥಾನದಿಂದ ರೆವರೆಂಡ್‌ನ ಪಟ್ಟಕ್ಕೆ' ಬಡ್ತಿ ಪಡೆಯಲು ಹೂಡಿದ ತಂತ್ರಗಳಲ್ಲಿ ಕ್ರೈಸ್ತಮತೀಯ ಪುರೋಹಿತಶಾಹಿ ತಂತ್ರಗಳು ಮುಖಾಮುಖಿಯಾಗಿ ಅನೇಕ ವಾಸ್ತವಾಂಶಗಳು ಬಯಲಾಗುತ್ತವೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ೬೩ನೆಯ ಭಾಗ, ೧೯ನೇ ಶತಮಾನದ ಕೊನೆಯ ಹಾಗೂ ೨೦ನೇ ಶತಮಾನದ ಮೊದಲ ಭಾಗದ ಸಾಂಸ್ಕೃತಿಕ ಸಂಘರ್ಷದ ಮುಖಾಮುಖಿಯನ್ನು ನಮ್ಮ ಮುಂದೆ ತೆರೆದಿಡುವ ಮಹತ್ವದ ಚಾರಿತ್ರಿಕ ದಾಖಲೆಯಂತಿದೆ. ವಸಾಹತುಶಾಹಿ ಸಾಮ್ರಾಜ್ಯ ಅನೇಕ ನೆಲೆಗಳಲ್ಲಿ ನೆಲೆಯೂರುತ್ತಿರುವ ಚಿತ್ರಗಳು, ಕ್ರೈಸ್ತ ಮತದ ಪ್ರಚಾರ, ಮತಾಂತರ, ಅಂಥ ಪ್ರಕ್ರಿಯೆಗಳಿಗೆ ಎದುರಾಗುವ ಪ್ರತಿರೋಧ, ಅದೇ ಸಂದರ್ಭದಲ್ಲಿ ಹಿಂದೂ ಧರ್ಮದ ಅಮಾನವೀಯ ಮೌಲ್ಯಗಳನ್ನು ಪ್ರಶ್ನಿಸುತ್ತಾ, ಮಾನವೀಯ ಮೌಲ್ಯಗಳಿಗಾಗಿ ನಡೆದ ಹೊಸ ಶೋಧನ ನೆಲೆಗಳು, ಆಧುನಿಕ ವೈದ್ಯಕೀಯ ಸೌಲಭ್ಯಗಳು, ಆ ಬಗೆಗಿನ ಆಕರ್ಷಣೆ ಮತ್ತು ವಿಕರ್ಷಣೆಗಳು, ವ್ಯಷ್ಟಿ ಮತ್ತು ಸಮಷ್ಟಿ ನೆಲೆಯಲ್ಲಿ ಆಂತರಿಕವಾಗಿಯೂ ಮತ್ತು ಬಾಹ್ಯವಾಗಿಯು ಆಗುತ್ತಿರುವ ಬದಲಾವಣೆಗಳು, ಪ್ರಾದೇಶಿಕ ಅನನ್ಯತೆಗಳ ಮೇಲೆ ವಸಾಹತುಶಾಹಿ ಆಕ್ರಮಣದ ಮೇಲಿನ ಪ್ರತಿರೋಧ -ಹೀಗೆ ಅಸಂಖ್ಯ ಚಿಂತನೆಗಳು ಈ ಭಾಗದಲ್ಲಿ ಚಿತ್ರಿತವಾಗುತ್ತವೆ. ಕ್ರೈಸ್ತ ಮಿಷನರಿಗಳ ಮತಾಂತರ ಕಾರ್ಯಗಳನ್ನು ಮುಕುಂದಯ್ಯ ತೀವ್ರವಾಗಿ ವಿರೋಧಿಸುವ ಪ್ರಕ್ರಿಯೆಯಲ್ಲಿ ಮತ್ತು ಆ ಕ್ರೈಸ್ತ ಮಿಷನರಿಗಳಿಂದ ಮಲೆನಾಡಿಗೆ ದತ್ತವಾದ ವೈದ್ಯಕೀಯ ಹಾಗೂ ವಿದ್ಯಾಭ್ಯಾಸ ಸೌಲಭ್ಯ ಮೊದಲಾದ ಸೇವಾಕಾರ್ಯಗಳ ಬಗೆಗೆ ಮುಕುಂದಯ್ಯ ತೋರುವ ಶ್ರದ್ಧೆ ಗೌರವಗಳು, ವಸಾಹತುಶಾಹಿ ಸಂಸ್ಕೃತಿಯ ಬಗೆಗೆ ಕುವೆಂಪು ಸಂವೇದನೆಯಲ್ಲಿಯ ಸ್ವೀಕರಣೆ ಮತ್ತು ನಿರಾಕರಣೆಯ ನೆಲೆಗಳನ್ನು ನಿಚ್ಚಳವಾಗಿ ಗುರುತಿಸಬಹುದಾಗಿದೆ.

'ಸಾಮಾಜಿಕ ಜೀವನವನ್ನು ಬುಡಮೇಲು ಮಾಡುವ ಕಾರ್ಯ' ಎಂದು ಮತಾಂತರವನ್ನು ವಿರೋಧಿಸಿದ ಮುಕುಂದಯ್ಯನಿಗೆ ರೆವರೆಂಡ್ ಲೇಕ್ ಹಿಲ್ ಕೊಡುವ ಈ ಕೆಳಗಿನ ಸಮರ್ಥನೆಯಲ್ಲಿ ಸ್ಥಳೀಯ ಪುರೋಹಿತಶಾಹಿಯ ಹಲವು ಮುಖಗಳು ಪ್ರಕಟವಾಗುತ್ತವೆ:

> "ನಿಮ್ಮ ಸಹಕಾರಕ್ಕಾಗಿ ನಿಮಗೆ ಅನೇಕ ವಂದನೆಗಳು". ಲೇಕ್ ಹಿಲ್ ಮುಂದುವರಿದರು: "ನಮ್ಮ ಮತಾಂತರ ಚಟುವಟಿಕೆಗಳನ್ನೇನೊ ನೀವು 'ಸಾಮಾಜಿಕ ಜೀವನವನ್ನು ಬುಡಮೇಲು ಮಾಡುವ ಕಾರ್ಯ' ಎಂದು ವರ್ಣಿಸುತ್ತಿದ್ದೀರಿ. ಯಾರನ್ನೂ ಬಲತ್ಕಾರವಾಗಿ ಕ್ರೈಸ್ತರನ್ನಾಗಿ ಮಾಡುವ ಇಚ್ಛೆ ನಮಗಿಲ್ಲ. ನೀವು ನಮ್ಮ ಜೊತೆಗೆ ಸೇರದಿರಬಹುದು. ಸೇರದಿದ್ದರೆ ಚಿಂತೆಯಿಲ್ಲ.... ಆದರೆ, ಗೌಡರೆ, ನಾನು ಹೇಳುವುದನ್ನು ದಯವಿಟ್ಟು ಗಮನಿಸಿ ಕೇಳಿ..... ನಿಮ್ಮ ಜಾತಿಯವರು ಎಲ್ಲಿಯವರೆಗೆ ಬ್ರಾಹ್ಮಣರ ಪಾದ ತೊಳೆದು, ಅದನ್ನು ತೀರ್ಥವೆಂದು ಕುಡಿಯುವುದನ್ನೇ ತಮ್ಮ ಧರ್ಮಜೀವನ ಸರ್ವಸ್ವ ಎಂದು ಭಾವಿಸುವರೊ ಅಲ್ಲಿಯವರಗೆ ನಿಮಗೆ, ನಾಮಧಾರಿ ಗೌಡರಿಗೆ ಮತ್ತು ಇತರ ಬ್ರಾಹ್ಮಣೇತರ ವರ್ಗದವರಿಗೆ, ಉದ್ಧಾರವಿಲ್ಲ; ಉಳಿಗತಿಯಿಲ್ಲ. ನಿಮ್ಮ ಮೂಢಾಚಾರಗಳು ಬ್ರಾಹ್ಮಣರ ಜೀವನೋಪಾಯಕ್ಕೆ, ಸಂಪಾದನೆಗೆ, ಬಂಡವಾಳ ಸ್ವರೂಪವಾಗಿವೆ. ನಿಮ್ಮನ್ನು ಅವರು ನಾಯಿಗಳನ್ನು ಕಂಡಹಾಗೆ ಕಾಣುತ್ತಾರೆ. ಮುಟ್ಟುವುದಿರಲಿ ಹತ್ತಿರ ಬಂದರೂ ಅವರಿಗೆ ಮೈಲಿಗೆ. ಬ್ರಾಹ್ಮಣರೆಲ್ಲ ಬ್ರಹ್ಮನ

ಮುಖದಿಂದ ಬಂದವರೆಂದೂ, ಶೂದ್ರರು ಅವನ ಕಾಲಡಿಯಿಂದ ಬಿದ್ದವರೆಂದೂ ಕಟ್ಟು ಕಥೆ ಕಟ್ಟಿದ್ದಾರೆ. ಅವರೇ ಅವರ ಅನುಕೂಲಕ್ಕಾಗಿ ಬರೆದುಕೊಂಡಿರುವ ಪುರಾಣ ಕತೆಗಳನ್ನು, ನಿಜವಾಗಿ ನಡೆದವೆಂಬಂತೆ ನಿಮಗೆ ಹೇಳಿ, ನಿಮ್ಮನ್ನು ಮರಳು ಮಾಡಿದ್ದಾರೆ. ಶೂದ್ರರು ವೇದ ಓದಬಾರದಂತೆ! ಓದುವುದಿರಲಿ, ಯಾರಾದರೂ ಓದುವುದನ್ನು ಆಲಿಸಿದರೂ ನರಕದಲ್ಲಿ ಶೂದ್ರನ ಕಿವಿಗೆ ಕಾಯಿಸಿದ ಕಬ್ಬಿಣವನ್ನು ಹೊಯ್ಯುತ್ತಾರಂತೆ! ಶತಶತಮಾನಗಳಿಂದಲೂ ನಿಮ್ಮನ್ನು ಈ ಮೂಢ ಸ್ಥಿತಿಯಲ್ಲಿ ಇಟ್ಟು, ನಿಮ್ಮಿಂದ ಸೇವೆ ಸಲ್ಲಿಸಿಕೊಂಡು, ಸುಖಜೀವನ ನಡೆಸುತ್ತಿದ್ದಾರೆ..... ಕ್ರೈಸ್ತಧರ್ಮದಲ್ಲಿ ಜಾತಿಭೇದವಿಲ್ಲ; ಎಲ್ಲರೂ ದೇವರ ಇದಿರಿನಲ್ಲಿ ಸಮಾನರು. ನಾನು ಕೇಳಿಕೊಳ್ಳುವುದಿಷ್ಟೆ; ನೀವು ಕ್ರೈಸ್ತಮತಕ್ಕೆ ಸೇರಿ, ಬಿಡಿ, ಅದು ಅಷ್ಟು ಮುಖ್ಯವಲ್ಲ; ಆದರೆ ಕ್ರೈಸ್ತಧರ್ಮದ ಉದಾರ ತತ್ತ್ವಗಳನ್ನು ಸೇವಾ ಮನೋಧರ್ಮವನ್ನು ಸರ್ವಸಮಾನತಾ ದೃಷ್ಟಿಯನ್ನು ಉನ್ನತ ಆದರ್ಶಗಳನ್ನು ನಿಮ್ಮ ಮಾರ್ಗದರ್ಶನ ಜ್ಯೋತಿಯನ್ನಾಗಿ ಮಾಡಿಕೊಂಡು, ಬ್ರಾಹ್ಮಣ್ಯದ ದುರ್ಮುಷ್ಟಿಯಿಂದ ಬಿಡಿಸಿಕೊಳ್ಳುವುದು ಮಾತ್ರ ನಿಮ್ಮ ಜನಾಂಗದ ಪ್ರಗತಿಗೆ ಅತ್ಯಂತ ಅವಶ್ಯಕವಾದ ಆದ್ಯ ಕರ್ತವ್ಯಕರ್ಮ! ಆ ದಾರಿಯಲ್ಲಿ ಮುಂದುವರಿಯುವುದಕ್ಕೆ ನಿಮ್ಮ ಜನಾಂಗದವರಿಗೆ ನಾವು ಸರ್ವಸಹಾಯ ನೀಡಲು ಸಿದ್ಧರಿದ್ದೇವೆ.....ಈ ಸಾಯಂಕಾಲ ನಡೆಯಲಿರುವ ಈ ಸ್ಕೂಲಿನ ಪ್ರಾರಂಭೋತ್ಸವ ಆ ದಿಕ್ಕಿನಲ್ಲಿ ನಮ್ಮ ಮಿಶನ್ ಇಟ್ಟಿರುವ ಮೊದಲ ಹೆಜ್ಜೆ, ನಿಮ್ಮ ಜನರೆಲ್ಲ, ಅದರಲ್ಲಿಯೂ ನಿಮ್ಮಂಥ ಮತ್ತು ದೇವಯ್ಯಗೌಡರಂಥ ಮುಂದಾಳುತನದ ಯುವಕರು, ಮುಂದೆ ಬಂದು ನಮ್ಮೊಡನೆ ಸಹಕರಿಸುತ್ತೀರೆಂದು ನಾನು ದೃಢವಾಗಿ ನಂಬಿದ್ದೇನೆ. ಸರ್ಕಾರದಿಂದಾಗಲಿ, ವಿದ್ಯಾಭ್ಯಾಸದ ಇಲಾಖೆಯಿಂದಾಗಲಿ, ನಮ್ಮ ಮಿಶನ್ನಿನ ಕಡೆಯಿಂದಾಗಲಿ ನಿಮಗೆ ಬೇಕಾಗುವ ಎಲ್ಲ ನೆರವು ಒದಗುವಂತೆ ಮಾಡಲು ನಾನು ಪವಿತ್ರಾತ್ಮ ಯೇಸುಕ್ರಿಸ್ತನ ಹೆಸರಿನಲ್ಲಿ ಕಂಕಣ ಬದ್ಧನಾಗಿದ್ದೇನೆ.....ತಮಗೆಲ್ಲರಿಗೂ ನಮಸ್ಕಾರ....." ೭) P. 178

ಈ ಮೇಲಿನ ಉದ್ಧರಣೆ ಶತಶತಮಾನಗಳಿಂದ ಪುರೋಹಿತಶಾಹಿ ವ್ಯವಸ್ಥೆ ಮನುಷ್ಯ ಮನುಷ್ಯರ ನಡುವೆ ಅಸಮಾನತೆಗಳನ್ನು ಸೃಷ್ಟಿಮಾಡಿ ತಮ್ಮ ಜೀವನೋಪಾಯಕ್ಕೆ, ಸಂಪಾದನೆಗೆ, ಅನುಕೂಲವಾಗುವಂತೆ, ಜನಾಂಗಭೇದ ನೀತಿಯನ್ನು ಸೃಷ್ಟಿಸಿದ ವ್ಯವಸ್ಥೆಗೆ ಕೊಟ್ಟ ವ್ಯಾಖ್ಯೆಯಂತಿದೆ. ಹಾಗೆಯೇ ಅಂಥ ಹೊಸ ಸಾಂಸ್ಕೃತಿಕ ಸಂಪರ್ಕದಿಂದ, ಸ್ಥಳೀಯ ಮೌಢ್ಯತೆಗಳ ಬಗೆಗೆ ಎಚ್ಚರವು, ಅನನ್ಯತೆಗಳ ಬಗೆಗೆ ಆದರವು, ಅಗತ್ಯವೆಂಬ ಧೋರಣೆಯು ಇಲ್ಲಿದೆ. 'ಮತಪ್ರಚಾರ ಮತ್ತು ಮತಾಂತರ'ದ ಉದ್ದೇಶಗಳು ಪ್ರಧಾನವಾಗಿದ್ದ ಕ್ರೈಸ್ತ ಮಿಷನರಿಗಳು, ಬ್ರಿಟಿಷ್ ಸಾಮ್ರಾಜ್ಯದ ಮತ್ತು ಕ್ರೈಸ್ತಧರ್ಮದ ಮುಂಚೂಣಿಯ ದಳಗಳಾಗಿ ಸಹ್ಯಾದ್ರಿಯ ಕಾಡುಹಳ್ಳಿಗಳಿಗೆ ಕಾಲಿಟ್ಟು, ಸ್ಕೂಲ್, ಆಸ್ಪತ್ರೆಗಳನ್ನು

ತೆರೆದು, ಇಂಗ್ಲೀಷ್ ಶಿಕ್ಷಣವನ್ನು ಪರಿಚಯಿಸಿ, ಪುರೋಹಿತಶಾಹಿ ವ್ಯವಸ್ಥೆಯಿಂದ ಬಿಡುಗಡೆಗೊಳ್ಳಲು ಹೊಸ ಎಚ್ಚರವನ್ನು ಉಂಟುಮಾಡಿದ ಕ್ರೈಸ್ತಪಾದ್ರಿಗಳ ಸೇವಾ ಕಾರ್ಯದ ಬಗೆಗೆ ಕುವೆಂಪು ಸಂವೇದನೆ ಆಸ್ಥೆಯಿಂದ ಗೌರವಿಸುತ್ತದೆ. ಮತ್ತು ಕುವೆಂಪು ಅವರು ತಮ್ಮ ಕಥನವನ್ನು ವೈಚಾರಿಕತೆಯ ವಿಶ್ಲೇಷಣೆಗೆ ಸಮರ್ಥ ವಾಹಕವಾಗಿ ದಾಖಲಾರ್ಹವಾಗಿದೆ.) p. 178

## ೨. ಮಲೆನಾಡಿನ ಪುನಶ್ಚೇತನ ಸುಯೋಗದ ನಂತರ

ಕುವೆಂಪು ಅವರ ಕಥನದ ಸಂವೇದನೆ ಏಕಕಾಲದಲ್ಲಿ ಪುರೋಹಿತಶಾಹಿ ಮತ್ತು ವಸಾಹತುಶಾಹಿ ಸಂಸ್ಕೃತಿಯ ಅಮಾನವೀಯ ನೆಲೆಗಳನ್ನು ಚಿಂತನೆಗೆ ಗುರಿಪಡಿಸುವುದು ಆ ಸಂವೇದನೆಯ ವೈಶಿಷ್ಟ್ಯವಾಗಿದೆ. ಇದನ್ನು ಪುರೋಹಿತಶಾಹಿ ಮತ್ತು ವಸಾಹತುಶಾಹಿ ಸಂಸ್ಕೃತಿಗೆ ಕುವೆಂಪು ಕಾವ್ಯ ತೋರಿದ ಸ್ವೀಕರಣೆ ಮತ್ತು ನಿರಾಕರಣೆಯ ನೆಲೆಗಳಲ್ಲಿ ಅಧ್ಯಯನಕ್ಕೆ ಗುರಿಪಡಿಸಿರುವ ಕೆ.ಸಿ. ಶಿವಾರೆಡ್ಡಿಯವರ ಈ ಕೆಳಗಿನ ಮಾತುಗಳನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆಂದು ಕಾಣಿಸುತ್ತದೆ:

> "ವಸಾಹತುಶಾಹಿ ಸಂಸ್ಕೃತಿಗೆ ಸಂಪೂರ್ಣವಾಗಿ ದೇಶವು ಅಧೀನವಾದ ಕಾಲಮಾನದಲ್ಲಿ ಬರವಣಿಗೆಯಲ್ಲಿ ತೊಡಗಿದ ಕುವೆಂಪು ಅವರು ಆ ಸಂಸ್ಕೃತಿಯ ಆಕರ್ಷಣೆ - ವಿಕರ್ಷಣೆಗಳಿಗೆ ಒಳಗಾದದ್ದು ಆ ಕಾಲಮಾನದ ಚಾರಿತ್ರಿಕ ಸಂಗತಿಗಳ ವಾಸ್ತವಕತೆಯನ್ನು ಸೂಚಿಸುತ್ತದೆ. ಅಂದರೆ ವಸಾಹತುಶಾಹಿ ಸಂಸ್ಕೃತಿಯ ಹೊಸ ವಿಚಾರಗಳು ಕುವೆಂಪು ಅವರಂತೆಯೇ ಆ ಕಾಲದ ಅನೇಕರನ್ನು ಆಕರ್ಷಿಸಿದ್ದವು. ಹಾಗಿದ್ದೂ ಕುವೆಂಪು ಅವರ ಸಂವೇದನೆ ಸಾಂಪ್ರದಾಯಿಕ ವೈದಿಕ ಸಂಸ್ಕೃತಿ ಹಾಗೂ ವಸಾಹತು ಸಂಸ್ಕೃತಿಗಳಿಗೆ ಏಕಕಾಲ ದಲ್ಲಿ ಮುಖಾಮುಖಿಯಾದ ಬಗೆ ಕನ್ನಡ ಸಾಹಿತ್ಯದಲ್ಲಿಯೇ ಅತ್ಯುಟ್ಟು ಗಂಭೀರವಾದ ದ್ದಾಗಿದೆ. ಪುರೋಹಿತಶಾಹಿಯ ನಿರ್ಮಿತಿಗಳಾದ ಮತಾಂಧತೆ, ಜಾತೀಯತೆ ಮತ್ತು ಧಾರ್ಮಿಕ ಮೌಢ್ಯತೆಗಳಿಂದಾಗಿ ಭಾರತೀಯ ಸಮಾಜದಲ್ಲಿ ಸೃಷ್ಟಿಯಾಗಿದ್ದ ನಿಷ್ಕ್ರಿಯತೆ ಯನ್ನು ಹಾಗೂ ಅದಕ್ಕೆ ಕಾರಣಗಳನ್ನು ಶೋಧಿಸಲು ಕುವೆಂಪು ಅವರ ಸೃಷ್ಟಿಶೀಲತೆ ತೊಡಗಿತು. ಪರಕೀಯ ಸಂಸ್ಕೃತಿಯು ಹೇರುವ ಮೌಲ್ಯಗಳನ್ನು ತಾತ್ವಿಕವಾಗಿ ಪ್ರಶ್ನಿಸುವ ಪರಿಶೀಲಿಸುವ ಅವರ ಧೋರಣೆಗಳು ಗಮನಾರ್ಹವಾದದ್ದಾಗಿವೆ.
>
> ಕುವೆಂಪು ಅವರ ಈ ಬಗೆಯ ಧೋರಣೆಗಳು ಒಳ ಮತ್ತು ಹೊರಗಿನ ಸಂಸ್ಕೃತಿಗಳು ಹೇರುವ ಹಾಗೂ ಶೋಷಿಸುವ ಸ್ಥಿತಿಗತಿಗಳನ್ನು ಕಂಡು ಸಿಡಿದೇಳುತ್ತವೆ. ವೈಚಾರಿಕ - ವೈಜ್ಞಾನಿಕ ನಿಕಷಕ್ಕೆ ಒಂದು ಸಿದ್ಧ ಮೌಲ್ಯವ್ಯವಸ್ಥೆಯನ್ನು ಗುರಿಪಡಿಸುವ ಕ್ರಮ ಅವರ ಎಲ್ಲ ಕೃತಿಗಳ ಮುಖ್ಯ ಆಶಯವಾಗಿದೆ. ಇದರ ಜೊತೆಯಲ್ಲಿಯೇ ವಸಾಹತು ಸಂಸ್ಕೃತಿಯು ತಂದ ವಿಸ್ಮಯ ಹಾಗೂ ಸಮಸ್ಯೆಗಳಿಗೆ ಅವರ ಕೃತಿಗಳು ಪ್ರತಿಕ್ರಿಯಿಸುವ ಪ್ರಕ್ರಿಯೆಯೂ ಅತ್ಯಂತ ಸಂಕೀರ್ಣವಾದುದು. ಅಂದರೆ ಅವರ ಕೃತಿಗಳಲ್ಲಿ

ಅಭಿವ್ಯಕ್ತಗೊಳ್ಳುವ ಸಂಕೀರ್ಣತೆಯು ವೈದಿಕ ಹಾಗೂ ವಸಾಹತುಶಾಹಿ ವ್ಯವಸ್ಥೆಗಳೆರೆಡರ ಸ್ವೀಕರಣೆ ಮತ್ತು ನಿರಾಕರಣೆಯ ನೆಲೆಗಳಲ್ಲಿ ಪ್ರಕಟವಾಗುತ್ತದೆ." ೧೭

ವಸಾಹತುಶಾಹಿ ಸಂದರ್ಭ ಈಗಾಗಲೇ ಗುರುತಿಸಿಕೊಂಡಿರುವಂತೆ ಭಾರತದ ಸಾಂಸ್ಕೃತಿಕ ಬದುಕಿನಲ್ಲಿ ಅನೇಕ ಗೊಂದಲಗಳನ್ನು ಉಂಟುಮಾಡಿತ್ತು. ಒಂದು ಕಡೆ ದೇಶೀಯ ಸ್ವಾತಂತ್ರ್ಯ ಚಳವಳಿಯ ಹೋರಾಟದ ವಾತಾವರಣ ಎಲ್ಲೆಲ್ಲೂ ಹಬ್ಬಿತ್ತು. ಹೀಗೆ ಹೊರ ಮತ್ತು ಒಳಗಿನ ಸಾಂಸ್ಕೃತಿಕ, ವೈಚಾರಿಕ, ಸಂಘರ್ಷಗಳಿಂದ ಕುವೆಂಪುರವರ ಸೃಷ್ಟಿಶೀಲತೆ ರೂಪುಗೊಳ್ಳುತ್ತಿರುವುದು ಅವರ ಕಥನ ಸಾಹಿತ್ಯದಿಂದ ತಿಳಿದುಬರುವ ಅಂಶವಾಗಿದೆ. ಇಂಥಹ ಸಂಕೀರ್ಣ ವ್ಯವಸ್ಥೆಯಲ್ಲಿ ಮೈಪಡೆದ ಸಂವೇದನೆ ಒಂದು ಬಗೆಯ ಮಾನವೀಯ ಸಾಮಾಜಿಕ ಜವಾಬ್ದಾರಿಗಳನ್ನು ಮೈಮೇಲೆ ಎಳೆದುಕೊಂಡು ಚಿಂತಿಸುವ, ಪ್ರತಿಕ್ರಿಯಿಸುವ ಪ್ರಕ್ರಿಯೆಯನ್ನು ಅವರ ಕಥನ ಸ್ಪಷ್ಟಪಡಿಸುತ್ತದೆ. ಹಾಗಾಗಿ ಹೊರ ಮತ್ತು ಒಳಗಿನ ಎಲ್ಲ ಬಗೆಯ ಅಮಾನವೀಯ ಮೌಲ್ಯಗಳನ್ನು ಪ್ರಶ್ನಿಸುತ್ತಲೇ, ಮಾನವೀಯ ಮೌಲ್ಯಗಳ ಶೋಧನೆಗೆ ಕುವೆಂಪುರವರ ಕಥನ ಸಾಹಿತ್ಯದ ಸಂವೇದನೆ ತೊಡಗಿದ್ದು ಆ ಸಂವೇದನೆಯ ಹೆಗ್ಗಳಿಕೆ ಎನ್ನಬಹುದು. 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡಿತಿ' ಅಷ್ಟೇ ಏಕೆ ಅವರ ಒಟ್ಟು ಕೃತಿ ಸಮೂಹದ ವಿಚಾರಧಾರೆ ಇಂಥ ಶೋಧನೆಯ ಕಡೆ ಮುಖ ಮಾಡಿರುವುದನ್ನು ಈ ಅಧ್ಯಯನದಿಂದ ತಿಳಿಯಬಹುದಾಗಿದೆ. ಹಾಗೆಯೇ ಕುವೆಂಪು ಕಥನ ನಿಚ್ಚಳವಾಗಿಯೇ ಈ ಮೇಲಿನ ಎಲ್ಲ ವಿಚಾರಗಳನ್ನು ಉದ್ದಕ್ಕೂ ಚಿಂತಿಸುವುದನ್ನು ಕಾಣುತ್ತೇವೆ.

'ಮಲೆಗಳಲ್ಲಿ ಮದುಮಗಳು' ಕಥನ ವಸಾಹತು ಸಂಸ್ಕೃತಿಯ ಮತಾಂತರ ಪ್ರಕ್ರಿಯೆಯನ್ನು ಅದರ ಹಿಂದಿನ ದುರುದ್ದೇಶವನ್ನು ತೀವ್ರವಾಗಿ ಪ್ರಶ್ನಿಸಿತು. ಆ ಸಂಸ್ಕೃತಿಯಿಂದ ದತ್ತವಾದ ಆಧುನಿಕತೆ, ಆಧುನಿಕ ವಿಚಾರಧಾರೆಗಳು, ಆ ಮೂಲಕ ಮಲೆನಾಡಿಗೆ ಬಂದ ಆಧುನಿಕತೆಯ ಪ್ರತೀಕವಾದ ಶಾಲೆಯ ಬಗೆಗೆ ಮುಕ್ತವಾಗಿ ಒಲವು ತೋರುವುದನ್ನು ಉದ್ದಕ್ಕೂ ಕಾಣುತ್ತೇವೆ. ಆಧುನಿಕತೆಯ ಪ್ರತೀಕವಾದ ಶಾಲೆ ಇಡೀ ಮಲೆನಾಡಿನ ದುರಂತಬದುಕಿಗೆ "ಪುನಶ್ಚೇತನದ ಸುಯೋಗವನ್ನು ತಂದುಕೊಟ್ಟಿತ್ತೆಂಬ ಆಶಯ ಮದುಮಗಳು ಕಾದಂಬರಿಯಲ್ಲಿ ಗಾಢವಾಗಿದೆ."

ಮಲೆನಾಡಿನ ಎಲ್ಲ ಬಗೆಯ ಕಾರ್ಯ ಚಟುವಟಿಕೆಗಳಿಗೆ ಕೇಂದ್ರವಾಗಿದ್ದ ಅಂತಕ್ಕನ 'ಹೋಟೆಲ್ ಮನೆ' ಆ ಎಲ್ಲ ಕಾರ್ಯಚಟುವಟಿಕೆಗಳ ಪರಿಣಾಮವಾಗಿಯೇ ಸಂಪೂರ್ಣವಾಗಿ ಅವನತಿ ಹೊಂದಿ 'ಹೋಟ್ಲುಮನೆ', 'ಸ್ಕೂಲ್ ಮನೆ'ಯಾಗಿ ಪರಿವರ್ತನೆಗೊಂಡು, ಮುದುಕಿ ಅಂತಕ್ಕನ ಬದುಕಿಗೆ ಆಶ್ರಯವಾದಂತೆ ಮಲೆನಾಡಿನ ಯುವ ಪೀಳಿಗೆಯ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಡುವ ಕೇಂದ್ರವಾಗಿ ಪರಿವರ್ತನೆಗೊಂಡಿತು. ಅಂಥ ಪರಿವರ್ತನೆಯ ಕೇಂದ್ರ ಇಡೀ ಮಲೆನಾಡಿನ ಬದುಕಿಗೆ ಪುನಶ್ಚೇತನ ಶಕ್ತಿಕೇಂದ್ರವಾಗಿ ಪರಿವರ್ತನೆಗೊಂಡ ಪ್ರಕ್ರಿಯೆಯ ಪರಿಣಾಮ. 'ಕಾನೂರು ಹೆಗ್ಗಡಿತಿ'ಯ ಕಥನ ಆರಂಭವಾಗುವುದೇ ಅಂತಕ್ಕನಂತಹ 'ಸ್ಕೂಲ್ ಮನೆ'ಯಲ್ಲಿ ಕಲಿತು ಮೈಸೂರು, ಬೆಂಗಳೂರು ನಗರಗಳಿಗೆ ಹೋಗಿ ಹೆಚ್ಚಿನ ವಿದ್ಯಾಭ್ಯಾಸವನ್ನು ಪಡೆದು 'ಊರಿಗೆ ಮರುಳು'ವ ವಿದ್ಯಾವಂತ ಯುವಕರ ಭೌತಿಕ ಮತ್ತು ಮಾನಸಿಕ ವಿವರಗಳ ಚಿತ್ರಗಳಿಂದಲೇ.

'ಕಾನೂರು ಹೆಗ್ಗಡಿತಿ' ಕಾದಂಬರಿ ಕಥನದ ಕಾಲಕ್ಕಾಗಲೇ ಮಲೆನಾಡಿನ ಬದುಕು ಅನೇಕ ಬಗೆಗಳಲ್ಲಿ ಆಧುನಿಕತೆಯ ಕಡೆಗೆ ಮುಖಮಾಡಿರುವುದನ್ನು ಕಾಣುತ್ತೇವೆ. ಮದುಮಗಳು ಕಾದಂಬರಿಯಲ್ಲಿ ಆಧುನಿಕತೆಯ ಬಗೆಗೆ

ವ್ಯಕ್ತವಾಗುವ ಭೂಮಿ, ಆತಂಕ, ತಲ್ಲಣ, ವಿಸ್ಮಯಗಳು ಕಾನೂರು ಕಥನದಲ್ಲಿ ಬದುಕಿನ ಭಾಗವೇ ಆಗಿ ಸೇರಿಹೋಗಿರುವುದನ್ನು ಕಾಣುತ್ತೇವೆ. ಆಧುನಿಕತೆಯ ಲಕ್ಷಣಗಳಾದ ಕ್ರಾಪು, ಉಡುಪು, ಇಂಗ್ಲೀಷ್ ಭಾಷೆ, ಕಾಫಿ, ವೈನು - ವಿಸ್ಕಿ, ಲಾಟೀನು, ಬೈಸಿಕಲ್ ಇವೆಲ್ಲವು ಬದುಕಿನ ಅನಿವಾರ್ಯ ಅಂಶಗಳಾಗಿಯೆ ಪ್ರವೇಶ ಮಾಡಿರುವ ಚಿತ್ರಗಳು ಕಾದಂಬರಿಯ ಉದ್ದಕ್ಕೂ ಕಾಣಸಿಗುತ್ತವೆ. ಮತಾಂತರದ ಬಗೆಗಿನ ಪ್ರತಿರೋಧದ ಧೋರಣೆಗಳು ಕಾನೂರು ಕಥನದಲ್ಲಿ ಮದುಮಗಳು ಕಾದಂಬರಿಯ ಪ್ರಮಾಣದಲ್ಲಿ ಇಲ್ಲದಿದ್ದರೂ ಮತಾಂತರದ ಪ್ರಕ್ರಿಯೆಯ ಬಗ್ಗೆ ವಿಡಂಬನೆ ಇರುವುದನ್ನು ನೋಡಬಹುದು. ಕ್ರೈಸ್ತಧರ್ಮದ ಬಗೆಗೆ ಮದುಮಗಳು ಕಾದಂಬರಿಗಿಂತ ಭಿನ್ನಧೋರಣೆ ಹೆಗ್ಗಡಿತಿ ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಆದರೆ ಮತಾಂತರದ ಆಮಿಷಗಳಾಗಿ ಸುಧಾರಣೆಯ ನೆಪದಲ್ಲಿ ಮಲೆನಾಡನ್ನು ಪ್ರವೇಶಿಸಿದ ಇಂಗ್ಲೀಷ್ ಶಾಲೆ. ಆಸ್ಪತ್ರೆ ಮೊದಲಾದ ಸುಧಾರಣಾವಾದಿ ನೆಲೆಗಳಿಂದ ಮಲೆನಾಡಿಗೆ ಆದ ಲಾಭದ ಬಗೆಗೆ ಕುವೆಂಪು ಕಥನದ ಸಂವೇದನೆ ಅತ್ಯಂತ ಗೌರವದಿಂದ ಧ್ಯಾನಿಸುತ್ತದೆ. ಪುರೋಹಿತಶಾಹಿ ವ್ಯವಸ್ಥೆಯಿಂದ ವ್ಯಷ್ಟಿ ಮತ್ತು ಸಮಷ್ಟಿ ಬದುಕು ಮೌಢ್ಯದ ಕಬಂಧಗಳಲ್ಲಿ ಸಿಕ್ಕಿ ನರಳುತ್ತಾ, ವ್ಯಕ್ತಿ ಮತ್ತು ಕೌಟುಂಬಿಕ ದುರಂತಗಳಿಗೆ ಕಾರಣವಾಗಿದ್ದ ಅನಿಷ್ಟಗಳ ಬಗೆಗೆ ಎಚ್ಚರವನ್ನು ಉಂಟುಮಾಡಿದ ಇಂಥ ವಸಾಹತು ಧೋರಣೆಗಳನ್ನು ಕುವೆಂಪು ಕಥನ ಪುರೋಹಿತಶಾಹಿ ವ್ಯವಸ್ಥೆಯ ಅಮಾನವೀಯ ಮೌಲ್ಯಗಳಿಗೆ ಮುಖಾಮುಖಿಯಾಗಿಸುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸನಾತನ ಹಿಂದೂ ಧರ್ಮದ ಮಾನವೀಯ ಮೌಲ್ಯಗಳ ಬಗೆಗೆ ತೋರುವ ಕುವೆಂಪು ಅವರ ಆಸ್ಥೆ 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಬೌದ್ಧ ಮತದ ಕಡೆಗೆ ಅವರ ಸಂವೇದನೆ ಪಲ್ಲಟಗೊಂಡಿರುವುದು ಕುತೂಹಲದಿಂದ ಗಮನಿಸಬೇಕಾದ ವಿಚಾರವಾಗಿದೆ.

'ಕಾನೂರು ಹೆಗ್ಗಡಿತಿ' ಕಾದಂಬರಿಯ ಕೇಂದ್ರ ಪಾತ್ರವಾದ ಹೂವಯ್ಯನು ಬುದ್ಧನ ಬದುಕು ಮತ್ತು ಅವನ ವಿಚಾರಧಾರೆಗಳಿಗೆ ಆಕರ್ಷಿತವಾಗಿರುವುದು ಈ ಕಾದಂಬರಿಯಲ್ಲಿ ಮೇಲ್ನೋಟಕ್ಕೆ ಕಂಡುಬರುವ ವಿಚಾರವಾಗಿದೆ. ಇಂಥ ಆಕರ್ಷಣೆಯನ್ನು ಮತಾಂತರದ ಪ್ರಕ್ರಿಯೆ ಎಂದು ಮೇಲ್ನೋಟಕ್ಕೆ ಕರೆಯಬಹುದಾದರೂ, ಮತಾಂತರ ಎಂದರೇನೆಂದು ತಿಳಿಯದೆ ಈ ಬಗೆಗೆ ಸುಲಭವಾಗಿ ಒಂದು ನಿರ್ಣಯಕ್ಕೆ ಬರುವುದು ಅಷ್ಟು ಸರಿಯಲ್ಲವೆನಿಸುತ್ತದೆ. ಏಕೆಂದರೆ ಕುವೆಂಪು ಸಂವೇದನೆ ಯಾವುದೇ ನಿರ್ದಿಷ್ಟ ಮತ ಹಾಗೂ ಧರ್ಮದ ವಿಚಾರಗಳಿಗೆ ಕಟ್ಟು ಬೀಳುವ ಸಂವೇದನೆ ಅಲ್ಲವೆಂಬುದು, ಅವರ ಬದುಕಿನ ಕ್ರಮ ಮತ್ತು ಅವರ ಕೃತಿಗಳಿಂದ ವ್ಯಕ್ತವಾಗುವ ಅಂಶವಾಗಿದೆ. ಅವರ ಪ್ರಸಿದ್ಧ ವಿಶ್ವಮಾನವ ಸಂದೇಶ, 'ಮದುಮಗಳು' ಕಾದಂಬರಿಯ ಪೀಠಿಕಾ ಕವನ ಹಾಗೂ ಅವರ ಬಿಡಿ ಕೃತಿಗಳ ಮತ್ತು ಮೊದಲೇ ಈ ಮೇಲೆ ಹೇಳಿದಂತೆ ಅವರ ಎಲ್ಲ ಕೃತಿಗಳ ಆಶಯ ಒಂದು ನಿರ್ದಿಷ್ಟ ಧಾರ್ಮಿಕ ಕ್ರಿಯಾಚರಣೆಗಳ ನೆಲೆಯಲ್ಲಿ ಮಾತ್ರ ನಿಲ್ಲುವಂಥದ್ದಲ್ಲ. ಹೀಗಾಗಿ ಹೂವಯ್ಯನು ಬುದ್ಧನ ಬಗೆಗೆ ತೋರುವ ಒಲವು, ಇಡೀ ಮಲೆನಾಡಿನ ಕೌಟುಂಬಿಕ ಮತ್ತು ಸಾಮಾಜಿಕ ನೆಲೆಯಲ್ಲಿ ತಾಂಡವವಾಡುತ್ತಿರುವ ಹಿಂಸೆಗೆ ಮುಖಾಮುಖಿಯಾದಂತೆ. ಅದು ಬುದ್ಧನ ವಿಚಾರಧಾರೆಯ ಬಗೆಗಿನ ಹೂವಯ್ಯನ ಒಲವು ಸಂಕೇತಿಸುತ್ತಿರುವಂತೆ ಕಾಣುತ್ತದೆ.

"ಆರ್ಯಧರ್ಮದ ಉತ್ತಮ ಆದರ್ಶವೇನು? ಹಿಂದೂಗಳೆಂದು ಹೇಳಿಕೊಳ್ಳುವ ಈ ಮಂದಿ ಮಾಡುತ್ತಿರುವ ಕಾರ್ಯಕಲಾಪಗಳೇನು? ಉಪನಿಷತ್ತು ಭಗವದ್ಗೀತೆಗಳ ಮಹೋನ್ನತ ದಿವ್ಯದರ್ಶನವೆಲ್ಲಿ? ಈ ಮಂದಿ ಕೈ ಕೊಂಡಿರುವ ಪಿಶಾಚಾರಾಧನೆಯೆಲ್ಲಿ? ಇದನ್ನೆಲ್ಲ ತಿದ್ದುವ ಬಗೆ ಹೇಗೆ? ಒಂದು ರೀತಿಯಿಂದ ನೋಡಿದರೆ ಪಾದ್ರಿಗಳ ಖಂಡನೆ ಎಷ್ಟು ಸತ್ಯವಾಗಿದೆ." ೧೮



ಈ ಮೇಲಿನ ಉದ್ಧರಣೆಯಲ್ಲಿನ ಅನೇಕ ಪ್ರಶ್ನೆಗಳು ಮಲೆನಾಡಿನ ವ್ಯಷ್ಟಿ ಮತ್ತು ಸಮಷ್ಟಿ ನೆಲೆಯಲ್ಲಿ ತಾಂಡವವಾಡುತ್ತಿರುವ ಹಿಂಸೆಯ ಬಗೆಗೆ ಕುವೆಂಪುರವರ ಕಥನ ಗಾಢವಾಗಿ ಚಿಂತಿಸಿರುವುದನ್ನು ಸ್ಪಷ್ಟಪಡಿಸುತ್ತದೆ. ಆರ್ಯಧರ್ಮದ (ಹಿಂದೂ, ಬೌದ್ಧ, ಜೈನ, ಸಿಖ್) ಮಾನವೀಯ ಮೌಲ್ಯಗಳು ಹಿಂದೆ ಸರಿದು, ಅಮಾನವೀಯ ಮೌಲ್ಯಗಳು ಮೇಲಾಟ ನಡೆಸುತ್ತಿರುವ ಬಗೆಯನ್ನು ಕಂಡು, ಸನಾತನ ಆರ್ಯಧರ್ಮದ ಉತ್ತಮ ಆದರ್ಶಗಳು ಮತ್ತು ದಿವ್ಯದರ್ಶನ ಏನಾಯಿತೆಂಬ ಆತಂಕ ಈ ಮೇಲಿನ ಪ್ರಶ್ನೆಗಳಲ್ಲಿ ವ್ಯಕ್ತವಾಗುವ ಅಂಶವಾಗಿದೆ. ಆರ್ಯಧರ್ಮದ ಅಮಾನವೀಯ ನೆಲೆಗಳನ್ನು, ಪುರಾಣ ಮೊದಲಾದವುಗಳನ್ನು ಪುನರ್ ಸೃಷ್ಟಿಗೆ ಗುರಿಪಡಿಸಬೇಕಾದ ಅಗತ್ಯವನ್ನು, ಇದನ್ನೆಲ್ಲ ತಿದ್ದುವ ಬಗೆ ಹೇಗೆ ಎಂಬ ಪ್ರಶ್ನೆ ಸ್ಪಷ್ಟಪಡಿಸುತ್ತದೆ. ಹಾಗೆಯೇ ಮತಾಂತರ ಪ್ರಕ್ರಿಯೆಯ ಸಂದರ್ಭದಲ್ಲಿ ಕ್ರೈಸ್ತ ಮಿಷಿನರಿಗಳು ಆರ್ಯಧರ್ಮದ ಬಗೆಗೆ ಮಾಡಿದ ಖಂಡನೆ ಈ ಅರ್ಥದಲ್ಲಿ ಎಷ್ಟು ಸತ್ಯವೆಂಬುದನ್ನು ಹೂವಯ್ಯನ ಇಂತಹ ಅನೇಕ ಪ್ರಶ್ನೆಗಳು ವಿಧಿತಪಡಿಸುತ್ತವೆ. ಭಗವದ್ಗೀತೆ, ವೇದ ಉಪನಿಷತ್ತುಗಳು, ಜೈನಪುರಾಣಗಳು, ಬಸವ - ಬುದ್ಧ ಮೊದಲಾದ ಸಂತರ ವಿಚಾರಧಾರೆಗಳನ್ನು ಮುಖಾಮುಖಿಯಾಗಿಸುವುದರ ಮೂಲಕ, ಹಿಂಸಾಮಯ ಬದುಕಿಗೆ ಹೊಸ ಕಾಣ್ಕೆಯೊಂದನ್ನು ಕುವೆಂಪು ಸಂವೇದನೆ ಶೋಧಿಸಿಕೊಳ್ಳುತ್ತಿರುವುದನ್ನು ಇಲ್ಲಿ ಕಾಣುತ್ತೇವೆ.

'ಕಾನೂರಿನಲ್ಲಿ ದೆಯ್ಯದ ಹರಕೆ', 'ಹೋತದ ದೆಸೆಯಿಂದ' ಮೊದಲಾದ ಅಧ್ಯಾಯಗಳಲ್ಲಿ ಸನಾತನ ಧಾರ್ಮಿಕ ಮೌಢ್ಯಾಚರಗಳಿಗೆ ಅಹಿಂಸೆ ಮತ್ತು ಕರುಣೆ ಎಂಬುವಂತಹ ಮೌಲ್ಯಗಳನ್ನು ಎದುರಾಗಿಸುತ್ತಾರೆ. "ಕರುಣೆ ಮೂಕಪ್ರಾಣಿಯ ಬಲಿದಾನಕ್ಕಿಂತಲೂ ಹೆಚ್ಚಿನ ಪೂಜೆ" ಎಂಬ ಹೂವಯ್ಯನ ಮಾತು ಹಿಂಸೆಗೆ ತೋರಿದ ಪ್ರತಿಕ್ರಿಯೆಯಾಗಿದೆ. ಒಂದು ಕಾಲದ ಜೀವನ ಮೌಲ್ಯಗಳ 'ಆದರ್ಶ ಪ್ರತಿಮೆ'ಯಂತೆ ಕಾಣುವ ಹೂವಯ್ಯನ ವ್ಯಕ್ತಿತ್ವ ಆ ಕಾಲದ ಸಂಘರ್ಷಾತ್ಮಕ ಬದುಕನ್ನೇ ಸಂಕೇತಿಸುವಂತಿದೆ.



"......ಹೂವಯ್ಯನ ಮನದಲ್ಲಿ ಕೆಲವು ದಿನಗಳಿಂದ ಮೂಡಿದ್ದ ನಿರಾಶಾಭಾವ ಮತ್ತೂ ಪ್ರಬಲತರವಾಯಿತು. ಹಿಂದೆ ಅವನ ದೃಷ್ಟಿಗೆ ಸೌಂದರ್ಯದ ಬೀಡಾಗಿ ತೋರುತ್ತಿದ್ದ ವಿಶ್ವವು ಕ್ರೂರ ಪಿಶಾಚಿಯ ಕರ್ಮಶಾಲೆಯಂತೆ ಕುರೂಪವಾಗಿ ತೋರ ತೊಡಗಿತು. ಸರ್ವ ಕ್ಷಣಿಕಂ ಕ್ಷಣಿಕಂ, ಸರ್ವ ದುಃಖಂ, ಸರ್ವ ಶೂನ್ಯ ಶೂನ್ಯಂ, ಎಂಬುದಾಗಿ ಆತನೋದಿದ್ದ ಬೌದ್ಧಮತದ ಮೂಲಸಿದ್ಧಾಂತಗಳು ಇಂದು ಸತ್ಯವಾಗಿ ಪ್ರತ್ಯಕ್ಷವಾಗಿ ತೋರಿದವು. ಹಿಂದೆ ಆ ಕ್ಷಣಿಕವಾದವನ್ನು ದುಃಖವಾದವನ್ನೂ ಶೂನ್ಯವಾದವನ್ನೂ ಕೈಲಾಗದೆ ಸೋತವರ ಅಥವಾ ಚಿರರೋಗಿಗಳ ಸಿದ್ಧಾಂತಗಳೆಂದು ತಿರಸ್ಕರಿಸಿ

ನಗುತ್ತಿದ್ದನು. ಮೊದಲು ತಾನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ "ದೇವನಿಹನು ವ್ಯೋಮದಲ್ಲಿ, ಎಲ್ಲ ಕ್ಷೇಮ ಭೂಮಿಯಲ್ಲಿ!" ಎಂಬರ್ಥದ ಆಶಾವಾದಿ ಬ್ರೌನಿಂಗ್ ಕವಿಯ ಪದ್ಯದ ಚರಣಗಳು ಎಷ್ಟು ಜಳ್ಳು ಎಂಬುದು ಸಾಕ್ಷಾತ್ತಾಗಿ ಗೊತ್ತಾಯಿತು."[6]

ಮಲೆನಾಡಿನ ಬದುಕಿನಲ್ಲಿ ಘಟಿಸುವ ಅನೇಕ ದುರಂತಗಳು ಬದುಕಿನ ಬಗೆಗಿದ್ದ ಸೌಂದರ್ಯಾತ್ಮಕ ನಂಬಿಕೆಗಳನ್ನೇ ಸಂಪೂರ್ಣವಾಗಿ ಬದಲಿಸಿ ಬಿಡುತ್ತವೆ. ಒಂದು ಕಾಲದಲ್ಲಿ ಆದರ್ಶವಾಗಿ, ಸುಂದರವಾಗಿ ಕಂಡ ಪರಿಸರ ಇಂತಹ ಘಟನೆಗಳಿಂದ ಅದರ ಹಿಂದಿರುವ ಕ್ರೌರ್ಯವನ್ನು ಕಾಣಿಸುತ್ತದೆ. ಹಾಗೆ ಕಾಣಿಸುವುದರೊಂದಿಗೆ ಬದುಕಿಗೆ ಇರುವ ಹಲವು ಮುಖಗಳನ್ನು 'ಕುವೆಂಪು ಕಥನ' ಚಿಂತಿಸುವುದನ್ನು ಈ ಮೇಲಿನ ಉದ್ಧರಣೆಯಲ್ಲಿ ವಿಶ್ಲೇಷಿಸಲಾಗಿದೆ.

ರೊಮ್ಯಾಂಟಿಕ್ ಅಥವಾ ಭಾವುಕನಾದ ನಂಬಿಕೆಗಳಿಗೆ ಬೌದ್ಧಮತದ ಮೂಲ ಸಿದ್ಧಾಂತಗಳಿಂದ ಹಾಗೂ ವಾಸ್ತವ ಘಟನಾ ಪರಂಪರೆಗಳಿಂದ ಎದುರಾದ ಸತ್ಯವೊಂದು ಈ ಮೇಲಿನ ಉದ್ಧರಣೆಯಲ್ಲಿ ಮೈಪಡೆದಿದೆ. ಹೂವಯ್ಯನ ವ್ಯಕ್ತಿತ್ವದಲ್ಲಿ ಆಗುವ ಬದಲಾವಣೆಯ ಮೂಲಕ ವ್ಯಷ್ಟಿ ಮತ್ತು ಸಮಷ್ಟಿ ನೆಲೆಯಲ್ಲಿ ಆಗುತ್ತಿರುವ ಸ್ಥಿತ್ಯಂತರಗಳನ್ನು 'ಕುವೆಂಪು ಕಥನ' ಇಂಥ ಅನೇಕ ನೆಲೆಗಳಲ್ಲಿ ಕಟ್ಟಿಕೊಡುವುದನ್ನು ಕಾಣುತ್ತೇವೆ.

ಮಲೆನಾಡಿನ ವಿದ್ಯಾವಂತರ ಮನೆಗಳಲ್ಲಿ ಬುದ್ಧನ ಭಾವಚಿತ್ರ ಗೋಡೆಗಳನ್ನಲಂಕರಿಸುತ್ತಿತ್ತೆಂಬ ಸಂಗತಿ 'ಕಾನೂರು ಹೆಗ್ಗಡಿತಿ' ಕಾದಂಬರಿಯಿಂದ ವ್ಯಕ್ತವಾಗುತ್ತದೆ. ಕುವೆಂಪುರವರ ಬದುಕಿನ ಆದರ್ಶಗಳಿಗೆ ಸ್ಫೂರ್ತಿ ತಂದ ಲೋಕಗುರುಗಳಲ್ಲಿ ಬುದ್ಧನು ಒಬ್ಬ. 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಪ್ರಧಾನ ಪಾತ್ರವಾದ ಹೂವಯ್ಯ ತನ್ನ ಸುತ್ತ ಮುತ್ತ ಇದ್ದ ಸಿಂಗಪ್ಪಗೌಡರು, ಚಿನ್ನಯ್ಯ, ರಾಮಯ್ಯ, ವಾಸು, ಸೀತೆ ಇವರೆಲ್ಲರಿಗೂ ಬುದ್ಧನ ಮಹಾತ್ಯಾಗವನ್ನು ಅರ್ಥವಾಗುವಂತೆ ಅತ್ಯಂತ ಸರಳವಾಗಿ ವಿವರಿಸುತ್ತಾನೆ. ಮನೆ ಮಡದಿ ರಾಜ್ಯಕೋಶಗಳನ್ನು ತ್ಯಜಿಸಿ ಮನುಷ್ಯನ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕಲು ಹೊರಟ ಮಹಾತ್ಯಾಗಿ ಬುದ್ಧನ ಕಥೆಯನ್ನು ಕೇಳುತ್ತಿದ್ದ ಹಾಗೆ ಅವರೆಲ್ಲರ ಕಣ್ಣುಗಳಲ್ಲಿ ಹನಿಯಾಡುತ್ತದೆ. 'ಛೇ! ಹಾಂಗೆ ಮಾಡ್ಬಾರದಿತ್ತು!' ಎಂದು ಮಕ್ಕಳೂ ಬುದ್ಧನಿಗೆ ಸಹಾನುಭೂತಿ ತೋರಿಸುತ್ತಾರೆ. ಸಿದ್ಧಾರ್ಥನು ದೇವನಾದುದನ್ನು, ಅವನ ಹೆಂಡತಿಯೂ ಬಂಧುಗಳೂ ಆತನ ಶಿಷ್ಯವರ್ಗಕ್ಕೆ ಸೇರಿದುದನ್ನು, ಲೋಕವೆಲ್ಲ ಅವನ ಅನುಯಾಯಿಯಾದುದನ್ನು ಹೂವಯ್ಯ ವರ್ಣಿಸುತ್ತಾನೆ. ಬುದ್ಧನ ಆದರ್ಶಗಳು, ತತ್ವಗಳು ತನ್ನ ಮನಸ್ಸಿನಲ್ಲಿ ನಾಟಿದ ನಂತರ ಹೂವಯ್ಯ ಕಾನೂರಿಗೆ ಪಶ್ಚಿಮ ದಿಕ್ಕಿನಲ್ಲಿದ್ದ ಹೆಬ್ಬಂಡೆಯ ಮೇಲೆ ಬಂದು 'ಬುದ್ಧ'ನಂತೆ ಧ್ಯಾನ ಮಾಡುತ್ತಾ ಆಗಾಗ್ಗೆ ಕೂತುಬಿಡುತ್ತಾನೆ:

"ಅವರು ನಿತ್ಯ ಇಲ್ಲಿಗೆ ಬಂದು ಧ್ಯಾನಮಾಡ್ತಾರೆ.....ಈಗೀಗ ನನಗೆ ಅವರ ಹತ್ರ ಹೋಗೋಕೆ ಹೆದರಿಕೆಯಾಗ್ತದೆ. ಹೆದರಿಕೆ ಅಂದರೆ, ಹೆದರಿಕೆ ಅಲ್ಲ.....ಅವರ ಹತ್ರ ಹೋದರೆ ಏನೋ ಒಂದು ತರಾ ಆಗ್ತದೆ.....ಮೊದಲಿಗೆ ಬೇಟೆ ಅಂದರೆ ಪ್ರಾಣ ಬಿಡ್ತಿದ್ದರಲ್ಲಾ? ಈಗ ಅದರ ತಂಟೆಗೇ ಹೋಗೋದಿಲ್ಲ. ಮಾಂಸ ತಿನ್ನೋದು ಕೂಡ ವಜಾ ಮಾಡಿ ಬಿಟ್ಟಿದ್ದಾರೆ.....ಹಗಲು ಒಂದೇ ಹೊತ್ತು ಊಟ.....ಬೆಂಗಳೂರಿನಿಂದ ಅವರ ಸ್ನೇಹಿತರಿಗೆ ಕಾಗದ ಬರೆದು ಒಂದು (ಕೈಯಿಂದ ಎತ್ತರವನ್ನು ತೋರಿಸುತ್ತಾ)

ಇಷ್ಟೆತ್ತರ ಬುದ್ಧ ದೇವರ ಮೂರ್ತಿ ತರಿಸಿದ್ದಾರೆ! ಇಂದಿಗೆ ಸುಮಾರು ಹತ್ತು ಹದಿನೈದು ದಿನ ಆಯ್ತು ಅಂತ ಕಾಣ್ತದೆ.....ಪುಟ್ಟಮ್ಮ ಹಡೆಯುವುದಕ್ಕೆ ಹಿಂದಿನ ದಿನ ಅಲ್ಲ, ಅದರ ಹಿಂದಿನ ದಿನ ಅಂತ ಕಾಣ್ತದೆ.....ಆ ಮೇಲೆ ಅವರು ತಲೆಕೂದಲು ಗಡ್ಡ ಎಲ್ಲ ಬೋಳಿಸಿಬಿಟ್ಟಿದ್ದು.....!" ೨೦

ಭೌತಿಕವಾಗಿ, ದೈಹಿಕವಾಗಿ, ಮಾನಸಿಕವಾಗಿ ಬದಲಾಗುತ್ತಿರುವ ಹೂವಯ್ಯನ ಆಕೃತಿಯನ್ನು ಕಂಡ ಪುಟ್ಟಣ್ಣ ಈ ಮೇಲಿನ ಉದ್ಧರಣೆಯಲ್ಲಿರುವ ಸಂಭಾಷಣೆಯಲ್ಲಿ ತನ್ನ ಅನಿಸಿಕೆಯನ್ನು ವ್ಯಕ್ತಪಡಿಸುತ್ತಾನೆ. ಹೂವಯ್ಯ ಗಡ್ಡ ಕೂದಲು ಮೀಸೆ ಎಲ್ಲಾ ನುಣ್ಣಗೆ ತೆಗೆಸಿದ್ದು, ಹೆಬ್ಬಂಡೆಯ ಮೇಲೆ ಪದ್ಮಾಸನ ಹಾಕಿ ಕುಳಿತು ಧ್ಯಾನಸ್ಥನಾಗುವುದು ಹಲವಾರು ಬಾರಿ ಪುಟ್ಟಣ್ಣನಿಗೆ ಕಂಡು ಓಬಯ್ಯನ ಮುಂದೆ ಹೂವಯ್ಯನ ವ್ಯಕ್ತಿತ್ವವನ್ನು ಪ್ರಶಂಸಿಸುತ್ತಾನೆ. ಬುದ್ಧ ಹೂವಯ್ಯನ ಆರಾಧ್ಯ ದೈವ ಎಂಬುದು ಸುಸ್ಪಷ್ಟ. ಲೋಕದ ಕಷ್ಟಕಾರ್ಪಣ್ಯಗಳಿಗೆ, ಮನುಷ್ಯರ ಸುಖದುಃಖದ ಸಮಸ್ಯೆಗಳಿಗೆ ಬುದ್ಧನ ಸಂದೇಶಗಳೇ ಪರಿಹಾರಗಳೆಂದು ಹೂವಯ್ಯ ಚಿಂತಿಸುವುದನ್ನು ಕುವೆಂಪುರವರು 'ಕಾನೂರು' ಕಥನದಲ್ಲಿ ಸ್ಪಷ್ಟಪಡಿಸಿದ್ದಾರೆ.

"ಆ ಮಹಾಪುರುಷನ ಸ್ವಾರ್ಥ, ತ್ಯಾಗ, ವೈರಾಗ್ಯ, ಔದಾರ್ಯ, ಕನಿಕರ, ಅಹಿಂಸೆ, ತೀಕ್ಷ್ಣಮತಿ, ಪರದು:ಖಕಾತರತೆ - ಇವುಗಳಲ್ಲಿ ಒಂದೊಂದೂ ಅವನ ಜೀವನ ಚರಿತ್ರೆಯ ಘಟನಾ ಚಿತ್ರಗಳೊಡನೆ ಮೂರ್ತಿರ್ಭವಿಸಿ, ಮನೋಭಿತ್ತಿಯಲ್ಲಿ ಚಲಿಸಿದುವು. ಆ ಭವ್ಯ ಭೈರವ ವ್ಯಕ್ತಿತ್ವದ ಮುಂದೆ ತನ್ನ ಅಲ್ಪತೆ ಕನಿಕರಣೀಯವಾಗಿ, ನೀಚವಾಗಿ ತೋರಿ, ಹೂವಯ್ಯನ ಕಣ್ಣುಗಳಿಂದ ಹನಿಗಳು ಒಂದಾದ ಮೇಲೊಂದು ಉದುರಿದುವು. ಹೂವಯ್ಯ ಆ ಮೂರ್ತಿಯ ಪಾದಪದ್ಮಗಳ ಮೇಲೆ ತನ್ನ ಹಣೆಯಿಟ್ಟು "ಗುರುದೇವ, ನನ್ನನ್ನು ಕೈ ಹಿಡಿದೆತ್ತಿಕೊ, ಉದ್ಧಾರಮಾಡು. ನಿನ್ನ ಮಹಾಗುಣಗಳಲ್ಲಿ ಒಂದಿನಿತನ್ನಾದರೂ ದಯಪಾಲಿಸು. ನನ್ನ ಜೀವನವನ್ನು ಸಾರ್ಥಕಮಾಡು" ಎಂದು ಬೇಡಿದನು. ಬರಬರುತ್ತ ಹೂವಯ್ಯನ ಮನಸ್ಸು ಬುದ್ಧದೇವನ ಕಡೆಗೆ ಹೆಚ್ಚು ಹೆಚ್ಚಾಗಿ ಒಲಿದಿತ್ತು. ಆತನ ತಪಸ್ಸೂ, ಕಷ್ಟಗಳ ಸಮ್ಮುಖದಲ್ಲಿ ಆತನಿಗಿದ್ದ ವಜ್ರ ಮನಸ್ಸೂ, ಲೋಕಕ್ಕಾಗಿ ತನ್ನನ್ನು ತಾನೇ ಇಲ್ಲಗೈದುಕೊಳ್ಳುವ ಗಗನೋಪಮ ಮಹೌದಾರ್ಯವೂ ಹೂವಯ್ಯನ ಪ್ರಕೃತಸ್ಥಿತಿಗೆ ತಾರಕಮಂತ್ರವಾಗಿದ್ದವು. ಕೈಲಾದಮಟ್ಟಿಗೆ ಆ ಗುರುವನ್ನು ಆದರ್ಶವಾಗಿಟ್ಟುಕೊಂಡು, ಆತನನ್ನು ಅನುಸರಿಸಲು ಪ್ರಯತ್ನಿಸುತ್ತಿದ್ದನು. ಆದರೆ ಎಷ್ಟೋಸಾರಿ ಹಳೆಯ ರಾಗದ್ವೇಷಗಳಿಂದ ಆ ಪ್ರಯತ್ನ ವಿಫಲವಾಗುತ್ತಿತ್ತು. ಆದರೂ ಹೂವಯ್ಯ ಎದೆಗುಂದದೆ ಸಾಧನೆಯಲ್ಲಿ ತೊಡಗಿದ್ದನು." ೨೧

ಕಾನೂರು ಮನೆತನಗಳಲ್ಲಿ ನಡೆದಿದ್ದ ಮತ್ತು ನಡೆಯುತ್ತಿರುವ ಅವಘಡಗಳಿಗೆ, ಅನರ್ಥಗಳಿಗೆ ತಾನೇ ಕಾರಣನೆಂದು ಭಾವಿಸುತ್ತಾ ಹೂವಯ್ಯ ಆತ್ಮವಿಮರ್ಶೆ ಮಾಡಿಕೊಳ್ಳುತ್ತಾನೆ. ಎದುರು ಮೇಜಿನ ಮೇಲಿದ್ದ ಬುದ್ಧನ

ಧ್ಯಾನಸ್ತಿಮಿತ ಮೂರ್ತಿಯನ್ನು ತದೇಕಚಿತ್ತದಿಂದ ನೋಡುತ್ತಾ, ಬುದ್ಧನ ಸ್ವಾರ್ಥ, ತ್ಯಾಗ, ವೈರಾಗ್ಯ, ಔದಾರ್ಯ, ಕನಿಕರ, ಅಹಿಂಸೆ, ಪರದುಃಖ, ಕಾತರತೆ - ಇವುಗಳಲ್ಲಿ ಒಂದೊಂದೂ ಆತನ ಜೀವನ ಚರಿತ್ರೆಯ ಘಟನೆಗಳ ಚಿತ್ರಗಳಾಗಿ ಹೂವಯ್ಯನ ಮನೋಭಿತ್ತಿಯಲ್ಲಿ ಸಂಚರಿಸುತ್ತವೆ. ಆ ಭವ್ಯ ವ್ಯಕ್ತಿಯ ವ್ಯಕ್ತಿತ್ವದ ಮುಂದೆ ತನ್ನ ಅಲ್ಪತೆ ಕನಿಕರಣೀಯವಾಗಿ 'ನಿನ್ನ ಮಹಾಗುಣಗಳಲ್ಲಿ ಒಂದನ್ನಾದರೂ ದಯಪಾಲಿಸಿ ನನ್ನ ಜೀವನವನ್ನು ಸಾರ್ಥಕಗೊಳಿಸು' ಎಂದು ಬೇಡುವುದನ್ನು ಈ ಮೇಲಿನ ಉದ್ಧೃತ ಭಾಗದಲ್ಲಿ ಕಾಣುತ್ತೇವೆ.

ಹಾಗಾಗಿ ವ್ಯಷ್ಟಿ ಮತ್ತು ಸಮಷ್ಟಿ ನೆಲೆಯಲ್ಲಿ ಆಗುತ್ತಿರುವ ಸ್ಥಿತ್ಯಂತರಗಳಿಗೆ ಒಳಗಾದ ಹೂವಯ್ಯನ ಬದುಕು ದಿಕ್ಕು ತಪ್ಪಿದ ಸಂದರ್ಭದಲ್ಲಿ, ಬೌದ್ಧಧರ್ಮದ ಮೌಲ್ಯಗಳು ಒಂದು ಬಗೆಯ ದಾರಿಯನ್ನು, ಮುಂಬೆಳಕನ್ನು ನೀಡುವ ಸತ್ಯಗಳಾಗಿ ಕಂಡುಬರುತ್ತವೆ. ಸಿದ್ಧಾರ್ಥ ಬುದ್ಧನಾಗುವುದು, ಹೂವಯ್ಯ ಆದರ್ಶ ಹಾಗು ಭಾವುಕ ಪ್ರಪಂಚದಿಂದ ವಾಸ್ತವ ಪ್ರಪಂಚದ ಕಡೆಗೆ ಮತ್ತು ಆಧ್ಯಾತ್ಮದ ಕಡೆಗೆ ಒಲಿಯುವುದು ಒಂದು ಕಾಲದ ಯುಗ ಪ್ರಜ್ಞೆಯನ್ನೆ ಸೂಚಿಸುತ್ತದೆ.

ಹೂವಯ್ಯನು ವಿದ್ಯಾವಂತನಾಗಬೇಕು, ಪ್ರತಿಭಾಶಾಲಿಯಾಗಬೇಕು, ಕೀರ್ತಿಸಂಪಾದಿಸಬೇಕು, ಲೋಕದ ಮಹಾಪುರಷರಂತಾಗಬೇಕು, ಸ್ವಾರ್ಥತ್ಯಾಗದಿಂದ ಜೀವನವನ್ನು ಪರಮಾರ್ಥಕತೆಗೆ ಬಲಿದಾನ ಕೊಡಬೇಕು ಎಂಬ ಹೆಗ್ಗನಸುಗಳು ಹಿಂದೆ ಸರಿದು ಪ್ರಕೃತಿ ಪ್ರಪಂಚದ ಸೌಂದರ್ಯದಲ್ಲಿಯೂ, ಭಾವಸಮಾಧಿಯಲ್ಲಿಯೂ, ಅಧ್ಯಯನ ಆಲೋಚನೆಗಳಲ್ಲಿಯೂ, ಕೃಷಿಯಲ್ಲಿಯೂ, ಹಳ್ಳಿಗರ ಜೀವನ ಸುಧಾರಣೆಯ ಕೆಲಸದಲ್ಲಿಯೂ ನಿರತನಾಗಿ ಸೇವೆ ಸಲ್ಲಿಸಲು ಮುಂದಾದುದು ಹೂವಯ್ಯನ ಬದುಕಿನ ಪಲ್ಲಟವನ್ನೇ ಸೂಚಿಸುತ್ತದೆ. ಸಿದ್ಧಾರ್ಥನು ರಾಜ್ಯ ಪರಿತ್ಯಾಗಮಾಡಿ ಬುದ್ಧನಾಗಲು ಹೊರಟಂತೆ, ಹೂವಯ್ಯನು ಎಲ್ಲ ಕೌಟುಂಬಿಕ ಸಂಬಂಧಗಳಿಂದ ಬಿಡುಗಡೆ ಪಡೆದು ಬುದ್ಧನ ತತ್ವಗಳ ಕಡೆಗೆ ಒಲಿಯುವುದು ವಸಾಹತು ಸಂದರ್ಭದ ಧಾರ್ಮಿಕ ಸಂಘರ್ಷಾತ್ಮಕ ಬದುಕಿನ ವಾಸ್ತವ ಗೊಂದಲಗಳನ್ನು ಸಂಕೇತಿಸುತ್ತದೆ.

"ಬುದ್ಧನ ಕೃಪಾಮಹಿಮೆ" ಎಂಬ ಶೀರ್ಷಿಕೆಯ ಭಾಗ ಇಂಥ ಅನೇಕ ಸಂಘರ್ಷಗಳನ್ನು ಕುರಿತು ಚಿಂತಿಸುವ ಮಹತ್ವಪೂರ್ಣವಾದ ಅಧ್ಯಾಯ. ಶ್ರದ್ಧೆ ಮತ್ತು ನಿರಾಸೆ, ಸಂಬಂಧ ಮತ್ತು ಬಿಡುಗಡೆಯಂತಹ ಮೂಲಭೂತ ಪ್ರಶ್ನೆಗಳ ಜಿಜ್ಞಾಸೆ ಇಲ್ಲಿ ನಡೆದಿದೆ. ಮನುಷ್ಯನ ಸ್ವಾರ್ಥತೆ, ಅದೃಢತೆ, ಅನಿಶ್ಚಯಬುದ್ಧಿ, ತೂಗುಯ್ಯಾಲೆಯ ಮನಸ್ಸುಗಳು -ಈ ಮೇಲಿನ ಮೂಲಭೂತ ಪ್ರಶ್ನೆಗಳಿಗೆ ಕಾರಣವಾದ ಚಿಂತನೆಯನ್ನು, ವ್ಯಷ್ಟಿ ಮತ್ತು ಸಮಷ್ಟಿ ನೆಲೆಯಲ್ಲಿ ಎದುರಾಗುವ ದುರಂತಗಳಿಗೆ ಇವುಗಳೇ ಕಾರಣವೆಂಬ ಸತ್ಯವನ್ನು ಈ ಭಾಗದ ಕಥನ ಮನದಟ್ಟುಮಾಡಿಸುತ್ತದೆ.

ಇಡೀ 'ಕುವೆಂಪು ಕಥನ' ಈ ಬಗೆಯ ಹಿಂಸಾ ಪರಿಸರಕ್ಕೆ ಕಾರಣವಾದ ಆಚಾರ ವಿಚಾರಗಳಿಗೆ, ಮೌಢ್ಯಗಳಿಗೆ ಪೋಷಕ ಶಕ್ತಿಯಾದ ಪರೋಹಿತಶಾಹಿಯ ಬಗೆಗೆ ತೀವ್ರವಾದ ಪ್ರತಿರೋಧವನ್ನು ಒಡ್ಡುವುದನ್ನು ಕಾಣಬಹುದು. ಪುರೋಹಿತಶಾಹಿ ವ್ಯವಸ್ಥೆಯ ಅಮಾನವೀಯ ಮೌಲ್ಯಗಳನ್ನು, ಅದರ ಪ್ರಭಾವ ಮತ್ತು ದುಷ್ಪರಿಣಾಮಗಳನ್ನು, ಅಂತಹ ಪರಿಣಾಮಗಳಿಂದ ಉಂಟಾಗುವ ದುರಂತಗಳನ್ನು ವಿಶ್ಲೇಷಣೆಗೆ ಗುರಿಪಡಿಸುವುದರೊಂದಿಗೆ ಒಂದು ಮಾನವೀಯ 'ಕಥನ'ವನ್ನು ಶೋಧಿಸಿಕೊಳ್ಳಲು ಕುವೆಂಪು ಸಂವೇದನೆ ನಿರಂತರವಾಗಿ ಪ್ರಜ್ಞಾಪೂರ್ವಕವಾಗಿ ಚಿಂತಿಸುತ್ತದೆ. ಅಂತಹ ಚಿಂತನೆಯೊಂದಿಗೆ ನವಜೀವನದ ಶೋಧನೆಗೆ ಕುವೆಂಪು ಸಂವೇದನೆ ನಿರಂತರವಾಗಿ ತೊಡಗಿದೆ. ಭರತಖಂಡದ

ಪರಿವರ್ತನೆಯ ಕಾಲದಲ್ಲಿ ಎದುರಾದ ಸಂಘರ್ಷಾತ್ಮಕ ಬದುಕಿನ ಅಸಂಖ್ಯ ಸಂದೇಹ, ಪ್ರಶ್ನೆ, ಗೊಂದಲಗಳಿಗೆ 'ಕುವೆಂಪು ಕಥನ' ರಂಗವೇದಿಕೆಯಂತೆ ಸ್ಥಾನವನ್ನು ಕಲ್ಪಿಸಿದೆ. ಇದೇ ಸಂದರ್ಭದಲ್ಲಿ ಅಂಬೇಡ್ಕರ್ ಹಿಂದೂ ಧರ್ಮದ ಅಸ್ಪೃಶ್ಯತೆ, ಜಾತಿಪದ್ಧತಿಯನ್ನು ನಿರಾಕರಿಸಿ ಬೌದ್ಧಧರ್ಮದ ಕಡೆಗೆ ಹೋಗಿದ್ದರು. ಈ ವೈಚಾರಿಕ ಸಂಘರ್ಷ ಅಖಿಲ ಭಾರತದ ಮಟ್ಟದಲ್ಲಿ ಚರ್ಚಿತವಾಗುತ್ತಿತ್ತು. ಕುವೆಂಪು ಅವರು ಅದನ್ನು ತಮ್ಮ ಕಥನದಲ್ಲಿ ನಿರ್ವಹಿಸುತ್ತಿದ್ದರು. ಹಾಗಾಗಿ ಕುವೆಂಪು ಮತ್ತು ಅಂಬೇಡ್ಕರರ ಚಿಂತನೆಗಳಲ್ಲಿ ಸಾಮ್ಯತೆ ಎದ್ದುಕಾಣುವುದನ್ನು ಗುರುತಿಸಬಹುದು. ವ್ಯಷ್ಟಿ ಮತ್ತು ಸಮಷ್ಟಿ ಬದುಕಿನಲ್ಲಿ ನವಚೈತನ್ಯದ ಮೌಲ್ಯಗಳು ಮನೆ ಮಾಡುತ್ತಿರುವುದರ ಬಗೆಗೆ 'ಮದುಮಗಳು' ಮತ್ತು 'ಕಾನೂರಿನ' ಕಥನಗಳು ಅತ್ಯಂತ ಉತ್ಸಾಹದಿಂದ ತೆರೆದುಕೊಳ್ಳುತ್ತವೆ.

"ಉದಯಿಸುತಿಹನದೊ ಅಭಿನವ ದಿನಮಣಿ
ಸಹ್ಯಾದ್ರಿಯ ಶೃಂಗಾಳಿಯ ಮೇಲೆ.
ಹರಿದೋಡಿದೆ ನಿಶೆ, ನಗೆ ಬೀರಿದೆ ಉಷೆ,
ತೀಡುತಲಿದೆ ತಂಗಾಳಿಯ ಲೀಲೆ.
ಮಲೆನಾಡನು ಮನಮೋಹಿಸುತಿದೆ ಓ
ದಿನ ಮುಖದಿನ ಕಾಂಚನಕಾಂತಿ;
ಏಳೇಳಿರಿ! ಕರೆಯುತ್ತಿದೆ ಕೇಳಿರಿ,
ಓ ನವ ಜೀವನ ಸಂಕ್ರಾಂತಿ.
ಉದಯಿಸುತಿದೆ ನೂತನಯುಗ ದೇವತೆ!
ಮಿಥ್ಯೆಯ ಮೌಢ್ಯತೆಯನು ಸೀಳಿ;
ಜ್ಞಾನದ ವಿಜ್ಞಾನದ ಮತಿಖಡ್ಗದಿ
ಮೈದೋರುವಳೈ ನವಕಾಳಿ!
ಕೆಚ್ಚಿನ ನೆಚ್ಚಿನ ತನುಮನ ಪಟುತೆಯ
ಸಂಪಾದಿಸಿ ಓ ಮೇಲೇಳಿ.
ಕಣ್ದೆರೆಯಿರಿ ನವಕ್ರಾಂತಿಗೆ, ಶಾಂತಿಗೆ,
ಓ ಕ್ರಾಂತಿಯ ಪುತ್ರರೆ, ಬಾಳಿ!" ²³

ಈ ಮೇಲಿನ ಉದ್ಧರಣೆಯು 'ಕಾನೂರು ಹೆಗ್ಗಡಿತಿ' ಕಥನದ ಕೊನೆಯ ನವಯುಗವಾಣಿಯ ಕವಿತೆ. ಇದು ವಸಾಹತುಶಾಹಿ ಸಂಸ್ಕೃತಿ ಮತ್ತು ಪುರೋಹಿತಶಾಹಿಯ ಕ್ರೌರ್ಯಗಳಿಂದ ಬಿಡುಗಡೆ ಹೊಂದಿ, 'ಜ್ಞಾನದ ವಿಜ್ಞಾನದ ಮತಿಖಡ್ಗದಿಂದ' ನವಜೀವನ ಸಂಕ್ರಾಂತಿಗೆ ಭರತಮಾತೆಯ, ಕನ್ನಡಾಂಬೆಯ ಪುತ್ರರು ಸನ್ನದ್ಧಗೊಳ್ಳಬೇಕೆಂಬ ತೀವ್ರ ಆಕಾಂಕ್ಷೆಯಿಂದ ನಿವೇದಿಸಿಕೊಳ್ಳುತ್ತದೆ. ಇಂಥ ಆಕಾಂಕ್ಷೆ ಪುರೋಹಿತಶಾಹಿ ಮತ್ತು ವಸಾಹತುಶಾಹಿ ಸಂಸ್ಕೃತಿಯ ಸ್ವೀಕರಣೆ ಮತ್ತು ನಿರಾಕರಣೆಯ ನೆಲೆಗಳಿಂದ ಶೋಧಿತಗೊಂಡುದುದೇ ಆಗಿದೆ.

■

# ಅಡಿಟಿಪ್ಪಣಿ

೧. ರಂಗನಾಥನ್ ಮಾವಿನ ಕೆರೆ, (ಸಂ) : ಮಾಸ್ತಿ ಅವರ ಸಮಗ್ರ ಕತೆಗಳು (ಸಂಪುಟ - ೧) ಪುರೋಗಾಮಿ; ಬೆಂಗಳೂರು, ೧೯೮೭, ಪು : ೧೨೩

೨. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೧೯೬ - ೧೯೭

೩. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೧೯೭ - ೧೯೮

೪. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೧೯೮ - ೧೯೯

೫. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೨೭೮ - ೨೮೦

೬. ನಾಗರಾಜ್ ಡಿ.ಆರ್, ಅಮೃತ ಮತ್ತು ಗರುಡ (ವಿಮರ್ಶಾ ಲೇಖನಗಳ ಸಂಕಲನ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦, ಪು : ೨೧ - ೨೩

೭. ರಾಜಾರಾಮ ಹೆಗಡೆ, ಕುವೆಂಪು ಕಾದಂಬರಿಗಳಲ್ಲಿ ವಸಾಹತುಶಾಹಿ ಅನುಭವದ ಸ್ವರೂಪ, ಸಾಹಿತ್ಯ ವಿಮರ್ಶೆ - ೧೯೯೪ (ಸಂ), ಹೆಗಡೆ ಎಂ.ಜಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬, ಪು : ೩೮, ೫೩, ೫೭

೮. ಶಿವಾರೆಡ್ಡಿ ಕೆ.ಸಿ, ಸ್ಥಿತ್ಯಂತರ, ಶಕ್ತಿ ಮುದ್ರಣ ಮತ್ತು ಪ್ರಕಾಶನ, ಬೆಂಗಳೂರು, ೨೦೦೦, ಪು : ೫ - ೬

೯. ಚಂದ್ರಶೇಖರ ಎಸ್, ಕುವೆಂಪು ಕಾದಂಬರಿಗಳಲ್ಲಿ ಆಧುನಿಕತೆಯ ಪ್ರಕ್ರಿಯೆ, ಕೆಲವು ಟಿಪ್ಪಣಿಗಳು, ಸಾಹಿತ್ಯ ಮತ್ತು ಚರಿತ್ರೆ (ಲೇಖನಗಳು) ನಮ್ಮ ಪ್ರಕಾಶನ, ತಿಪಟೂರು, ೧೯೯೯, ಪು : ೫೬

೧೦. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೧೫೭ - ೧೫೮

೧೧. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೪೪೧

೧೨. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೬೪೭ - ೬೪೮

೧೩. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೬೪೭

೧೪. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೬೫೨ - ೬೫೩

೧೫. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೬೮೮ - ೬೯೦

೧೬. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೭೦೨ - ೭೦೩

೧೭. ಕೆ.ಸಿ.ಶಿವಾರೆಡ್ಡಿ, ಶತಮಾನದ ಹಾಡು - ಪಾಡು, ಪು : ೧೧೩ - ೧೧೪

೧೮. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೨೩೦

೧೯. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೨೭೧ - ೨೭೨

೨೦. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೫೬೮

೨೧. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೫೭೦

೨೨. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೫೯೧



ಅಧ್ಯಾಯ ೪

# ಸ್ಥಳೀಯ ಮತ್ತು ಕ್ರೈಸ್ತಾದಿ ಪುರೋಹಿತಶಾಹಿ ಸಂಸ್ಕೃತಿಗಳಿಗೆ ಕುವೆಂಪು ಕಥನ ತೋರಿದ ಪ್ರತಿರೋಧ

೪

# ಸ್ಥಳೀಯ ಮತ್ತು ಕ್ರೈಸ್ತಾದಿ ಪುರೋಹಿತಶಾಹಿ ಸಂಸ್ಕೃತಿಗಳಿಗೆ ಕುವೆಂಪು ಕಥನದ ಪ್ರತಿರೋಧ

ಪುರೋಹಿತಶಾಹಿಯ ಆಧಿಪತ್ಯವನ್ನು ಕುರಿತು ಪ್ರಪಂಚದ ಅನೇಕ ಸಾಹಿತಿಗಳು, ತತ್ವಜ್ಞಾನಿಗಳು, ಸುಧಾರಣಾವಾದಿಗಳು ಗಾಢವಾಗಿ ಚಿಂತಿಸಿದ್ದಾರೆ. ಇಂಥ ಚಿಂತನೆ ಪುರೋಹಿತಶಾಹಿ ವ್ಯವಸ್ಥೆಯ ಬಗೆಗೆ ಪ್ರತಿರೋಧವಾಗಿಯೂ ಪ್ರಕಟವಾಗಿದೆ. ಅಂಥ ವ್ಯವಸ್ಥೆಯ ವಿರುದ್ಧ ಬಂಡಾಯ ಹೂಡಿ ಬುಡಸಹಿತ ಕಿತ್ತು ಹಾಕಲು ಪ್ರಯತ್ನಿಸಿದರೂ, ಪುರೋಹಿತಶಾಹಿ ತನ್ನ ತಂತ್ರಗಳಿಂದ ಬೇರೆ ಬೇರೆ ರೂಪ ಆಕಾರಗಳಲ್ಲಿ ಮತ್ತೆ ಮತ್ತೆ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಲೇ ಸಾಗಿದೆ. ಹಾಗಾಗಿ ಪುರೋಹಿತಶಾಹಿಯ ಅರ್ಥವ್ಯಾಖ್ಯೆಯೂ ಬದಲಾಗುತ್ತಲೇ ಇದೆ. ಹಾಗಾದರೆ ಪುರೋಹಿತ ಎಂದರೆ ಯಾರು? ಪುರೋಹಿತವರ್ಗ ಅಥವಾ ಪುರೋಹಿತಶಾಹಿ ಎಂದರೆ ಏನು? ಅದರ ಧೋರಣೆಗಳು ಯಾವುವು? ಎಂಬುದನ್ನು ಕಂಡುಕೊಳ್ಳುವುದು ಅನಿವಾರ್ಯ.

ಪುರೋಹಿತ ಎಂದರೆ ವೇದೋಕ್ತ ಕರ್ಮಗಳನ್ನು ಮಾಡಿಸುವವನು. ಧಾರ್ಮಿಕ ಕಾರ್ಯ ನಿರ್ವಹಣೆಗೆ ನೇಮಿತನಾದವನು. ಒಂದು ಮನೆತನದ ಎಲ್ಲಾ ಧಾರ್ಮಿಕ ವ್ರತಾದಿಗಳ ತಾನೇ ಮುಂದಾಗಿ ನಿಂತು ಮಾಡಿಸುವವನು, ಎಲ್ಲಾ ಮಂಗಳ ಕಾರ್ಯಗಳಲ್ಲಿಯೂ ಮುಂದಿರುವವ, ಮಂಗಳ ಕಾರ್ಯಗಳನ್ನು ನಡೆಸುವವ, ಧಾರ್ಮಿಕ ದೀಕ್ಷೆ ಕೊಡುವವ - ಈ ಮೊದಲಾದ ಅರ್ಥಗಳನ್ನು ಪುರೋಹಿತ ಎಂಬ ಪದಕ್ಕೆ ಅರ್ಥೈಸಲಾಗಿದೆ. ಇಂಥ ಕಾರ್ಯಗಳಲ್ಲಿ ತೊಡಗುವವರನ್ನು ಪುರೋಹಿತವರ್ಗ - ಪುರೋಹಿತಶಾಹಿ ಎಂಬ ಹೆಸರುಗಳಿಂದ ಕರೆಯುತ್ತಾರೆ. ಪುರೋಹಿತ - ಪುರೋಹಿತಶಾಹಿ ಅಥವಾ ಪುರೋಹಿತವರ್ಗ ಎಂಬ ಪದಗಳಿಗೆ ಬೇರೆ ಬೇರೆ ದೇಶ ಧರ್ಮಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ ಎಲ್ಲಾ ಧಾರ್ಮಿಕ ವ್ರತಾದಿಗಳನ್ನು ಜನತೆಯ ಪರವಾಗಿ ಮಾಡುವವನು ಎಂಬ ಅರ್ಥವನ್ನು ಸಾಮಾನ್ಯವಾಗಿ ಗ್ರಹಿಸಬಹುದು. ಇದನ್ನೇ ಕುವೆಂಪುರವರು ಈ ಕೆಳಕಂಡಂತೆ ವಿವರಿಸುತ್ತಾರೆ :

"..... ಬೂರ್ಷ್ವಾ ಅಂತ ಹೇಳುತ್ತಾರೆ, ಪ್ರೊಲಿಟೇರಿಯಟ್ ಅಂತ ಹೇಳುತ್ತಾರೆ, ಆದರೆ ನಮ್ಮ ಬೂರ್ಷ್ವಾ ಪ್ರೊಲಿಟೇರಿಯಟ್ ವಿಭಜನೆಗೆಗ ಬದಲಾಗಿ ನಾವು ಜಾತಿಗಳನ್ನು ಹೇಳಬೇಕಾಗಿದೆ."

"ಈ ರೀತಿ ನಡೆದುಕೊಂಡು ಬಂದಿದೆ. ಆ ದೇಶಗಳಲ್ಲಿ "The priest" "The priestly class" ಎಂದುಬಿಟ್ಟರು. ಅಂದರೆ ಒಂದು ಪುರೋಹಿತವರ್ಗ, ಪುರೋಹಿತಶಾಹಿ ಎನ್ನುವ ಮಾತನ್ನು ಉಪಯೋಗಿಸಿದರು. ನಮ್ಮ ದೇಶದಲ್ಲಿ ಪುರೋಹಿತಶಾಹಿ - ಪುರೋಹಿತವರ್ಗ ಎಂದರೆ ಸಾಮಾನ್ಯವಾಗಿ ಬ್ರಾಹ್ಮಣವರ್ಗ ಅಂತ. ಆದರೆ ವಾಸ್ತವವಾಗಿ ಪುರೋಹಿತಶಾಹಿ - ಪುರೋಹಿತವರ್ಗ ಎಂದರೆ ಬರೀ ಬ್ರಾಹ್ಮಣ ವರ್ಗವಲ್ಲ, ಹಿಂದೂಗಳಲ್ಲಿ ಬ್ರಾಹ್ಮಣವರ್ಗವಾಗುತ್ತದೆ. ಕ್ರೈಸ್ತರಲ್ಲೂ ಪುರೋಹಿತಶಾಹಿ ಇದೆ. ಅಲ್ಲಿ ಅದನ್ನು ಯಾವ ಜಾತಿ ಎಂದು ಕರೆಯುವುದು? ಮುಸ್ಲಿಮರಲ್ಲೂ ಪುರೋಹಿತಶಾಹಿ ಇದೆ. ಬೌದ್ಧರಲ್ಲೂ ಪುರೋಹಿತಶಾಹಿ ಇದೆ. ಎಲ್ಲಾ ಮತಗಳಲ್ಲೂ ಪುರೋಹಿತಶಾಹಿ ಇದ್ದೇ ಇದೆ."

"....ನಾನು ಮಾತನಾಡುತ್ತಿರುವ ಪುರೋಹಿತಶಾಹಿ ಅಂದರೆ, ನನ್ನ ಮಾತುಗಳು ಹಿಂದೂ ಮತಕ್ಕೂ ಅನ್ವಹಿಸುತ್ತದೆ, ಮುಸ್ಲೀಂ ಮತಕ್ಕೂ ಅನ್ವಹಿಸುತ್ತದೆ, ಕ್ರಿಶ್ಚಿಯನ್ ಮತಕ್ಕೂ ಅನ್ವಹಿಸುತ್ತದೆ. ಏಕೆಂದರೆ ಎಲ್ಲೆಲ್ಲೂ ಈ ಪುರೋಹಿತಶಾಹಿ ಇದೇ ಕೆಲಸವನ್ನು ಮಾಡುತ್ತಾ ಬಂದಿದೆ. ಅದರ ವಿರುದ್ಧ ಹೋರಾಟವು ನಡೆದಿದೆ." [೧]

ಕುವೆಂಪುರವರ ಸಂವೇದನೆ ಅವರ ಒಟ್ಟು ಕೃತಿ ಸಮೂಹದಲ್ಲಿ ಪುರೋಹಿತಶಾಹಿಯ ಅಮಾನವೀಯ ನೆಲೆಗಳನ್ನು ಕುರಿತು ತೀವ್ರವಾಗಿ ಖಂಡಿಸಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಕಥೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ ಹೀಗೆ ಎಲ್ಲಾ ಪ್ರಕಾರಗಳಲ್ಲಿಯೂ ಪುರೋಹಿತಶಾಹಿಯ ಬೇರೆ ಬೇರೆ ಅಮಾನವೀಯ ನೆಲೆಗಳನ್ನು ಕುವೆಂಪುರವರು ವಿಶ್ಲೇಷಣೆಗೆ ಗುರಿಪಡಿಸಿದ್ದಾರೆ. ಹಾಗೆ ವಿಮರ್ಶೆ ವಿಶ್ಲೇಷಣೆಗೆ ಗುರಿಪಡಿಸಿದ ಪುರೋಹಿತಶಾಹಿ ವ್ಯವಸ್ಥೆಯ ನೆಲೆಗಳನ್ನು ಕುರಿತು ಪರ ಮತ್ತು ವಿರೋಧದ ವಿಮರ್ಶೆಗಳು ಕುವೆಂಪು ಸಾಹಿತ್ಯದ ಮೇಲೆ ಪ್ರಕಟಗೊಂಡಿವೆ. ಪುರೋಹಿತಶಾಹಿ ವ್ಯವಸ್ಥೆಯ ಬಗ್ಗೆ ಕುವೆಂಪು ತೋರಿದ ಪ್ರತಿರೋಧದ ಬಗೆಗೆ ಅಪಸ್ವರಗಳು ಪ್ರಕಟವಾಗಿವೆ. ಕುವೆಂಪುರವರನ್ನು ಬ್ರಾಹ್ಮಣ ದ್ವೇಷಿಯೆಂದು ಕರೆಯಲಾಗಿದೆ. ಆದ್ದರಿಂದಲೇ ಕುವೆಂಪುರವರ ಪುರೋಹಿತಶಾಹಿ ವಿರೋಧದ ನೆಲೆಗಳು ಯಾವ ಬಗೆಯದೆಂಬುದನ್ನು ಈ ಮೇಲಿನ ಉದ್ಧರಣೆಯಲ್ಲಿ ಸ್ಪಷ್ಟಪಡಿಸುವುದನ್ನು ಕಾಣುತ್ತೇವೆ. ಅಂದರೆ ಯಾವುದೇ ದೇಶದ, ಯಾವುದೇ ಧರ್ಮದ, ಯಾವುದೇ ಮತದ ಸೀಮಿತ ವರ್ಗಕ್ಕೆ ಮಾತ್ರ ಅವರ ಪ್ರತಿರೋಧ ನಿಲ್ಲದೆ, ಸಮಷ್ಟಿ ಅಮಾನವೀಯ ನೆಲೆಗಳ ಮತ್ತು ಧೋರಣೆಗಳ ಬಗೆಗೆ ತಾವು ತೋರಿದ ಪ್ರತಿಕ್ರಿಯೆಯೆಂದು ಅವರು ಸ್ಪಷ್ಟಪಡಿಸುತ್ತಾರೆ. ಯಾವುದೇ ಬಗೆಯ ಮೂಲಭೂತವಾದದ ಮುಖೇನ ಪುರೋಹಿತಶಾಹಿ ನಡೆಸುವ ಆಧಿಪತ್ಯವನ್ನು ಕುವೆಂಪು ಕಥನಗಳು ಸಂವಾದ ನಡೆಸುತ್ತವೆ ಎಂಬುದನ್ನು ನಾವು ಇಂದು ಅರ್ಥೈಸಿಕೊಳ್ಳಬೇಕಾದ ಅಗತ್ಯವಿದೆ.

'ಶೂದ್ರತಪಸ್ವಿ', 'ಜಲಗಾರ', 'ಪಾಂಚಜನ್ಯ', 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ', 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ', 'ವಿಚಾರ ಕ್ರಾಂತಿಗೆ ಆಹ್ವಾನ' ಹಾಗೂ ಈ ಶತಮಾನದ ಶ್ರೇಷ್ಠ ಕಾದಂಬರಿಗಳಾದ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು', ಅಷ್ಟೇ ಏಕೆ ಕನ್ನಡದ ಪ್ರಪ್ರಥಮ ಜ್ಞಾನಪೀಠ ಪ್ರಶಸ್ತಿ ಪಡೆದ ಮಹಾಕಾವ್ಯವಾದ 'ಶ್ರೀ ರಾಮಾಯಣ ದರ್ಶನಂ' ಕೃತಿಗಳಲ್ಲಿಯೂ ಪುರೋಹಿತಶಾಹಿಯ ಅಸಂಖ್ಯ ಅಮಾನವೀಯ ನೆಲೆಗಳನ್ನು 'ಕುವೆಂಪು ಸಂವೇದನೆ' ತೀವ್ರವಾಗಿ ಖಂಡಿಸಿರುವುದನ್ನು ಗುರುತಿಸುತ್ತೇವೆ. ಸನಾತನ ಪಾರಂಪರಿಕ ಅಮಾನವೀಯ ವಿಚಾರಗಳನ್ನು ಮುಂದು ಮಾಡಿ ಶ್ರೀಸಾಮಾನ್ಯರನ್ನು ಶೋಷಣೆಗೆ ಗುರಿಪಡಿಸಿದ ಪುರೋಹಿತಶಾಹಿ ವ್ಯವಸ್ಥೆಯನ್ನು ಕುವೆಂಪು ಸಂವೇದನೆ ನಿರಂತರವಾಗಿ ಚಿಂತಿಸುತ್ತದೆ. ಪುರೋಹಿತಶಾಹಿ ವ್ಯವಸ್ಥೆಯ ಪ್ರತಿನಿಧಿಗಳಾದ ಪೂಜಾರಿಗಳಿಂದಾಗುವ ಅನರ್ಥಗಳನ್ನು "ದೇವರು - ಪೂಜಾರಿ" ಕವಿತೆ ಪುರೋಹಿತಶಾಹಿ ವ್ಯವಸ್ಥೆಗೆ ನಿರ್ದಿಷ್ಟ ವ್ಯಾಖ್ಯೆಯೊಂದನ್ನು ಪ್ರಕಟಿಸುವುದನ್ನು ಇಲ್ಲಿ ನೆನೆದರೆ ತಪ್ಪಾಗಲಾರದು. ಮೂಲಶಕ್ತಿಯನ್ನು ಇಲ್ಲವಾಗಿಸುವ ಮಧ್ಯವರ್ತಿಗಳೆಲ್ಲರನ್ನು ಕಾಲ ದೇಶ ಮತಧರ್ಮಗಳಿಗೆ ಅನ್ವಯವಾಗುವಂತೆ ಈ ಕವಿತೆಯಲ್ಲಿ ವಿಶ್ಲೇಷಿಸುತ್ತಾರೆ. ಲೋಕದ ಅನನ್ಯತೆಗಳನ್ನು, ಸತ್ಯಗಳನ್ನು ಮರೆಮಾಚಿಸುವ, ವಿರೂಪಗೊಳಿಸುವ, ತಿರುಚುವ ಮಧ್ಯವರ್ತಿಗಳನ್ನು (ಬ್ರೋಕರ್ಸ್ ) ಪೂಜಾರಿಗಳೆಂದು (ಪುರೋಹಿತ) ಕುವೆಂಪು ವ್ಯಾಖ್ಯಾನಿಸುತ್ತಾರೆ. ಮಹಾವಿಜ್ಞಾನಿಗಳು, ಸಂತರು, ಚಿಂತಕರು ಕಾಲಕಾಲಕ್ಕೆ ಹೊತ್ತಿಸಿದ ಜ್ಞಾನಜ್ಯೋತಿಗಳನ್ನು ನಂದಿಸಿ ಲೋಕಕ್ಕೆ ಅಂಧಕಾರವನ್ನು, ಜ್ಞಾನಕ್ಕೆ ಬದಲಾಗಿ ಮೌಢ್ಯವನ್ನು ಬೋಧಿಸುವ ಪುರೋಹಿತಶಾಹಿ ವ್ಯವಸ್ಥೆಯ ವಿಡಂಬನೆಯನ್ನು ಈ ಕವಿತೆ ಮುಖ್ಯವಾಗಿ ಚಿಂತಿಸುವುದರೊಂದಿಗೆ ಪುರೋಹಿತಶಾಹಿಯನ್ನು ಕುರಿತ ವ್ಯಾಖ್ಯಾಯೊಂದನ್ನು ಪ್ರಕಟಸುತ್ತದೆ. ದೇವರು ಮತ್ತು ಭಕ್ತನ ನಡುವಿನ ಮಧ್ಯವರ್ತಿ ಪುರೋಹಿತನ ವಂಚನೆಯ ತಂತ್ರಗಳನ್ನು "ಅಷ್ಟಗ್ರಹ ಯೋಗಸಿದ್ಧಿ" ಮತ್ತು "ಜಲಗಾರ" ನಾಟಕಗಳ ಈ ಕೆಳಗಿನ ಉದ್ಧರಣೆಗಳು ಮತ್ತಷ್ಟು ಸ್ಪಷ್ಟಪಡಿಸುತ್ತವೆ:

"ಮಾಡಿರಯ್ ಯೋಗಗಳ! ತಿನ್ನಿರಯ್ ಭಕ್ಷ್ಯಗಳ!
ಭೋಜನವ ಯೋಜನೆಯ ಮುಖ್ಯ ಅಂಗ!
ಮಂಕು ಮಂದಿಗೆ ಮೌಢ್ಯ ಮದ್ಯವನು ಕುಡಿಸಿರಯ್ ;
ಸುಳ್ಳು ಭಯವನು ಬಿತ್ತಿ ಚೆನ್ನಾಗಿ ದುಡಿಸಿರಯ್ ,
ಕತ್ತೆಗಳಿರುವುದೇಕೆ? ನಮ್ಮ ಮಡಿ ಹೊರುವುದಕೆ:
ಕತ್ತೆಗಳಿಗುತ್ತಮತೆ ಇತ್ತರಾಯ್ತೆಮ್ಮ ಗತಿ! " - (ಅಷ್ಟಗ್ರಹ ಯೋಗಸಿದ್ಧಿ)

"ಬಡವರ ಹಸಿವಿಗೆ ಮೌಢ್ಯವ ಕೊಟ್ಟು
ಸುಖ ಸಂಪತ್ತನೆ ಕೊಂಡು.....
ಮೃಷ್ಟಾನ್ನವನೇ ಉಂಡು....."
ಪಡೆಯಿರಿ ಅಷ್ಟಗ್ರಹಯೋಗದ ಸಿದ್ಧಿ,
ನಿಮಗಿದ್ದರೆ ಬುದ್ಧಿ!......." [೨]

"…..ಗುಡಿಗಳಿವು ಪಾಪಿಗಳ ಭೋಗಿಗಳ
ಗೂಡುಗಳು! ಪೂಜೆಯೆಂಬುದೊ ಧರ್ಮಬುದ್ಧಿಯನು
ಜೋಗುಳದಿ ಮಲಗಿಸುವ ಕಾಳಮಂತ್ರವು, ದೇವ!
ಕಾಪಾಡು! ಕಾಪಾಡು! (ಒರಗುತ್ತಾನೆ)
(ಇಬ್ಬರು ತರುಣರು ಮಾತಾಡಿಕೊಳ್ಳುತ್ತಾ ಬರುತ್ತಾರೆ)

ಮೊದಲನೆಯ ತರುಣ

ದೇಗುಲದೊಳವಿತುಕೊಂಡಿಹನಂತೆ ಪರಶಿವನು!
ಜಗವೆಲ್ಲ ದೇವನಿಹ ಗುಡಿಯಲ್ಲವೇ, ಗೆಳೆಯ?
ಮತದ ಮದ್ಯವ ಕುಡಿದು ತಲೆಕೆಟ್ಟಿಹುದು ಮಂದಿ!

ಎರಡನೆಯ ತರುಣ

ಮೊದಲ ಠಕ್ಕನು ಮೊದಲ ಬೆಪ್ಪನಂ ಸಂಧಿಸಲು
ಸಂಭವಿಸಿತೆಂಬರೀ ಮತ ಎಂಬ ಮತಿವಿಕಾರಂ.
ದೊರೆ ಪುರೋಹಿತರ್ ಅವಳಿ ಮೊಲೆಯೂಡಿ ಸಲಹಿದರದಂ.
ಮತದ ಮದಿರೆಯನೀಂಟಿ ಮಂಕುಬಡಿದಿದೆ ಜನಕೆ.
ಕೊನೆ ದೊರೆಯ ಕೊರಳಿಗಾ ಕೊನೆ ಪುರೋಹಿತನ ಕರುಳ್
ಉರುಳಾಗುವಾವರೆಗೆ ಸುಖವಿಲ್ಲ ಈ ಧರೆಗೆ!

ಮೊದಲನೆಯ ತರುಣ

ಪೂರ್ವಿಕರ ಮೂಢತನಕಾದಿಯೆಂಬುವುದೆಲ್ಲಿ?
ಅಂತ್ಯವೆಂಬುವುದೆಲ್ಲಿ? ಹೇಳುವುದು ಒಂದು,
ಮಾಡುವುದು ಮತ್ತೊಂದು! ಜಗದೊಡೆಯನೆಲ್ಲಿಯುಂ
ಇರುವನೆಂಬರು ಒಮ್ಮೆ! ಗುಡಿಯಲರಸುವರೊಮ್ಮೆ!
ನಿರಾಕಾರನವನೆಂದು ಸಾರುವರು ಒಮ್ಮೆ;
ಮೂರ್ತಿಗಳ ಮಾಡಿ ಆರಾಧಿಸುವರಿನ್ನೊಮ್ಮೆ!
ಒಂದು ಸಲ ಸರ್ವರೊಳು ಅವನಿರುವನೆನ್ನುವರು;
'ಹೊಲೆಯ ನೀ ದೂರವಿರು' ಎಂದೆಂಬರಿನ್ನೊಮ್ಮೆ!
ನುಡಿಗೂ ನೆಗಳ್ತೆಗೂ ಸಂಬಂಧವೇ ಇಲ್ಲ!
ಇದೆ ನಮ್ಮ ಭಾರತಾಂಬೆಯ ದುರ್ಗತಿಗೆ ಕಾರಣ.
ಬಡಜನರ ಕಣ್ಣೆತ್ತಿ ನೋಡದಿಹ, ಮರುಗದಿಹ

ಹಾಲು ಪೂಜೆಯದೇಕೆ? ಹಸಿದ ಜನಗಳಿಗೆ
ಕೊಡರೊಂದು ಕಾಸ; ತಣ್ಣಗಿಹ ಕಲ್ಲುಗಳ
ಮೇಲೆ ಎಣ್ಣೆಯನು ಬೆಣ್ಣೆಯನು ಸುರಿಯುವರು
ಕರ್ಪೂರದಾರತಿಯ ಬೆಳಗುವರು ವಿಗ್ರಹದ
ಮುಂದೆ ತಲೆಬಾಗಿ. ಸತ್ತ ದೇವರ ಪೂಜೆ
ಮಾಡುವರು. ಜೀವದ ದರಿದ್ರ ನಾರಾಯಣರ
ಸೇವೆಯಲ್ಲವೆ ಪರಮ ಪೂಜೆ?"[1]

- (ಜಲಗಾರ)

ಈ ಮೇಲಿನ ಎರಡು ಉದ್ಧರಣೆಗಳಲ್ಲಿ ಪುರೋಹಿತಶಾಹಿ ವ್ಯವಸ್ಥೆಯ ಅನೇಕ ಮುಖಗಳು ಸ್ಪಷ್ಟವಾಗಿಯೇ ಪ್ರಕಟವಾಗುತ್ತವೆ. ಶ್ರೀ ಸಾಮಾನ್ಯರ ಮಂಕುಬುದ್ಧಿಗೆ ಮತ ಮೌಢ್ಯಗಳ ಮದ್ಯವನ್ನು ಕುಡಿಸುವುದರೊಂದಿಗೆ ದೇವರು ಧರ್ಮಗಳ ಬಗೆಗೆ ಸುಳ್ಳು ಭಯಗಳನ್ನು ಬಿತ್ತುವ ಪುರೋಹಿತಶಾಹಿ ತಂತ್ರಗಳನ್ನು ಬಯಲಿಗೆಳೆಯುತ್ತವೆ. ಪುರೋಹಿತಶಾಹಿ ವ್ಯವಸ್ಥೆಯ ಪೋಷಕ ಸ್ತರಗಳಾದ ಗುಡಿಗಳ ಬಗೆಗೆ ಕುವೆಂಪು ಅವರು ಅತ್ಯಂತ ಪ್ರತಿರೋಧಾತ್ಮಕ ಹೊಸ ವ್ಯಾಖ್ಯೆಗಳನ್ನು ಪ್ರಕಟಿಸುತ್ತಾರೆ. ಜಲಗಾರ ನಾಟಕದ ತಿರುಕ ಮತ್ತು ತರುಣರ ಈ ಮೇಲಿನ ಸಂಭಾಷಣೆಯಲ್ಲಿ ಪುರೋಹಿತಶಾಹಿ ವ್ಯವಸ್ಥೆಯ ಬಗೆಗೆ ತೀವ್ರವಾಗಿ ವಿಡಂಬಿಸುವುದನ್ನು ಕಾಣುತ್ತೇವೆ. ಹಾಗೆಯೇ ದೇವರು, ಧರ್ಮ, ಗುಡಿ, ಪೂಜೆಗಳಿಗೆ ಪಾರಂಪರಿಕ ಅರ್ಥಗಳಿಗಿಂತ ಭಿನ್ನ ಅರ್ಥಗಳನ್ನು ಕುವೆಂಪು ಸಂವೇದನೆ ಇಂಥ ಕೃತಿಗಳಲ್ಲಿ ಶೋಧಿಸಿಕೊಳ್ಳಲು ಪ್ರಯತ್ನಿಸುತ್ತದೆ. ಪುರೋಹಿತಶಾಹಿ ವ್ಯವಸ್ಥೆಯ ಇನ್ನೂ ಅಸಂಖ್ಯ ಅಮಾನವೀಯ ಧೋರಣೆಗಳನ್ನು ಅವರ ಎರಡೂ ಕಾದಂಬರಿಗಳಲ್ಲಿ ವ್ಯಷ್ಟಿ ಮತ್ತು ಸಮಷ್ಟಿ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಈ ಪುರೋಹಿತ ವ್ಯವಸ್ಥೆಯು ನಡೆಸಿರುವ ಆಧಿಪತ್ಯ ಅಥವಾ ಯಾಜಮಾನ್ಯದ ನೆಲೆಗಳನ್ನು ಇನ್ನೂ ಪ್ರಖರವಾಗಿ ಕುವೆಂಪು ಸಂವೇದನೆ ಶೋಧಿಸಿಕೊಳ್ಳಲು ತೊಡಗುವುದನ್ನು ಇಲ್ಲಿ ದಾಖಲಿಸಬಹುದು:

"…..ರಾಜಕೀಯ ಪ್ರಪಂಚದಲ್ಲಿದ್ದಂತೆಯೇ ಧರ್ಮಪ್ರಪಂಚದಲ್ಲಿಯೂ ಸಂಕುಚಿತ ಭಾವಗಳು ಕುಂದು ಕೊರತೆಗಳು ಒಡಕುಬಿರುಕುಗಳು ಯಥೇಚ್ಛವಾಗಿದ್ದವು. ಅರ್ಥಹೀನವಾದ ನೂರಾರು ದೇಶಾಚಾರ ಲೋಕಾಚಾರ ಮತಾಚಾರಗಳೂ ಐಕ್ಯಭಂಗಕಾರಿಗಳಾದ ಸಾವಿರಾರು ಸಾಂಕ್ರಾಮಿಕ ಜಾತಿಪದ್ಧತಿಗಳು ಕ್ಷುದ್ರವೂ ಶುಷ್ಕವೂ ಈರ್ಷ್ಯಾಮೂಲವೂ ಆದ ಅನೇಕ ವಾದವಿವಾದಗಳೂ ಭರತವರ್ಷವನ್ನು ಛಿದ್ರ ಛಿದ್ರ ಮಾಡಿದ್ದವು. ಭಾರತೀಯರು ಉಪನಿಷತ್ತುಗಳಿಂದಲೂ ಮಹರ್ಷಿಗಳಿಂದಲೂ ಆಚಾರ್ಯರಿಂದಲೂ ಪ್ರಣೀತವಾದ ಮಹಾಧರ್ಮದ ಅಂತರಾತ್ಮವನ್ನು ಸಂಪೂರ್ಣವಾಗಿ ಮರೆತು ಅದರ ಶವದ ಹಂಚಿಕೆಗಾಗಿ ಕಚ್ಚಾಡುತ್ತಿದ್ದರು. ಸರ್ವಧರ್ಮ ಗರ್ಭಿತವಾದ ವೇದಾಂತ ದರ್ಶನವು ಜನ ಸಮುದಾಯವನ್ನು ತ್ಯಜಿಸಿ ವಾರ ಪ್ರಿಯರಾದ ಹಲಕೆಲವು ಪಂಡಿತರ

ಸ್ವತ್ತಾಗಿತ್ತು. ಆ ಪಂಡಿತರು ಅಧಿಕಾರವಾದವನ್ನು ಆಶ್ರಯಿಸಿ ಅಮೃತದಾಯಕವಾದ ವೇದಾಂತದರ್ಶನ ದಿವ್ಯಜ್ಯೋತಿ ಪಾಮರ ಜನರ ಕಣ್ಣಿಗೆ ಬೀಳದಿರುವಂತೆ ಜಾಗರೂಕರಾಗಿದ್ದರು. ಅದಕ್ಕೆ ಫಲರೂಪವಾಗಿ ಜನರು ಉಪನಿಷತ್ತುಗಳ "ಏಕಮೇವಾ ದ್ವಿತೀಯಂ ಬ್ರಹ್ಮ"ದ ಆರಾಧನೆಯನ್ನು ತ್ಯಜಿಸಿ, ಪುರಾಣೋಕ್ತ ದೇವತೆಗಳನ್ನು ಭಜಿಸಿ, "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬುದನ್ನು ಮರೆತು, ಶಿವ ವಿಷ್ಣುಗಳಿಗೆ ಪಕ್ಷ - ಪ್ರತಿಪಕ್ಷಗಳನ್ನು ಹೂಡಿ, ಕಕ್ಷಿ ಪ್ರತಿಕಕ್ಷಿಗಳಾಗಿ ನಿಂತು ಹೊಡೆದಾಡುವುದ ರಲ್ಲಿಯೇ ಮಗ್ನರಾಗಿದ್ದರು. ಜನರಲ್ಲಿ ರಾಜಕೀಯ ಬುದ್ಧಿಯಂತೆಯೇ ಆಧ್ಯಾತ್ಮಿಕ ಬುದ್ಧಿಯೂ ಲೋಪವಾಗಿತ್ತು. ಆರ್ಯಧರ್ಮದ ಉದಾರ ಚಿರಜಾಜ್ವಲ್ಯ ಮಾನವಾಗಿದ್ದ ಪ್ರದೀಪವು ಜನರ ಭಾಗಕ್ಕೆ ನಂದಿಹೋಗಿತ್ತು." ೪

ಕುವೆಂಪುರವರ ಶ್ರೀ ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆಯ ಪೀಠಿಕೆಯ ಈ ಮೇಲಿನ ಉದ್ಧರಣೆ ಹತ್ತೊಂಬತ್ತನೆಯ ಶತಮಾನದ ಭಾರತದ ವಾಸ್ತವ ಚಿತ್ರವನ್ನು ನಮ್ಮ ಮುಂದಿಡುತ್ತದೆ. ಅಂತೆಯೇ ಪರಕೀಯ ಶಕ್ತಿಗಳು ಭಾರತದ ಮೇಲೆ ಆಕ್ರಮಣ ನಡೆಸಲು ಕಾವಲಿಲ್ಲದ ಕೋಟೆಗೆ ಸುಲಭವಾಗಿ ನುಗ್ಗಲು ಪ್ರಸಕ್ತ ವಾತಾವರಣ ಏರ್ಪಟ್ಟಿರುವುದನ್ನು ಈ ಉದ್ಧರಣೆ ತಿಳಿಯಪಡಿಸುತ್ತದೆ. ರಾಜಕೀಯ ಮತ್ತು ಧಾರ್ಮಿಕ ಪರಿಸರ ಅಧೋಗತಿಗಿಳಿದು, ಹಿಂದೂ ಧರ್ಮದ ಮತ್ತು ವೇದದರ್ಶನದ ಮಹೋನ್ನತಿಗಳು ಪುರೋಹಿತಶಾಹಿಯ ಕುತಂತ್ರಗಳಿಂದ ಹಿಂದೆ ಸರಿದು, ಅರ್ಥಹೀನ ಆಚಾರ ವಿಚಾರಗಳ ಆಚರಣೆಗಳಲ್ಲಿ ಮುಳುಗಿಹೋಗಿ, ಮನುಷ್ಯ ಮನುಷ್ಯರ ನಡುವೆ ದ್ವೇಷ ಅಸೂಯೆಗಳಿಗೆ ಕಾರಣವಾದ ಧಾರ್ಮಿಕ ಕ್ರೌರ್ಯಗಳನ್ನು ಈ ಉದ್ಧರಣೆ ಸೂಕ್ಷ್ಮವಾಗಿ ಪರಿಚಯಿಸುತ್ತದೆ. ಈ ಎಲ್ಲಾ ಕಾರಣಗಳಿಂದ ಪರಕೀಯ ಶಕ್ತಿಗಳು ಸುಲಭವಾಗಿ ಭಾರತೀಯ ಅನನ್ಯತೆಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಲು ಸಾಧ್ಯವಾಯಿತೆಂಬ ಸಂಗತಿಯು ಇಲ್ಲಿ ವಿಧಿತವಾಗುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿನ ಕ್ರೈಸ್ತ ಪುರೋಹಿತಶಾಹಿ ಮತಾಂತರ ಪ್ರಕ್ರಿಯೆಗಳಿಗೆ ಈ ಎಲ್ಲಾ ಕಾರಣಗಳು ಒಂದರ್ಥದಲ್ಲಿ ವರವಾಗಿ ಪರಿಣಮಿಸಿದ್ದನ್ನು ಕುವೆಂಪು ಸಂವೇದನೆ ಆ ಕಥನಗಳಲ್ಲಿ ಸಂವಾದ ನಡೆಸುತ್ತದೆ. ಹಿಂದೂ ಧರ್ಮದ ಅನಾಚಾರ, ಅವಿವೇಕ, ಸಂಕುಚಿತಮನೋಭಾವ, ಜಾತಿಮತ ಪಕ್ಷಪಾತ, ಬ್ರಾಹ್ಮಣರ ತಿರಸ್ಕಾರ, ಶೂದ್ರರ ದೈನ್ಯ, ಅಧೋಗತಿ, ಕಲ್ಲು ಮಣ್ಣು ಮರ ದೆವ್ವಗಳ ಪೂಜೆ ಇತ್ಯಾದಿಗಳ ಯಾಂತ್ರಿಕ ಕ್ರಿಯಾಚಾರಣೆಗಳು ಶ್ರೀ ಸಾಮಾನ್ಯನನ್ನು ಶೋಷಿಸುವ ತಂತ್ರಗಳಾಗಿ ಪರಿಣಮಿಸಿದ್ದನ್ನು ಕುವೆಂಪುರವರ ಎರಡು ಕಥನಗಳು ಧ್ಯಾನಿಸುತ್ತವೆ.

'ಮದುಮಗಳು' ಕಾದಂಬರಿಯ ಮಂಜಭಟ್ಟ ಮತ್ತು 'ಕಾನೂರು ಹೆಗ್ಗಡಿತಿ' ವೆಂಕಪ್ಪ ಜೋಯಿಸರ ಬದುಕಿನ ಧೋರಣೆಗಳಲ್ಲಿ ಪುರೋಹಿತಶಾಹಿ ವ್ಯವಸ್ಥೆಯ ಕರಾಳ ಮುಖಗಳನ್ನು ಕುವೆಂಪು ಸಂವೇದನೆ ತೀವ್ರವಾಗಿ ಖಂಡಿಸುತ್ತದೆ. ೧೮೯೩ ನೆಯ ಇಸವಿ ಸೆಪ್ಟಂಬರು ೧೧ ರಂದು ಅಮೇರಿಕಾದ ಚಿಕಾಗೋ ನಗರದ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಹಿಂದೂ ಧರ್ಮದ ವೇದಾಂತ ದರ್ಶನದ ಮಹೋನ್ನತಿಯನ್ನು ವಿಶ್ವವೈಶಾಲ್ಯವನ್ನು ತಮ್ಮ ಸಿಂಹಕಂಠದಿಂದ ಘೋಷಿಸುತ್ತಿದ್ದಾಗಲೇ ಅದೆಲ್ಲವನ್ನೂ ಮೂದಲಿಸುವಂತೆ ಯಕಃಚಿತ್ ಪಾದ್ರಿಯೊಬ್ಬನು

ಆದರಲ್ಲಿಯೂ ಮತಾಂತರಗೊಂಡ ನೇಟಿವ್ ಪಾದ್ರಿಯೊಬ್ಬನು ಮಲೆನಾಡಿನ ಬೇಸಾಯಗಾರರನ್ನು ಮತಾಂತರಗೊಳಿಸುವ ಪ್ರಕ್ರಿಯೆಗಳಲ್ಲಿ ತೊಡಗಿರುವ ಚಿತ್ರವನ್ನು ಮುಖಾಮುಖಿಯಾಗಿಸುವುದರೊಂದಿಗೆ ಪುರೋಹಿತಶಾಹಿ ವ್ಯವಸ್ಥೆಯು ಅಂತಹ ವ್ಯವಸ್ಥೆಯಿಂದ ನಿರ್ಮಾಣವಾದ ಮತೀಯ ಸಂಸ್ಥೆಗಳ ನಿರರ್ಥಕತೆಯನ್ನು ಮದುಮಗಳ ಕಥನದಲ್ಲಿ ಪ್ರಶ್ನಿಸುವುದನ್ನು ಕಾಣುತ್ತೇವೆ. ಸ್ಥಳೀಯ ಧಾರ್ಮಿಕ ನಂಬಿಕೆಗಳಿಗೆ ವಸಾಹತುಶಾಹಿಯು ಒಡ್ಡಿದ ಮತಾಂತರ ಪ್ರಕ್ರಿಯೆ ಇದು. ಸ್ಥಳೀಯ ಧಾರ್ಮಿಕ ನಂಬಿಕೆಗಳನ್ನು, ಅವುಗಳ ಹಿಂದಿರುವ ಅಮಾನವೀಯ ನೆಲೆಗಳನ್ನು, ವಸಾಹತು ಸಂಸ್ಕೃತಿಗೆ ಹೊತ್ತು ತಂದ ಕ್ರೈಸ್ತ ಪುರೋಹಿತಶಾಹಿ ವ್ಯವಸ್ಥೆಯು ತನ್ನ ಧರ್ಮ ವಿಸ್ತರಣೆಗಾಗಿ ಅಪಮೌಲ್ಯಗೊಳಿಸುತ್ತಿರುವುದನ್ನು ಪ್ರಶ್ನಿಸಲಾರದೆ ಸ್ಥಳೀಯ ಮಠಮಾನ್ಯಗಳ ಧೋರಣೆಗಳನ್ನು 'ಮದುಮಗಳು' ಕಾದಂಬರಿ ಪ್ರಶ್ನಿಸುತ್ತದೆ.

ಮಲೆನಾಡಿನ ಕೊಂಪೆಗೆ ಸಮೀಪದಲ್ಲೇ ಇದ್ದ ಶೃಂಗೇರಿ, ಧರ್ಮಸ್ಥಳ, ಉಡುಪಿ ಮೊದಲಾದ ಪವಿತ್ರ ಕ್ಷೇತ್ರ ಪೀಠಗಳು ಧರ್ಮಗುರುಗಳು ಸ್ಥಳೀಯ ಧಾರ್ಮಿಕ ಪರಿಸರಕ್ಕೆ ಒದಗಿದ ಧಕ್ಕೆಗಳನ್ನು ಕಂಡು ಕಾಣದಂತಿದ್ದುದನ್ನು, ಬೌದ್ಧಧರ್ಮವನ್ನು ಭಾರತದಿಂದ ಅಟ್ಟಿ ವೈದಿಕ ಧರ್ಮ ಸ್ಥಾಪನೆಮಾಡಿದ ಶಂಕರಾಚಾರ್ಯರ ಅನುಯಾಯಿಗಳ ನಿರ್ವೀರ್ಯತೆಯನ್ನು ಕುವೆಂಪು ಸಂವೇದನೆ ಪ್ರಶ್ನಿಸುತ್ತದೆ. ದಾನ ದಕ್ಷಿಣೆ ಪಾದಪೂಜೆ, ಸಾಷ್ಟಾಂಗ ನಮಸ್ಕಾರಗಳ ಸ್ವೀಕಾರ, ಅಡ್ಡಪಲ್ಲಕ್ಕಿ ಸೇವೆಗಳಿಂದ ಶೂದ್ರವರ್ಗದ ಸಾಮಾನ್ಯ ಜನರನ್ನು ವಂಚಿಸುತ್ತಿದ್ದ ಪುರೋಹಿತ ಧೋರಣೆಯನ್ನು ಇಲ್ಲಿ ಪ್ರಶ್ನಿಸಲಾಗಿದೆ. ಶೂದ್ರರನ್ನು ಪುರೋಹಿತ ವ್ಯವಸ್ಥೆ ಶೈಕ್ಷಣಿಕ ಚಟುವಟಿಕೆಗಳಿಂದ ದೂರವಿರಿಸಿದ ಕುತಂತ್ರಗಳನ್ನು ಇಲ್ಲಿ ಪ್ರಶ್ನಿಸುವುದನ್ನು ಕಾಣುತ್ತೇವೆ.

ರಂಗಮ್ಮ ಮತ್ತು ದೊಡ್ಡಣ್ಣ ಹೆಗ್ಗಡೆಯವರ ದಾಂಪತ್ಯ ಜೀವನ ಇತರ ಅನೇಕರ ದಾಂಪತ್ಯ ಜೀವನದಂತೆ ಉಬ್ಬು ತಗ್ಗುಗಳಿಂದ ಕೂಡಿ ಸಾಗಿತ್ತು. ಹಾಗೆಯೇ ತಕ್ಕಮಟ್ಟಿಗೆ ಸುಖಮಯವಾಗಿಯೂ ನೆಮ್ಮದಿಯಾಗಿಯೂ ಇತ್ತು. ಆದರೆ ರಂಗಮ್ಮ ಧರ್ಮುವನ್ನು ಹೊಟ್ಟೆಯಲ್ಲಿ ಹೊತ್ತು ಗರ್ಭಿಣಿಯಾಗಿದ್ದಾಗ ಆಕೆಗೆ ಒದಗಿದ ದೀರ್ಘಕಾಲದ ಅನಾರೋಗ್ಯಕ್ಕೆ ಪರಿಹಾರಾರ್ಥವಾಗಿ ಮಲೆನಾಡಿನ ಪದ್ಧತಿಗಳಂತೆ ದೇವರು ಕೇಳುವುದು, ಗಣಬರಿಸುವುದು, ಕಣ್ಣಾಪಂಡಿತರಂತವರಿಂದ ಗಿಡಮೂಲಿಕೆಗಳ ಔಷಧಿ ಕೊಡಿಸುವುದು, ಹರಕೆ ಹೊರುವುದು, ದೆಯ್ಯಗಳಿಗೆ ಕೋಳಿ ಕುರಿ ಬಲಿಕೊಡಿಸುವುದು ಈ ಎಲ್ಲಾ ಬಗೆಯ ಚಿಕಿತ್ಸೆಗಳನ್ನು ನಡೆಸುತ್ತಾರೆ. ರಂಗಮ್ಮನವರ ಆರೋಗ್ಯ ಅದರಿಂದ ಸ್ವಸ್ಥವಾಗುವುದಿಲ್ಲ. ಹಾಗಾಗಿ ನಿಮಿತ್ತ ಹೇಳುವುದರಲ್ಲಿ ಹೆಸರುವಾಸಿಯಾಗಿದ್ದ ಕಲ್ಲೂರು ದೇವಸ್ಥಾನಕ್ಕೆ ಪೂಜಾರಿಯಾಗಿ ಕನ್ನಡ ಜಿಲ್ಲೆಯಿಂದ ತೊಟ್ಟ ಜನಿವಾರ, ಉಟ್ಟಪಾಣಿಪಂಚೆ, ಕೈಯ್ಯಲ್ಲೊಂದು ಪಂಚಪಾತ್ರೆ - ಇಷ್ಟೇ ಆಸ್ತಿಯಾಗಿ ಬಂದಿದ್ದ ಬಡ ಬ್ರಾಹ್ಮಣ ಮಂಜಭಟ್ಟ, ತನ್ನ ಬುದ್ಧಿವಂತಿಕೆಯಿಂದ ದೊಡ್ಡ ಜಮೀನುದಾರನೂ ಶ್ರೀಮಂತನೂ ಆಗಿದ್ದಷ್ಟೇ ಅಲ್ಲದೆ, ನಿಮಿತ್ತ ಹೇಳುವುದರಲ್ಲಿ, ಜಾತಕ ನೋಡುವುದರಲ್ಲಿ ಹೆಸರುವಾಸಿಯಾಗಿದ್ದನು. ಇಂಥ ಧಾರ್ಮಿಕ ಕ್ರಿಯೆಗಳಿಂದ ಶ್ರೀಸಾಮಾನ್ಯರನ್ನು ವಂಚಿಸುವುದರೊಂದಿಗೆ ದಾನದಕ್ಷಿಣೆಗಳನ್ನು ಸ್ವೀಕರಿಸಲು ಅರ್ಥವಾಗದ ಜೋತಿಷ್ಯ ಹೇಳಿ ವಂಚಿಸುತ್ತಿದ್ದ ಇಂತಹ ಪುರೋಹಿತಶಾಹಿ ಧೋರಣೆಗಳನ್ನು 'ಮದುಮಗಳು' ಕಾದಂಬರಿಯಲ್ಲಿ ಕುವೆಂಪು ಸಂವೇದನೆ ನಿರೂಪಕನ ಸಾಕ್ಷಿ ಪ್ರಜ್ಞೆಯಲ್ಲಿ ನಿರಂತರವಾಗಿ ಮುಖಾಮುಖಿಯಾಗಿಸುತ್ತದೆ.

ರಂಗಮ್ಮನ ದೀರ್ಘಕಾಲದ ಅನಾರೋಗ್ಯಕ್ಕೆ ಕಾರಣವನ್ನು ತಿಳಿಯಲು ಕಲ್ಲೂರು ಜೋಯಿಸ ಮಂಜಭಟ್ಟರನ್ನು ನಿಮಿತ್ತ ಕೇಳಿದ್ದರಿಂದ ಒದಗಿದ ದುರಂತವನ್ನು 'ಮದುಮಗಳು' ಕಾದಂಬರಿಯ ನಿರೂಪಕ ಪ್ರಜ್ಞಾಪೂರ್ವಕವಾಗಿಯೇ ಪ್ರಶ್ನಿಸುತ್ತಾನೆ. ಜೋತಿಷ್ಯ ನೋಡಿಸಿ ಅದರಂತೆ ಆಚರಿಸುವವರಿಗೆ ಎಲ್ಲಾ ಕಾಲದಲ್ಲಿಯೂ ಎಲ್ಲೆಡೆಯಲ್ಲಿಯೂ ಏನು ಗತಿಯಾಗುವುದೋ ಅದೇ ಗತಿ ದೊಡ್ಡಣ್ಣ ಹೆಗ್ಗಡೆಯವರಿಗೂ ಆಯಿತ್ತೆನ್ನುತ್ತಾರೆ. ಅವೈಚಾರಿಕ ಮತ್ತು ಅವೈಜ್ಞಾನಿಕವಾದ ಕ್ರಿಯಾಚಾರಗಳನ್ನು ಅಂಧ ಹೃದಯಗಳಿಂದ ಅನುಸರಿಸುವುದರಿಂದ ಹಾನಿ ತಪ್ಪುವುದಿಲ್ಲವೆಂದು ನಿರೂಪಕ ಸೂಚಿಸುತ್ತಾನೆ. ಜೋಯಿಸರು ಸೂಚಿಸಿದ್ದ ಅಮಂಗಳ ಪರಿಹಾರದ ಮಾರ್ಗವೇ ಅಮಂಗಳಕಾರಣವಾಗಿ ಪರಿಣಮಿಸಿ ತಿರುಪತಿಗೆ ಹೋದ ದೊಡ್ಡಣ್ಣ ಹೆಗ್ಗಡೆ ತೀರಿಕೊಂಡ ಸಂಗತಿಯೊಂದಿಗೆ ಪುರೋಹಿತಶಾಹಿಯ ಅವೈಜ್ಞಾನಿಕ ಜೋತಿಷ್ಯವನ್ನು ಪ್ರಶ್ನಿಸುತ್ತಾರೆ.

'ಮಲೆಗಳಲ್ಲಿ ಮದುಮಗಳು' ಕಥನದ ನಲವತ್ತನೆಯ ಭಾಗ ಪುರೋಹಿತಶಾಹಿ ಬದುಕಿನ ಅನೇಕ ಚಿತ್ರಗಳನ್ನು ನಮ್ಮ ಮುಂದಿಡುತ್ತದೆ. ಬೆಟ್ಟಳ್ಳಿಯಿಂದ ಕಲ್ಲೂರಿಗೆ ಸತ್ಯನಾರಾಯಣ ಪೂಜೆಗಾಗಿ ಹೊರಟ ಕಲ್ಲಯ್ಯಗೌಡರ ಕುಟುಂಬದ ಅತ್ಯಂತ ಕಿರಿಯ ಪೀಳಿಗೆಯವರಾದ ತಿಮ್ಮು, ಕಾಡುವಿನ ಸಹಜ ಮುಗ್ಧ ಸಂಭಾಷಣೆಗಳಲ್ಲಿ, ವೈದಿಕ ಕುಟುಂಬಗಳ ಅನೇಕ ಆಚರಣೆಗಳು, ಬದುಕಿನ ರೀತಿ ನೀತಿಗಳು ಇತರ ಕೆಳವರ್ಗಗಳಿಗಿಂತ ಭಿನ್ನವಾಗಿಯೂ ಹಾಸ್ಯಾಸ್ಪದವಾಗಿಯೂ ಚಿತ್ರಿಸಲ್ಪಟ್ಟಿವೆ. ಗ್ರಾಮೀಣ ಮಕ್ಕಳ ಕುತೂಹಲ ವೀಕ್ಷಣೆಯಿಂದ ವೈದಿಕ ಕುಟುಂಬಗಳ ಬದುಕಿನ ಅನೇಕ ರೀತಿ ನೀತಿಗಳನ್ನು ಮುಖಾಮುಖಿಯಾಗಿಸಿ ವ್ಯಂಗ್ಯಕ್ಕೆ ಗುರಿಪಡಿಸುವ ಪ್ರಕ್ರಿಯೆಯಲ್ಲಿ ಪುರೋಹಿತಶಾಹಿ ಬಗೆಗಿನ ಪ್ರತಿರೋಧವನ್ನು ಈ ಭಾಗ ಪ್ರಮುಖವಾಗಿ ವಿಶದಪಡಿಸುವುದನ್ನು ಕಾಣುತ್ತೇವೆ.

> "ಹೌದು ಕಣೋ! ನೋಡು, ಅದೇ ಹೊಳೆದಂಡೇಲಿ ಕಾಣ್ತಾ ಇದೆಯಲ್ಲಾ? ದೊಡ್ಡಮನೆ? ಅರ್ಧ ಮಂಗಳೂರು ಹೆಂಚು, ಅರ್ಧ ಓಡುಹೆಂಚು ಹೊದಿಸಿದ್ದು? ಅದೇ ಕಲ್ಲೂರು ಸಾಹುಕಾರ್ರು ಮಂಜಭಟ್ಟರ ಮನೆ ಕಣೋ!" ಅಲ್ಲಿಗೆ ಬಂದಿದ್ದು ಸ್ಥಳಪರಿಚಯ ಪಡೆದಿದ್ದ ಕಾಡು ಹೇಳಿ, ಮತ್ತೆ ಮುಂದುವರಿದನು. " ಅಪ್ಪಯ್ಯನ ಸಂಗಡ ಒಂದು ಸಾರಿ ಕಲ್ಲೂರು ತೇರಿಗೆ ಬಂದಿದ್ದೆ ಕಣೋ. ಆಗ ಆ ಭಟ್ಟರ ಮನೇಲೇ ಊಟ ಮಾಡಿದ್ದು ನಾವು. ಹೋಳಿಗೆ ಪಾಯಸ ಏನೇನೋ ಇಕ್ಕಿದ್ರು ಕಣೋ! ಆದರೆ, ಮನೆ ಒಳಗೆ ಬಳ್ಳೆ ಹಾಕಿರಲಿಲ್ಲ: ಹೊರಂಗಳದ ತೆಣೆ ಮೂಲೇಲಿ ಹಾಕಿದ್ರೋ! ಅಪ್ಪಯ್ಯನೇ ನನ್ನ ಬಳ್ಳೇನೂ ಎತ್ತಿಹಾಕಿ, ಅವರೇ ಅಲ್ಲೆಲ್ಲಾ ಗ್ಗಾಮಯಾನೂ ಹಾಕಿದ್ರು! ನಂಗೆ ಇಸ್ಸಿ ಅನ್ನಿಸಿಬಿಟ್ಟಿತ್ತು!.....ಇನ್ನು ಎಂದೆಂದಿಗೂ ಅವರ ಮನೇಲಿ ಊಟ ಮಾಡಬಾರ್ದು ಅಂತಾ ಮಾಡಿಬಿಟ್ಟೇನಿ!"

◆ ◆ ◆

> "ಕೈಕಾಲು ಮುಖ ತೊಳೆದುಕೊಳ್ಳುವುದಕ್ಕೆ ಎಲ್ಲರೂ ಅಲ್ಲಲ್ಲಿ ದರಿಸಿ ಹಾಳಾಗಿದ್ದ ಮೆಟ್ಟಿಲುಗಳನ್ನು ಇಳಿಯುತ್ತಿದ್ದಾಗ ತನ್ನ ಅಮ್ಮನ "ಏ, ಬದಿಗೆ ನಿಂತುಕೊಳ್ರೋ, ಮಡಿಯಮ್ಮ ಬರ್ತಿದಾರೆ!" ಎಂಬ ಆಜ್ಞಾಧ್ವನಿಯನ್ನು ಕೇಳಿ, ಕಾಡು ತನ್ನ

ಗೆಳೆಯರಿಬ್ಬರನ್ನೂ ಪಕ್ಕಕ್ಕೆ ಎಳೆದುಕೊಂಡು ನಿಂತನು. ಕೆಂಪು ಸೀರೆಯುಟ್ಟು, ನುಣ್ಣಗೆ ಬೋಳಿಸಿದ ಮಂಡೆಗೆ ಸೆರಗು ಮುಚ್ಚಿ, ಕೈಯಲ್ಲೊಂದು ಚೆನ್ನಾಗಿ ಬೆಳಗಿ ಪಳಪಳ ಹೊಳೆಯುತ್ತಿದ್ದ ತಾಮ್ರದ ತಂಬಿಗೆ ಹಿಡಿದು ಬರುತ್ತಿದ್ದ ಹೆಂಗಸೊಬ್ಬಳನ್ನು ಕಂಡು ತಿಮ್ಮು ಕೇಳಿದನು "ಯಾರೋ ಅದು?"

.....ಮತ್ತೆ ಕೇಳಿದನು ತಿಮ್ಮು ಮೆಲ್ಲಗೆ "ಯಾರೋ ಅದೂ? ಗಂಡಸೋ? ಹೆಂಗಸೋ?"

"ಹೆಂಗಸು ಕಣೋ! ಬೋಳುಹಾರ್ತಿ!.....ಅವಳ ಕಡೇನೇ ನೋಡಬ್ಯಾಡೋ, ಬಯ್ತಾಳಂತೆ" ಎಂದನು ಕಾಡು, ಆದಷ್ಟು ಮೆಲ್ಲಗೆ. ..... "ಹಾಂಗಂದ್ರೆ?" ತಿಮ್ಮು ಮತ್ತೆ ಪ್ರಶ್ನಿಸಿದನು, ಅವಳು ದೂರ ಹೋದ ಮೇಲೆ.

"ಬೋಳಮ್ಮ ಕಣೋ.....ಬೋಳು ಮುಂಡೆ!"

"ಛೆ! ಯಾಕೊ ಬಯ್ತಿಯಾ?"

"ಏಽ, ಬಯ್ಯದಲ್ಲ ಕಣೋ; ಬ್ರಾಂಬ್ರಲ್ಲಿ ಗಂಡ ಸತ್ತ ಮುಂಡೇರಿಗೆ ಮಂಡೆ ಬೋಳಿಸ್ತಾರೆ, ಅದ್ಕೇ 'ಬೋಳುಮುಂಡೆ' ಅನ್ನಾದು!"

.....ಹೆದರಿ ಹೆದರಿ ಪ್ರಶ್ನಿಸಿದನು "ಕಾಡಣ್ಣಯ್ಯ, ನಮ್ಮಲ್ಲಿಯೂ ಹಿಂಗೆ ಮಾಡ್ತಾರೇನೋ, ಗಂಡ ಸತ್ತರೆ?"

"ಥೂಥೂಥೂ! ಎಂಥಾ ಮಾತಾಡ್ತೀಯೊ? ನಮ್ಮಲ್ಲಿ ಯಾರಿಗೂ ಹೀಂಗೆ ಮಾಡಾದಿಲ್ಲೊ! ಬ್ರಾಂಬ್ರ ಜಾತೀಲಿ ಮಾತ್ರ ಹಂಗೆ ಮಾಡಾದು."

'ಸದ್ಯ ನಾನೂ ನನ್ನವ್ವನೂ ಬರಾಂಬ್ರ ಜಾತೀಲಿ ಹುಟ್ಟದೆ ಗೌಡರ ಜಾತೀಲಿ ಹುಟ್ಟಿದ್ದೀವಲ್ಲಾ!' ಮನಸ್ಸಿನಲ್ಲಿಯೆ ಅಂದುಕೊಂಡು ಧರ್ಮು ಹೊಳೆಯ ಅಂಚಿನ ತೆಳ್ಳೆ ನೀರಿಗಿಳಿದನು.

◆ ◆ ◆

"ಅಲ್ಲಿ ನೋಡೋ! ಅಲ್ಲಿ ನೋಡೋ! ಅವೆಂಥಾ ಹಕ್ಕಿಯೊ? ಎಷ್ಟೊಂದು ಇವೆಯೊ?

"ಅವು ಪಾರಿವಾಳ ಕಣೋ. ಇಲ್ಲೇ ಅವು ಗೂಡುಕಟ್ಟಿ ಮರೀನೂ ಮಾಡ್ತವೆ."

"ಅವನ್ನ ಹೊಡಕೊಂಡು ತಿನ್ನಾದಿಲ್ಲೇನೋ....."

"ದೇವರ ಹಕ್ಕಿ, ದೇವರ ಮೀನು ಇವನ್ನ ತಿನ್ತಾರೇನೋ ಯಾರಾದ್ರೂ? ಅದರಲ್ಲೂ ಇಲ್ಲಿ ಇರೋರೆಲ್ಲಾ ಹೆಚ್ಚಾಗಿ ಹಾರುವರೆ."

"ಇದೇನೋ ಇಷ್ಟೊಂದು ಕಾಗೆ? ಹಿಂಡು ಹಿಂಡು? ನಮ್ಮ ಮನೆ ಹತ್ರ ಹುಡುಕಿದ್ರೂ ಕಾಣಾಕೆ ಸಿಗಾದು ಅಪರೂಪ."

"ಹಾರ್ರ ಮಕ್ಕಳು ಇದ್ದಲ್ಲೇ ಹಾಂಗೆ ಕಾಣೋ! ಕಾಗೆ, ನಾಯಿ ಹಿಂಡು ಹಿಂಡೇ ಇರ್ತವೆ. ಚೆನ್ನಾಗಿ ತಿಂದು ಬಿಸಾಡ್ತಾರೆ ನೋಡು, ಅದಕ್ಕೇ!"

◆ ◆ ◆

"ತನ್ನ ತಾಯಿ ಮುಂತಾದವರ ಗೊಬ್ಬೆ ಸೆರಗಿನ ಮಲೆನಾಡಿನ ಉಡುಗೆಯನ್ನೇ ನೋಡಿ ಅಭ್ಯಾಸವಾಗಿದ್ದ ತಿಮ್ಮುಗೆ ಹಾರುವರ ಹೆಂಗಸರ ಉಡುಗೆಯ ರೀತಿ ವಿನೋದಕರವಾಗಿತ್ತು. ಅದರಲ್ಲಿಯೂ ಕಚ್ಚೆ ಹಾಕಿದಂತೆ ಸೀರೆ ಉಟ್ಟಿದ್ದವರನ್ನು ನೋಡಿ ಅವನಿಗೆ ನಗೆ ತಡೆಯಲಾಗಲಿಲ್ಲ. ಏನೋ ಕಾಡಣ್ಣಯ್ಯ, ಗಂಡಸರ ಹಾಂಗೆ ಕಚ್ಚೆ ಹಾಕಿದ್ದಾರಲ್ಲೋ ಥೂ!

◆ ◆ ◆

"ಅವರು ಮಂಜಭಟ್ಟರ ಸೊಸೆ ಅಂತೆ ಕಣೋ! ಅವರನ್ನ ಅಂತೆ, ಅತ್ತೆಮಾವ ಸೇರಿಕೊಂಡು ಹೊಡೆದೂ ಬಡಿದೂ ಕಾಲು ತಿರುಪಿ ಹಾಕಿದ್ದು! ಆಗ ಒಂದು ಸಾರಿ ಒಬ್ಬ ಒಳಗೆ ಬಂದು ಅವರ ಇವರ ಹತ್ರ ಏನೇನೋ ಕಿವಿಮಾತು ಆಡಿ ಹೊರಗೆ ಹೋದ ನೋಡು, ಬಚ್ಚಗಾನಿ ಉಟ್ಕೊಂಡು ಚಿನ್ನದ ರುದ್ರಾಕ್ಷೀನ ಕೊರಳಿಗೆ ಹಾಕಿಕೊಂಡಿದ್ನಲ್ಲಾ? ನಮ್ಮ ದೇವಣ್ಣಯ್ಯನ ಹಾಂಗೆ ಚೆಂದಾಗಿದ್ದನಲ್ಲೋ? .....ಅವನೇ ಅಂತೆ ಅವರ ಗಂಡ! ನಾರಾಯಣಭಟ್ಟ ಅಂತೆ ಕಣೋ ಅವನ ಹೆಸರು.....ಅಂವ ಇವರನ್ನ ಬಿಟ್ಟು ಕಿಟ್ಟಿ ಐತಾಳನ ಹೆಂಡ್ತಿ ಇಟ್ಟುಕೊಂಡಿದ್ದಾನಂತೆ.....ಯಾರಂತೀಯಾ? ನೋಡಲ್ಲೇ ಅವರ ಹತ್ರಾನೆ ಕೂತಿದ್ದಾಳಲ್ಲಾ ಅವಳೇ!....." *

◆ ◆ ◆

ದಕ್ಷಿಣಕನ್ನಡ ಜಿಲ್ಲೆಯಿಂದ ದೀನನಾಗಿ ಬಂದ ಕಲ್ಲೂರ ಸಾಹುಕಾರ ಮಂಜಭಟ್ಟರ ಮನೆಯ ಪರಿಚಯದೊಂದಿಗೆ ಮೊದಲಾಗುವ ವೈದಿಕ ಬದುಕಿನ ವಿಮರ್ಶೆ ಶೂದ್ರ ಮತ್ತು ವೈದಿಕರ ಊಟೋಪಚಾರಗಳ ನಡುವಿನ ಅಂತರಗಳನ್ನು, ಬ್ರಾಹ್ಮಣ ವಿಧವೆಯರ ವೇಶಭೂಷಣಗಳನ್ನು, ಅವರ ಅತಿಯಾದ ಊಟೋಪಚಾರಗಳನ್ನು, ಸ್ತ್ರೀ ಪುರುಷರ ನಡುವಿನ ಕ್ರೌರ್ಯ ಮತ್ತು ಅನೈತಿಕ ಸಂಬಂಧಗಳನ್ನು, ಉಡುಗೆ ತೊಡುಗೆಗಳ ಬಗೆಗಿನ ವಿಚಾರಗಳನ್ನು, ಹಾರುವರ ಮನೆಗಳ ಸುತ್ತ ಮುತ್ತಲಿನ ಪರಿಸರವನ್ನು ಮಕ್ಕಳ ಕುತೂಹಲ ವೀಕ್ಷಣೆಯ ನಿರೂಪಣೆಯಲ್ಲಿ ಕುವೆಂಪು ಕಥನಗಳ ಸಂವೇದನೆ ಅತ್ಯಂತ ರೂಕ್ಷವಾಗಿ ವ್ಯಂಗ್ಯಕ್ಕೆ ಗುರಿಪಡಿಸುತ್ತದೆ. ಹಾಗೆಯೇ ಈ ಭಾಗದ ಮಂಜಭಟ್ಟ ಮತ್ತು ದೇವಯ್ಯನ ಮುಖಾಮುಖಿಯಲ್ಲಿ ನಡೆಯುವ ಸಂಭಾಷಣೆಯಲ್ಲಿಯೂ ವೈದಿಕ ಯಾಜಮಾನ್ಯದ ಬಗ್ಗೆ ಪ್ರಖರವಾದ ಪ್ರತಿರೋಧವಿರುವುದನ್ನು ಗುರುತಿಸಬಹುದು. ಮಂಜಭಟ್ಟನು ದೇವಸ್ಥಾನದಲ್ಲಿ ಸತ್ಯನಾರಾಯಣ ವ್ರತದ ಕಥೆಯನ್ನು ಹೇಳಲು ಪ್ರಾರಂಭ ಮಾಡುತ್ತಿದ್ದಂತೆಯೇ ಶ್ರೋತೃಭಕ್ತರ ಏಕಾಗ್ರತೆಗೆ ಒಂದಿನಿತೂ ಭಂಗಬಾರದಂತೆ ಅವರ ಗಮನವನ್ನು ಒಂದು ಸ್ವಲ್ಪವೂ ಸೆಳೆಯದೆ ಮಂಜಭಟ್ಟನ ಧರ್ಮಶ್ರವಣ ರಂಗದಿಂದ ಧರ್ಮು ಕಾಡು ತಿಮ್ಮು ಮೊದಲೇ ಪಾರಾಗಿದ್ದರು. ಶ್ರೋತೃವರ್ಗದವರಲ್ಲಿ ಮುಖ್ಯರಾದ ದೇವಯ್ಯನೂ ಮುಕುಂದಯ್ಯನ ಕಿವಿಯಲ್ಲಿ "ಈ ಅಜ್ಜಿ ಪುರಾಣ ಯಾರು ಕೇಳ್ತಾರೊ? ಕೂತೂ ಕೂತೂ ಕಾಲೆಲ್ಲ ಮರಗಟ್ಟಿ ಹೋಗಿವೆ" ಎಂದು ಎದ್ದು ಹೋಗುವ ವರ್ತನೆಯಲ್ಲಿಯೂ ವೈದಿಕ ಕ್ರಿಯಾಚರಣೆಗಳ ಬಗೆಗೆ ಪ್ರತಿರೋಧವನ್ನು ಗುರುತಿಸಬಹುದಾಗಿದೆ. ಹಾಗೆಯೇ ಗಡ್ಡದಯ್ಯ ಮತ್ತು ದೇವಯ್ಯ ಮುಕುಂದಯ್ಯರ ಸಂಭಾಷಣೆಯಲ್ಲಿಯೂ ಪುರೋಹಿತಶಾಹಿಯ ಅನಾಚಾರಗಳನ್ನು ಕುರಿತ ಟೀಕೆ ಪ್ರಕಟವಾಗುತ್ತದೆ.

"ಸಂನ್ಯಾಸಿ ಹಿಂದೂಮತ, ಜಾತಿಭೇದ, ಮತಾಚಾರಮೌಢ್ಯ, ಬ್ರಾಹ್ಮಣ ಪುರೋಹಿತ ವರ್ಗದವರಿಂದ ಇತರರಿಗೆ ಆಗುತ್ತಿರುವ ಅನ್ಯಾಯ ಮತ್ತು ಅಪಚಾರ ಅವುಗಳನ್ನು ಕುರಿತ ದೇವಯ್ಯನ ಖಂಡನೆ ಮತ್ತು ಟೀಕೆಗಳಲ್ಲಿ ಬಹುಭಾಗವನ್ನು ಒಪ್ಪಿಕೊಂಡದ್ದು ಮಾತ್ರವಲ್ಲದೆ ದೇವಯ್ಯನಿಗಿಂತಲೂ ಸಮರ್ಥವಾಗಿ ಸ್ವಾರಸ್ಯಕರವಾಗಿ ನಿದರ್ಶನ ಪೂರ್ವಕವಾಗಿ ಅವುಗಳನ್ನು ವಿಸ್ತರಿಸಿದ್ದನು. ಆತನ ತೀಕ್ಷ್ಣ ವಿಡಂಬನೆಗೂ ನಿಶಿತ ಹಾಸ್ಯಕ್ಕು ವಶರಾಗಿ ದೇವಯ್ಯ ಮುಕುಂದಯ್ಯ ಇಬ್ಬರೂ ಒಮ್ಮೊಮ್ಮೆ ಬಿದ್ದುಬಿದ್ದು ನಕ್ಕೂ ಇದ್ದರು. ಆದರೆ ಯಾವಾಗ ವೇದಾಂತ ತತ್ವಗಳನ್ನು ಆಧರಿಸಿ, ಹಿಂದೂ ಧರ್ಮದ ಮತ್ತು ಭಾರತೀಯ ದೃಷ್ಟಿಯ ಸಮರ್ಥನೆಗೆ ಕೈ ಹಾಕಿದನೋ ಆಗ ಶ್ರೋತೃಗಳಿಬ್ಬರೂ ಒಂದು ಭೂಮಾನುಭೂತಿಯೆ ಅನುಭವದಲ್ಲಿ ಡಂಗಾಗಿ ಹೋಗಿದ್ದರು. ಹಿಂದೂಗಳಾಗಿದ್ದ ಅವರು ಅದೆಂತಹ ಮಹೋನ್ನತ ದಿವ್ಯ ದರ್ಶನದ ಆಸ್ತಿಗೆ ಹಕ್ಕುದಾರ ರಾಗಿದ್ದಾರೆ ಎಂಬುದನ್ನು ಆತನು ವಿವರಿಸಿದಾಗ ಆ ಮಂಟಪದಲ್ಲಿ ಒಂದು ದಿವ್ಯ ಆರಾಧನೆಯ ಸಾನ್ನಿಧ್ಯವೆ ಸೃಷ್ಟಿಯಾಗಿತ್ತು!" ೬

ವೈದಿಕ ಸಂವೇದನೆ ಅನೇಕ ನೆಲೆಗಳಲ್ಲಿ ಕೆಳವರ್ಗಗಳಿಗೆ ಮಾಡಿದ ಅನ್ಯಾಯವನ್ನು, ಅಪಚಾರಗಳನ್ನು ಮತ್ತು ಹಿಂದೂಧರ್ಮದ ಅತ್ಯಂತ ಮಾನವೀಯ ವೇದಾಂತ ತತ್ವಗಳ ಪರಿಚಯವನ್ನು ಮಾಡಿಕೊಡುವುದರ ಮುಖೇನ ಪುರೋಹಿತಶಾಹಿಯೂ ಹಿಂದೂ ಧರ್ಮದಲ್ಲಿನ ಅನೇಕ ಮಾನವೀಯ ಮೌಲ್ಯಗಳನ್ನು ತಿರುಚಿ ಅಮಾನವೀಯ ಗೊಳಿಸಿದ್ದರ ಬಗೆಗೆ ತಿಳುವಳಿಕೆಯನ್ನು ನೀಡುವುದರ ಹಿಂದೆ ವೈದಿಕಶಾಹಿಯ ಬಗೆಗಿನ ಕುರಿತ ವಿಮರ್ಶೆಯನ್ನೇ ಕಾಣುತ್ತೇವೆ.

ಸ್ವಾಮಿ ವಿವೇಕಾನಂದರು ಚಿಕಾಗೋದಿಂದ ಭರತಖಂಡಕ್ಕೆ ಬಂದು ಸ್ಥಳೀಯ ಮತ್ತು ಕ್ರೈಸ್ತಾದಿ ಪುರೋಹಿತರ ಹಿಡಿತಗಳಿಂದ ಸಾಮಾನ್ಯ ಜನತೆ ಬಿಡುಗಡೆ ಪಡೆಯುವಂತೆ, ಭರತಖಂಡವನ್ನೆಲ್ಲಾ ಸಂಚರಿಸಿ ಹೊಸದೊಂದು ಯುಗಶಕ್ತಿಯನ್ನೇ ಎಚ್ಚರಿಸುತ್ತಾರೆಂಬ ಮಾತುಗಳಲ್ಲಿ ಇದೇ ಬಗೆಯ ಪ್ರತಿರೋಧವನ್ನು ಕಾಣಬಹುದಾಗಿದೆ.

ಮೇಗರವಳ್ಳಿ ಮಿಶನ್ ಸ್ಕೂಲಿನ ಕಟ್ಟಡದ ಪ್ರಾರಂಭೋತ್ಸವದ ಉದ್ಘಾಟನೆಯ ಸಂದರ್ಭದಲ್ಲಿ, ಬೆಟ್ಟಳ್ಳಿ ದೇವಯ್ಯಗೌಡನ ಕ್ರೈಸ್ತ ಮತಾಂತರದ ಸಂದರ್ಭವು ಸ್ಥಳೀಯ ಮತ್ತು ಕ್ರೈಸ್ತ ಪುರೋಹಿತಶಾಹಿಯ ಮತೀಯ ಒಳತಂತ್ರಗಳನ್ನು ಅತ್ಯಂತ ಮಾರ್ಮಿಕವಾಗಿ ಎದುರುಬದುರಾಗಿಸುವ ಪ್ರಕ್ರಿಯೆಯಲ್ಲಿಯೂ ಇಂಥ ಪ್ರತಿರೋಧವೇ ವ್ಯಕ್ತವಾಗುತ್ತದೆ. ಕ್ರೈಸ್ತ ಪುರೋಹಿತ ದೇವಯ್ಯನಂತಹ ಶೂದ್ರ ಜನಾಂಗದ ಯುವಕನನ್ನು ಮತಾಂತರಗೊಳಿಸಲು, ಬ್ರಾಹ್ಮಣರ ಹಿಂದೂ ಧರ್ಮದ ದುರ್ಮುಷ್ಟಿಯಿಂದ ಆಗಿರುವ ಅನರ್ಥಗಳನ್ನು ವಿಶದಪಡಿಸುವುದರೊಂದಿಗೆ ಅಂತದ್ದೇ ಮತ್ತೊಂದು ಕ್ರೈಸ್ತ ಪುರೋಹಿತಶಾಹಿಯ ಹಿಡಿತಕ್ಕೆ ಗುರಿಪಡಿಸಿಕೊಳ್ಳುತ್ತಿರುವ ಪ್ರಕ್ರಿಯೆಯಲ್ಲಿ ಸ್ಥಳೀಯ ಮತ್ತು ಕ್ರೈಸ್ತ ಪುರೋಹಿತಶಾಹಿಯ ಮತೀಯ ತಂತ್ರಗಳನ್ನು ಕುವೆಂಪು ಕಥನಗಳು ಬಯಲಿಗೆಳೆಯುತ್ತವೆ. ಹಾಗೆಯೇ ಕ್ರೈಸ್ತ ಮತ ಪ್ರಚಾರಕರಾದ ಪಾದ್ರಿಗಳ ಬ್ರಿಟಿಷ್ ಸರ್ಕಾರದ ರಾಜಕೀಯ ಬಲ ಮತ್ತು ಪ್ರತಿಷ್ಠೆ ಹಾಗೂ ಸೌಕರ್ಯಗಳ

ಸೌಲಭ್ಯಗಳನ್ನು ಪಡೆದು, ವಿದ್ಯಾಭ್ಯಾಸದ ಮತ್ತು ವೈದ್ಯಕೀಯ ಸೇವೆಗಳ ಬಲೆಯೊಡ್ಡಿ, ಸ್ಥಳೀಯ ಪುರೋಹಿತಶಾಹಿಯ ಹಿಡಿತಕ್ಕೆ ಸಿಕ್ಕಿ ಅಜ್ಞಾನ ಕುಕ್ಷಿಗಳಾಗಿರುವ ಶೂದ್ರವರ್ಗವನ್ನು ಮತಾಂತರಗೊಳಿಸುವ ಪ್ರಕ್ರಿಯೆಗೆ ತೊಡಗಿದ, ಕ್ರೈಸ್ತ ಪುರೋಹಿತಶಾಹಿಯನ್ನು ದೇವಯ್ಯ ಮುಕುಂದಯ್ಯನಂತಹ ಯುವಕರು ವಂಚಕತಂತ್ರದಿಂದ ವಿಫಲಗೊಳಿಸುವ ಪ್ರಕ್ರಿಯೆಯಲ್ಲಿಯೂ ಪುರೋಹಿತಶಾಹಿಯ ಬಗೆಗಿನ ಪ್ರತಿರೋಧವನ್ನೇ ಕಾಣುತ್ತೇವೆ.

ಪುರೋಹಿತಶಾಹಿ ವರ್ಗದಿಂದ ಬ್ರಾಹ್ಮಣೇತರರಿಗೆ ಆಗಿರುವ ಅನ್ಯಾಯಗಳನ್ನು, ಕುವೆಂಪು ಕಥನಗಳು ಮೊದಲೇ ಸ್ಥೂಲವಾಗಿ ಪ್ರಸ್ತಾಪಿಸಿರುವಂತೆ ಮುಖ್ಯ ನೆಲೆಯನ್ನಾಗಿ ಚಿಂತಿಸುತ್ತವೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪುರೋಹಿತಶಾಹಿ ವರ್ಗದ ಅನಾಚಾರ, ಅವಿವೇಕ, ಜಾತಿಮತಗಳ ತಾರತಮ್ಯಗಳಿಂದ ಬ್ರಾಹ್ಮಣೇತರರು ಅಥವಾ ಅವೈದಿಕರು ಶೋಷಣೆಗೆ ಒಳಗಾಗುತ್ತಿದ್ದ ರೀತಿ ನೀತಿಗಳನ್ನು, ಮತಾಂತರ ಪ್ರಕ್ರಿಯೆಯಲ್ಲಿ ತೊಡಗಿದ ಬ್ರಿಟಿಷ್ ಪಾದ್ರಿಗಳ ಬೋಧನೆಯಿಂದ ಇಡೀ ಮಲೆನಾಡಿನ ಪ್ರಜ್ಞೆಯೊಂದು ಎಚ್ಚರಗೊಳ್ಳುತ್ತಿರುವ ಪ್ರಕ್ರಿಯೆಯನ್ನು 'ಕಾನೂರು ಹೆಗ್ಗಡಿತಿ'ಯಲ್ಲಿ ಕಾಣುತ್ತೇವೆ. ಇಡೀ ಮತಾಂತರ ಪ್ರಕ್ರಿಯೆ ಬ್ರಾಹ್ಮಣರಿಂದ ಕೆಳವರ್ಗಗಳಿಗೆ ಆಗುತ್ತಿದ್ದ ಅನ್ಯಾಯಗಳಿಂದ ಬಿಡುಗಡೆಗೊಳಿಸಲು ಕೈಗೊಂಡಿರುವ ಸೇವಾ ಕಾರ್ಯವೆಂದು ಕ್ರೈಸ್ತ ಪಾದ್ರಿಗಳು ಭಾವಿಸುವುದನ್ನು ಈ ಕಥನದಲ್ಲಿ ಕಾಣುತ್ತೇವೆ. ಅಂತೆಯೇ ವೈದಿಕ ವರ್ಗ ಅವೈದಿಕ ವರ್ಗವನ್ನು ಶೋಷಣೆಗೆ ಒಳಪಡಿಸಿರುವ ಅಸಂಖ್ಯ ನೆಲೆಗಳನ್ನು ಮಲೆನಾಡಿನ ಜನತೆಗೆ ಮನವರಿಕೆ ಮಾಡುತ್ತವೆ. ಅಥವಾ ಆ ಬಗೆಗೆ ಎಚ್ಚರ ಮೂಡಿಸುತ್ತಲೇ ಮತ್ತೊಂದು ಅಂತಹದೇ ಮತೀಯ ಹಿಡಿತಕ್ಕೆ ಒಳಗು ಮಾಡಿಕೊಳ್ಳುವ ಕಥನ 'ಮದುಮಗಳು' ಕಾದಂಬರಿಯ ಕೇಂದ್ರ ವಸ್ತುವಾಗಿರುವುದನ್ನು ಈಗಾಗಲೇ ಅಲ್ಲಲ್ಲಿ ಪ್ರಸ್ತಾಪಿಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಇಲ್ಲಿ ಮುಖ್ಯವಾಗಿ ಪ್ರಸ್ತಾಪಿಸಲು ಇಚ್ಛಿಸುವ ಸಂಗತಿಯೆಂದರೆ, ಮೊದಲೇ ಹೇಳಿದಂತೆ ಪುರೋಹಿತಶಾಹಿಯ ಅನ್ಯಾಯದ ಬಗೆಗೆ ಮಲೆನಾಡಿನ ಜನತೆಯಲ್ಲಿ ಎಚ್ಚರವನ್ನು ಮೂಡಿಸಿದವರು ಸುಧಾರಣಾವಾದಿ ಕ್ರೈಸ್ತ ಪಾದ್ರಿಗಳ ಸಮುದಾಯವೇ ಆಗಿದೆ. ಅಂದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ವ್ಯಕ್ತವಾಗುವ ಪುರೋಹಿತಶಾಹಿಯ ಬಗೆಗಿನ ಎಚ್ಚರ, ಹೊರಗಿನ ಪಾದ್ರಿಗಳಿಂದ ಮತ್ತು ಅವರು ಹೊತ್ತು ತಂದ ಇಂಗ್ಲಿಷ್ ವಿದ್ಯಾಭ್ಯಾಸದಿಂದ ಮೈ ಪಡೆದರೆ, 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಈ ಎಲ್ಲಾ ಹಿನ್ನೆಲೆಯಿಂದ ನಿರ್ಮಾಣವಾದ ಸ್ಥಳೀಯ ಪ್ರಜ್ಞೆಯಲ್ಲಿಯೇ ಅಂಥ' ಒಂದು ಎಚ್ಚರ ನಿರ್ಮಾಣವಾಗುತ್ತಿರುವುದನ್ನು ಈ ಕಾದಂಬರಿಯ ಕಥನ ಕಟ್ಟಿಕೊಡುತ್ತದೆ. ಹೂವಯ್ಯ ಮತ್ತು ವೆಂಕಪ್ಪಜೋಯಿಸರ ಮುಖಾಮುಖಿಯಲ್ಲಿ ಪುರೋಹಿತಶಾಹಿ ಮತ್ತು ಆಧುನಿಕ ಯುಗ ಪ್ರಜ್ಞೆಯೊಂದರ ಸಂಘರ್ಷ ಇಡೀ ಕಥನದ ಉದ್ದಕ್ಕೂ ಅನುರಣಿತವಾಗುವುದನ್ನು ಕಾಣುತ್ತೇವೆ. ಈ ಸಂಘರ್ಷದ ಹಿಂದೆ ಇಂಗ್ಲಿಷ್ ಶಿಕ್ಷಣದ ಮೂಲಕ ದತ್ತವಾದ ವೈಚಾರಿಕತೆ ಮತ್ತು ಭಾರತೀಯ ವೇದಾಂತದರ್ಶನದ ಮಾನವೀಯ ವಿಚಾರಧಾರೆ, ಪರಮಹಂಸ - ವಿವೇಕಾನಂದ ಮತ್ತು ಬುದ್ಧನ ಚಿಂತನೆಗಳು ಅಂತರ್ಗತವಾಗುವುದನ್ನು ಕಾಣಬಹುದಾಗಿದೆ. ಅಂದರೆ ಕುವೆಂಪುರವರ ಈ ಕಥನಗಳು ಆರ್ಷೇಯ ಹಾಗೂ ಹೊಸ ಮೌಲ್ಯಗಳ ಸಂಪರ್ಕ ಮತ್ತು ಸಂಘರ್ಷಗಳ ಮುಖ್ಯ ಚಿಂತನೆಗಳನ್ನು ವಿಶ್ಲೇಷಿಸುತ್ತವೆ. ಈ ಎರಡೂ ಚಿಂತನಾ ನೆಲೆಗಳ ಮುಖೇನ ಹೊಸದೊಂದು ಮಾನವೀಯ ಬದುಕಿನ ಪರಿಸರವನ್ನು ಶೋಧಿಸಿಕೊಳ್ಳುತ್ತಿರುವ ಸುಳಿವುಗಳನ್ನು ಕಾಣುತ್ತೇವೆ. ವೈದಿಕವರ್ಗವು ದೇವರಪೂಜೆ ಮಾಡುವುದು, ನಿಮಿತ್ತ ನೋಡುವುದು, ಭವಿಷ್ಯಹೇಳುವುದು,

ಜಾತಕ ಬರೆಯುವುದು ಮತ್ತು ನೋಡುವುದು, ಲಗ್ನಕ್ಕೆ ಮುಹೂರ್ತ ಗೊತ್ತುಪಡಿಸುವುದು, ಶೂದ್ರರ ಭೂತಾಧಿಗಳಿಗೆ ರಕ್ತದ ಬಲಿಕೊಡುವ ಬದಲು ಹಣ್ಣು ಕಾಯಿ ಮಾಡುವುದು, ಮಂತ್ರಗಳಿಂದ ದೆವ್ವಗಳನ್ನು ಬಿಡಿಸುವುದು ಮತ್ತು ಹಿಡಿಸುವುದು ಮೊದಲಾದ ಅರ್ಥವಿಲ್ಲದ ಮೌಢ್ಯಚಾರಗಳನ್ನು, ಭಯಭಕ್ತಿಗಳನ್ನು ಹಳ್ಳಿಯವರಲ್ಲಿ ಹುಟ್ಟಿಸಿ ವಂಚಕ ಜೀವನವನ್ನು ನಡೆಸುತ್ತಿದ್ದುದರ ಬಗೆಗೆ ಕುವೆಂಪು ಸಂವೇದನೆ ತೀವ್ರವಾಗಿ ಪ್ರತಿರೋಧಿಸಿರುವುದನ್ನು ಕಾಣುತ್ತೇವೆ. ಈ ಪ್ರತಿರೋಧ ಕಾದಂಬರಿಯ ಉದ್ದಕ್ಕೂ ಹೂವಯ್ಯ ಮತ್ತು ವೆಂಕಪ್ಪಜೋಯಿಸರ ನಡುವೆ ಮುಖ್ಯವಾಗಿ ನಡೆಯುವುದನ್ನು ಗುರುತಿಸಬಹುದಾಗಿದೆ. ಚಂದ್ರಯ್ಯಗೌಡರಂತಹ ದೊಡ್ಡ ಕುಟುಂಬವನ್ನು ತನ್ನ ಕುತಂತ್ರಗಳಿಂದ ವಿಘಟಿಸುವುದು ಅಥವ ಒಡೆಯುವುದು ಹಾಗು ದೇವರು, ಧರ್ಮ, ಶಾಸ್ತ್ರ, ನಿಮಿತ್ತ, ಗ್ರಹಚಾರ, ಇವುಗಳ ಹೆಸರಿನಲ್ಲಿ ಚಂದ್ರಯ್ಯಗೌಡರ ಇಚ್ಛೆಯಂತೆ ವೆಂಕಪ್ಪಜೋಯಿಸರು ವರ್ತಿಸುವುದಲ್ಲದೆ, ಹೂವಯ್ಯನ ವಿರೋಧದ ಬಗೆಗಿನ ವರ್ತನೆಗಳಲ್ಲಿಯೂ, ಹೂವಯ್ಯ ಮತ್ತು ಸೀತೆಯ ಮದುವೆಯನ್ನು ಮುರಿಯುವ ಕ್ರಿಯೆಗಳಲ್ಲಿಯೂ ವೆಂಕಪ್ಪಜೋಯಿಸರ ಕೃತ್ಯವನ್ನು ಕಾಣಬಹುದಾಗಿದೆ. ಹಾಗೆಯೇ ಶೂದ್ರ ಸಮುದಾಯದಲ್ಲಿ ಎಚ್ಚರಗೊಳ್ಳುತ್ತಿರುವ ನವ ವೈಚಾರಿಕತೆಯನ್ನು ಸಹಿಸಲಾರದ ವೆಂಕಪ್ಪಜೋಯಿಸರ ಹುನ್ನಾರಗಳನ್ನು ಈ ಕೆಳಗಿನ ಉದ್ಧರಣೆ ಸಮರ್ಥವಾಗಿ ಪರಿಚಯಿಸುತ್ತದೆ.

> "…..ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡಿಬಿಡುತ್ತದೆ ಎಂದು! ದೇವರು ದಿಂಡರು ಭಕ್ತಿ ಗಿತ್ತಿ ಎಲ್ಲ ನಿರ್ನಾಮ! ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತುಬಿಡುತ್ತಾರೆ. ನಿನ್ನ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ, ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹಚ್ಚು. ಸಂಸಾರ ತಲೆಗೆ ತಾಗಿದರೆ ಆಗ ಬುದ್ಧಿ ಬರುತ್ತದೆ."
>
> "ಹಾಂಗೆ ಮಾಡೋದೆ ಸೈ ಅಂತ ಕಾಣ್ತದೆ - ಈಗ ನೋಡಿ; ಆ ಹೂವಯ್ಯ, ಅವನ ದೆಸೆಯಿಂದ ರಾಮಯ್ಯ, ಇಬ್ಬರೂ ಸೇರಿ ದೆಯ್ಯ ದ್ಯಾವರು ಭೂತ ಗೀತ ಜಕಣಿ ಗಿಕಣಿ ಒಂದೂ ಬ್ಯಾಡ ಅಂತ ಬೋದ್ನೋಕೆ ಸುರುಮಾಡಿದ್ದಾರೆ. ಆ ಹೂವಯ್ಯನಂತೂ ಅದೆಂತಂತದೊ - ಬಗವದ್ಗೀತೆಯಂತೆ, ಉಪ್ನಿಷತ್ತಂತೆ - ಓದಿ ತಲೆ ಕೆಡಿಸಿಕೊಳ್ಳುತ್ತಿದ್ದಾನೆ …..ಮನೆಗೆ ಬಂದವನು ಒಂದು ಆಳು ಕಾಳಿನ ಕೆಲಸ ಕೂಡ ನೋಡೋದಿಲ್ಲ. ಉಪ್ಪರಿಗೆ ಮೇಲೆ ಓದುತ್ತ ಕುಳಿತುಬಿಡ್ತಾನೆ."
>
> "ಹೌದೂ, ದುಡಿದು ಹಾಕುವವರು ಒಬ್ಬರಿದ್ದರೆ ಮತ್ತೇನು ಮಾಡುತ್ತಾನೆ? ಅವನ ಪಾಲು ಅವನಿಗೆ ಕೊಟ್ಟು, ಬೇರೆ ಹಾಕು! ಆಗೆಲ್ಲ ಸರಿಹೋಗುತ್ತದೆ. ಈ ಶೂದ್ರ ಮಕ್ಕಳಿಗೆಲ್ಲ ಉಪನಿಷತ್ತು, ಭಗವದ್ಗೀತೆ ಗಂಧವಾದರೂ ಗೊತ್ತಾಗುತ್ತದೆಯೆ? ನಮಗೇ ಗೊತ್ತಾಗುವುದಿಲ್ಲ….."
>
> ಗೌಡರು ನಗುತ್ತ "ನಿಮಗೆ ಗೊತ್ತಾಗದೆ ಏನು?" ಎಂದರು.

"ಹಾಗಲ್ಲ, ಚಂದ್ರಯ್ಯ, ನಿನಗೆ ಗೊತ್ತಿಲ್ಲ. ಎಂತೆಂಥ ಆಚಾರ್ಯರೇ ಅವುಗಳಿಗೆ ವ್ಯಾಖ್ಯಾನ ಬರೆಯಲು ತಿಣಿಕಿಬಿಟ್ಟಿದ್ದಾರೆ. ಅವರಲ್ಲಿಯೇ ಏಕಮತವಿಲ್ಲ.....ಈ ಶೂದ್ರ ಮಕ್ಕಳಿಗೆಲ್ಲ ಗೊತ್ತಾಗುತ್ತದೆಯೇ.....ಅದನ್ನೆಲ್ಲ ಓದಿ ಮನೆ ಹಾಳು ಮಾಡಿಕೊಳ್ಳುತ್ತಾರೆ; ಅಷ್ಟೆ!....." ೬

ಪಾರಂಪರಿಕವಾಗಿ ಶೂದ್ರವರ್ಗವನ್ನು ಶಿಕ್ಷಣದಿಂದ ವಂಚಿಸಿದ ಪುರೋಹಿತವರ್ಗ ಈಗಲೂ ಅಂತಹುದೇ ಆಶಯವನ್ನು ಆ ವರ್ಗ ಹೊಂದಿರುವುದನ್ನು ಈ ಉದ್ಧರಣೆ ಮನದಟ್ಟು ಮಾಡುತ್ತದೆ. ಅಮಾನವೀಯ ವರ್ಣವ್ಯವಸ್ಥೆಯನ್ನು ಹುಟ್ಟುಹಾಕಿ ಆ ಮೂಲಕ ಕೆಳವರ್ಗಗಳನ್ನು ನಿರ್ಮಾಣಮಾಡಿ ಅವರನ್ನೂ ಶಿಕ್ಷಣದಿಂದ ವಂಚಿಸಿದ್ದಲ್ಲದೆ, ಅನೇಕ ಮೌಢ್ಯಚಾರಗಳಿಗೆ ಗುರಿಮಾಡಿದ ವೈದಿಕವರ್ಗ ಕೆಳವರ್ಗಗಳ ಆಧುನಿಕ ವೈಚಾರಿಕತೆಯನ್ನು ಸಹಿಸಲಾರದ ವಾಸ್ತವತೆಯನ್ನು ಈ ಉದ್ಧರಣೆ ಸೂಚಿಸುತ್ತದೆ. ಕೆಳವರ್ಗಗಳು ಶಿಕ್ಷಣ ಪಡೆಯುವುದೆಂದರೆ ಓದಿ ಮನೆ ಹಾಳು ಮಾಡಿಕೊಳ್ಳುತ್ತಾರೆ ಎಂಬುದು ಜೋಯಿಸರಂತಹ ಅವಕಾಶವಾದಿಯ ಮನೋಭಾವವಾಗಿದೆ.

ಹೂವಯ್ಯ ಮತ್ತು ವೆಂಕಪ್ಪಜೋಯಿಸರ ನಡುವಿನ ಸಂಘರ್ಷಕ್ಕೆ ಮುಖ್ಯ ಕಾರಣಗಳನ್ನು ಕಾದಂಬರಿಯ ಈ ಕೆಳಗಿನ ಭಾಗವನ್ನು ಉದ್ಧರಿಸುವುದರೊಂದಿಗೆ ಸ್ಪಷ್ಟಪಡಿಸಿಕೊಳ್ಳಬಹುದು.

"ಜೋಯಿಸರ ಜಗಲಿಯ ಮೇಲೆ ಮಲಗಿದ್ದ ಹೂವಯ್ಯನನ್ನು ನೋಡಿದ ಕೂಡಲೆ ಒಂದು ವಿಧವಾದ ಜುಗುಪ್ಸೆಯಾಯಿತು. ಏಕೆಂದರೆ, ಅವನು ತಮ್ಮ ವ್ಯಾಪಾರಕ್ಕೆ ಮೂಲಧನದಂತಿದ್ದ ಹಳ್ಳಿಗರ ಮೌಢ್ಯವನ್ನು ನಿವಾರಿಸಲು ಮಾಡುತ್ತಿದ್ದ ಪ್ರಯತ್ನವು ಜೋಯಿಸರ ಭಾಗಕ್ಕೆ ಅಸಹನೀಯವಾಗಿತ್ತು. ಅದೂ ಅಲ್ಲದೆ ಬ್ರಾಹ್ಮಣರಾದ ತಮಗಿಂತಲೂ ಶೂದ್ರನಾದ ಅವನಿಗೆ ಉಪನಿಷತ್ತು ಭಗವದ್ಗೀತೆ ಮೊದಲಾದವುಗಳ ಪರಿಚಯವೂ ಜ್ಞಾನವೂ ಹೆಚ್ಚಾಗಿದೆ ಎಂಬುದು. .....ಹೂವಯ್ಯನ ಸ್ಥಿತಿಯನ್ನರಿತು ಧೈರ್ಯಗೊಂಡ ಜೋಯಿಸರು ಬೆನ್ನುನೋವು ಹೋಗುವಂತೆ ಮಂತ್ರ ಮಾಡುವುದಾಗಿಯೂ, ತಾಯಿತಿ ಕಟ್ಟುವುದಾಗಿಯೂ, ಪೂಜೆ ಮಾಡಿಸುವುದಾಗಿಯೂ, ಗ್ರಹಗತಿಯನ್ನು ಸರಿಮಾಡುವುದಾಗಿಯೂ ಶಾಮಯ್ಯಗೌಡರೊಡನೆ ಹೇಳಿದರು. ಗೌಡರು ಮರುಮಾತಾಡದೆ ಸಮ್ಮತಿಸಿ ಹೂವಯ್ಯನಿಗೆ ಜೋಯಿಸರ ಅನುಗ್ರಹದ ವಿಚಾರವಾಗಿ ಹೇಳಿದರು. ಹೂವಯ್ಯ ನಕ್ಕು ಹಾಸ್ಯಮಾಡಿಬಿಟ್ಟನು. ಜೋಯಿಸರಿಗೂ ಅವನಿಗೂ ಬಿಸಿ ಬಿಸಿಯಾಗಿ ನಾಲ್ಕು ಮಾತಾಯಿತು. ಜೋಯಿಸರಿಗೆ ಮುಖಭಂಗವಾಯಿತು.

ಜೋಯಿಸರು ಸಿಟ್ಟಾಗಿ "ಹೂವಯ್ಯ, ನಿನಗೆ ಇದು ಒಳ್ಳೆಯದಲ್ಲ. ಹಿಂದಿನಿಂದ ನಡೆದುಬಂದ ಆಚಾರ, ದೇವರು, ವೇದ, ಶಾಸ್ತ್ರಗಳನ್ನೆಲ್ಲ ಅಲ್ಲಗೆಳೆಯುವ ನಿನಗೆ ಕೇಡು ತಪ್ಪಿದ್ದಲ್ಲ" ಎಂದರು.

ಹೂವಯ್ಯನೂ "ನೀವು ತಿಳಿದವರೆಂದುಕೊಂಡು ಹಳ್ಳಿಯವರಿಗೆ ಮೌಢ್ಯವನ್ನೇ ಉಪದೇಶ ಮಾಡಿ, ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಸತ್ಯನಾರಾಯಣ ವ್ರತ ಮಾಡಿಸುವುದು, ದೆವ್ವ ಪಿಶಾಚಿಗಳಿಗೆ ಬಲಿಕೊಡುವುದು, ಇದರಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದೀರಿ. ಟ್ರಂಕು ತಗುಲಿ ಬೆನ್ನು ನೋವಾಗಿದ್ದರೆ ಔಷಧಿ ಮಾಡಿ ಎಂದು ಹೇಳುವ ಬದಲು ಬೂದಿ ಕುಂಕುಮ ಹಚ್ಚಿ, ಮಂತ್ರ ಹಾಕಿಸಿ ಎಂದು ಹೇಳುತ್ತಿದ್ದೀರಲ್ಲಾ! ಇದು ಯಾವ ತತ್ವಶಾಸ್ತ್ರದಲ್ಲಿ ಹೇಳಿದೆ? ಹಾಗೆ ಹೇಳಿರುವ ಗ್ರಂಥಗಳಿದ್ದರೆ ಅವು ಮನ್ನಣೆಗೆ ಯೋಗ್ಯವಾದುವೆ? ನಿಮ್ಮ ಬೋಧನೆಯಿಂದ ಎಷ್ಟು ಜನರು ರೋಗಕ್ಕೆ ಸರಿಯಾಗಿ ಮದ್ದುಮಾಡದೆ ಬರಿಯ ಬೂದಿ ವಿಭೂತಿಗಳನ್ನೇ ಹಚ್ಚಿಕೊಂಡು ಪ್ರಾಣ ತೆಗೆದುಕೊಳ್ಳುತ್ತಿದ್ದಾರೆ....."

"ಏನಯ್ಯ, ನಿನ್ನ ತಂದೆ ಎಷ್ಟು ಗೌರವದಿಂದ ನಡೆದುಕೊಳ್ಳುತ್ತಿದ್ದನು? ಅವನಿಗೆ ದೇವರಲ್ಲಿ ಎಷ್ಟು ಭಯ, ಭಕ್ತಿ! ನೀನು ಚಿಕ್ಕವನಾಗಿದ್ದಾಗ ನಾನೇ ಎಷ್ಟು ಸಾರಿ ಚೀಟಿ ವಿಭೂತಿ ಕೊಟ್ಟಿದ್ದೇನೆ!....."ಎಂದು ಜೋಯಿಸರು ಹಳೆಯ ಕಥೆಗಳನ್ನೆಲ್ಲ ಹೇಳಿದರು.

"ಜೋಯಿಸರೇ, ದಯವಿಟ್ಟು ಕ್ಷಮಿಸಿ, ನಾನು ಮಾತಾಡಿದ್ದು ನಿಮ್ಮ ಮೇಲೆ ಅಗೌರವ ದಿಂದಲ್ಲ, ನಿಮ್ಮ ತತ್ವಗಳಿಂದ ಜನರಿಗೆ ಎಷ್ಟು ಹಾನಿಯಾಗುತ್ತದೆ ಎಂದು ಹೇಳಿದನಷ್ಟೆ! ನಿಮ್ಮ ಮನಸ್ಸಿನಲ್ಲಿ ಕೃತ್ರಿಮತೆ ಇಲ್ಲದ ಮಾತ್ರಕ್ಕೆ ನೀವು ಹೇಳುವುದೆಲ್ಲ ಸತ್ಯವಾಗ ಲಾರದು.....ನಮ್ಮ ತಂದೆ ಶ್ಲೇಷ್ಮ ಜ್ವರದಿಂದ ನರಳುತ್ತಿದ್ದಾಗ ನಿಮ್ಮ ಪೂಜೆ, ಮಂತ್ರ, ತಂತ್ರಗಳಿಗೋಸ್ಕರವಾಗಿಯಲ್ಲವೇ ಅವರು ಅಂಗಳಕ್ಕಿಳಿದು ಬಂದು ತುಲಸೀಪೀಠದ ಮುಂದೆ ಕುಳಿತು, ತಣ್ಣೀರು ತಂಗಾಳಿಗಳ ಸೋಂಕಾಗಿ, ರೋಗ ಮತ್ತೂ ವಿಷಮವಾಗಿ, ಕಡೆಗೆ ತೀರಿಕೊಂಡದ್ದು! ನಿವೇನೋ ಸದುದ್ದೇಶದಿಂದಲೇ ಆ ಕೆಲಸ ಮಾಡಿದಿರಿ....... ಆದರೆ ಸದುದ್ದೇಶ ಅಜ್ಞಾನವನ್ನು ಸುಜ್ಞಾನವನ್ನಾಗಿ ಮಾಡಲಾರದು....." [೮]

ಹಳ್ಳಿಗರಲ್ಲಿ ಮೌಢ್ಯವನ್ನು ಬಿತ್ತುವುದರಿಂದಲೇ ಜೀವನವನ್ನು ಸಾಗಿಸುತ್ತಿದ್ದ ವೆಂಕಪ್ಪಜೋಯಿಸರಂತವರ ಬದುಕಿಗೆ ಹೂವಯ್ಯನ ಆಧುನಿಕ ವಿಚಾರಧಾರೆ ಅಡ್ಡಿಯಾಗುವುದನ್ನು ವೆಂಕಪ್ಪಜೋಯಿಸರು ಸಹಿಸಲಾರದ್ದನ್ನು ಇಲ್ಲಿ ಕಾಣುತ್ತೇವೆ. ಭಗವದ್ಗೀತೆ, ಉಪನಿಷತ್ತುಗಳ ಮೂಲ ಮಾನವೀಯ ನೆಲೆಗಳನ್ನು ಸಾಮಾನ್ಯರಿಗೆ ಮನದಟ್ಟು ಮಾಡಿಸುವುದರ ಮೂಲಕ ಪುರೋಹಿತಶಾಹಿಯ ಹುನ್ನಾರಗಳನ್ನು ಬಯಲಿಗೆಳೆಯಲು ಯತ್ನಿಸಿದ ಹೂವಯ್ಯನನ್ನು ವೆಂಕಪ್ಪಜೋಯಿಸರು ತೀವ್ರವಾಗಿಯೇ ವಿರೋಧಿಸುತ್ತಾರೆ. ಟ್ರಂಕು ತಗುಲಿ ಬೆನ್ನು ನೋವಾಗಿದ್ದಕ್ಕೆ ಮಂತ್ರ ತಂತ್ರಗಳಿಂದ ವಾಸಿಮಾಡಲು ಯತ್ನಿಸುವ ವೆಂಕಪ್ಪಜೋಯಿಸರನ್ನು, ಆ ಮೂಲಕ ಹೊಟ್ಟೆ ಹೊರೆದುಕೊಳ್ಳುವ ವೈದಿಕವರ್ಗದ ಚಾಣಾಕ್ಷತೆಯನ್ನು ಹೂವಯ್ಯ ಅನೇಕ ವೈಜ್ಞಾನಿಕ, ವೈಚಾರಿಕ ಉದಾಹರಣೆಗಳಿಂದ ಪ್ರಶ್ನಿಸುತ್ತಾನೆ. ಬೆನ್ನುನೋವಿಗಾಗಿ ಹೂವಯ್ಯನಿಗೆ ಮಂತ್ರ ಮಾಡಲು, ತಾಯಿತ ಕಟ್ಟಲು,

ಪೂಜೆಮಾಡಿಸಲು, ಗ್ರಹಗತಿಯನ್ನು ಸರಿಮಾಡಲು ಮುಂದಾಗುವ ಜೋಯಿಸರ ಅವೈಜ್ಞಾನಿಕತೆಯನ್ನು ಪ್ರಶ್ನಿಸುತ್ತಾ, ಅವೈಜ್ಞಾನಿಕತೆ ದುರುದ್ದೇಶದಿಂದ ಅಲ್ಲದಿದ್ದರೂ ಸದುದ್ದೇಶದಿಂದ ಅಜ್ಞಾನವನ್ನು ಸುಜ್ಞಾನವನ್ನಾಗಿ ಮಾಡಲಾರದೆಂಬ ತನ್ನ ಕೌಟುಂಬಿಕ, ಪಾರಂಪರಿಕ ಪುರೋಹಿತರ ಬಗೆಗಿನ ಭಕ್ತಿ ಗೌರವಗಳನ್ನು ಗೌರವಿಸುತ್ತಲೇ ಪುರೋಹಿತಶಾಹಿಯ ಗೊಡ್ಡು ಆಚರಣೆಗಳನ್ನು ಟೀಕಿಸುವ ಹೂವಯ್ಯನ ಈ ಮಾತುಗಳಲ್ಲಿ ವೈದಿಕವರ್ಗದ ಮೌಢ್ಯತೆಯ ಬಗೆಗೆ ಪ್ರತಿರೋಧವನ್ನೇ ಕಾಣುತ್ತೇವೆ.

ಇಂಥ ಸಂಘರ್ಷಗಳಿಂದ ಎದುರಾಗುವ ಹೂವಯ್ಯ ಮತ್ತು ವೆಂಕಪ್ಪಜೋಯಿಸರ ನಡುವಿನ ಸಂಘರ್ಷ ಕಾನೂರು ಮನೆಯಲ್ಲಿ ನಡೆದಿದ್ದ ಮತ್ತು ನಡೆಯುತ್ತಿದ್ದ ಎಲ್ಲಾ ಅನರ್ಥಗಳಿಗೂ, ಸೀತೆ ಹೂವಯ್ಯ ರಾಮಯ್ಯರ ಬದುಕಿನ ದುರಂತಕ್ಕೂ ಕಾರಣವಾಗುವುದನ್ನು 'ಕಾನೂರು ಹೆಗ್ಗಡಿತಿ' ಕಾದಂಬರಿ ಸೂಕ್ಷ್ಮವಾಗಿ ಚಿಂತಿಸುತ್ತದೆ. ಭಗವದ್ಗೀತೆಯ ಮಹೋನ್ನತ ದಿವ್ಯದರ್ಶನಗಳು ಆರ್ಯಧರ್ಮದ ಆದರ್ಶ ಬದುಕುಗಳಿಗೂ, ಮಲೆನಾಡಿನ ಮೌಢ್ಯ ಕ್ರಿಯಾಚರಣೆಗಳಿಗೂ ಇರುವ ಅಂತರಗಳನ್ನು ಹೂವಯ್ಯನ ಸಂವೇದನೆ ಚಿಂತಿಸುವುದನ್ನು 'ಹೆಗ್ಗಡಿತಿ' ಕಥನದಲ್ಲಿ ಕಾಣುತ್ತೇವೆ. ಇಂಥ ಚಿಂತನೆಯಲ್ಲಿ ಅನೇಕ ಅಸಾಂಗತ್ಯಗಳ ವಿರುದ್ಧ ರೂಪುಗೊಳ್ಳುವ ಪ್ರತಿಭಟನೆಯ ಸಾಂಸ್ಕೃತಿಕ ವಾಗ್ವಾದವೊಂದು ಏರ್ಪಡುತ್ತಿರುವುದನ್ನು 'ಕಾನೂರಿನಲ್ಲಿ ದೆಯ್ಯದ ಹರಕೆ' ಮೊದಲಾದ ಭಾಗಗಳಲ್ಲಿ ಎದುರಾಗುವುದನ್ನು ಕಾಣುತ್ತೇವೆ. ದೆಯ್ಯದ ಹರಕೆಯಂತಹ ಮೂಢ, ಅರ್ಥಹೀನ ಆಚಾರದಲ್ಲಿ ಮಗ್ನರಾಗಿರುವ ಜನರನ್ನು ಕಂಡ ಹೂವಯ್ಯ ಗೀತಶಾಸ್ತ್ರದ ಉದಾತ್ತ ತತ್ವಗಳನ್ನು ಚಿಂತಿಸುತ್ತಾನೆ. ಆತ ಆರ್ಯ ಧರ್ಮದ ಉತ್ತಮ, ಆದರ್ಶಗಳ ಬಗ್ಗೆ, ಹಿಂದೂಗಳು ಮಾಡುವ ಕಾರ್ಯಕಲಾಪಗಳ ಬಗ್ಗೆ, ಉಪನಿಷತ್ ಭಗವದ್ಗೀತೆಯ ದರ್ಶನದ ಬಗ್ಗೆ ಪ್ರಶ್ನಿಸುತ್ತಾನೆ. ಪಾದ್ರಿಗಳು ಹಿಂದೂ ಧರ್ಮದ ಬಗ್ಗೆ ಮಾಡುವ ಖಂಡನೆಯು ಸತ್ಯಕ್ಕೆ ಹತ್ತಿರವಾದುದೆಂದು ತಿಳಿಯುತ್ತಾನೆ. ಹೂವಯ್ಯನ ಈ ತಾತ್ವಿಕ ವಿಚಾರ ಮಂಥನದ ಬಗ್ಗೆ ರಾಜಾರಾಮ ಹೆಗಡೆಯವರು ಪಡುವ ಅಭಿಪ್ರಾಯವು ಸೂಕ್ತವಾಗಿದೆ.

"ಇಲ್ಲಿ ಪರಕೀಯ ಕ್ರಿಶ್ಚಿಯನ್ ಪಾದ್ರಿಗಳು ವರ್ತಮಾನದ ಹಿಂದೂ ಧರ್ಮದ ಆಚರಣೆಗಳನ್ನು ಖಂಡಿಸುವುದು ಸರಿ ಎಂದು ಒಪ್ಪಿಕೊಳ್ಳಲಾಗಿದೆ. ಆದರೆ ಈ ತಪ್ಪು ಹಿಂದೂ ಧರ್ಮದ ಸುಪ್ತಾವಸ್ಥೆ. ಪಾದ್ರಿಗಳು ದೂಷಿಸುತ್ತಿರುವ ಹಿಂದೂ ರಾಷ್ಟ್ರೀಯತೆ ಪಾದ್ರಿಗಳ ಪ್ರಹಾರಕ್ಕೆ ನಿಲುಕದ ಮಹೋನ್ನತ ಸನಾತನ ಧರ್ಮವನ್ನು ಕಲ್ಪಿಸುತ್ತದೆ ಹಾಗೂ ಅಲ್ಲಿಂದ ಸ್ಫೂರ್ತಿಯನ್ನು ಪಡೆಯುತ್ತದೆ. ಈ ಸಂದರ್ಭದಲ್ಲಿ ಭಾರತೀಯ ದೇವತಾರಾಧನೆಯನ್ನು ಶ್ರೇಣೀಕರಣ ಮಾಡುವ ಭಗವದ್ಗೀತೆಯ ಶ್ಲೋಕಗಳನ್ನು ಉದಾಹರಿಸಲಾಗಿದೆ. ಭೂತಗಳನ್ನು ಪೂಜಿಸುವವರು ಭೂತ ಪ್ರೇತಗಳೇ ಆಗುತ್ತಾರೆ ಎಂದು ಭೂತಾರಾಧನೆಯನ್ನು ಭಗವದ್ಗೀತೆಯೂ ಸನಾತನ ಆರ್ಯಧರ್ಮವೂ ಕೀಳಾಗಿ ನೋಡುತ್ತದೆ. ಹೀಗೆ ವರ್ತಮಾನದಲ್ಲಿ ಬೆಳೆದುಕೊಂಡ ಮೂಢಾಚಾರಗಳನ್ನು ಸನಾತನ ಹಿಂದೂ ಧರ್ಮ ಕೂಡ ಸರಿ ಎಂದು ಪ್ರತಿಪಾದಿಸುವುದಿಲ್ಲ. ಭಾರತೀಯ ಸುಧಾರಣಾವಾದಿಗಳು ವಸಾಹತುಶಾಹಿಯ ಎದುರಿನಲ್ಲಿ ತಮ್ಮ ಸಮಾಜದ ನ್ಯೂನತೆಗಳನ್ನು ತಿದ್ದುವಾಗ ಭಾರತೀಯ ಸಂಪ್ರದಾಯದಿಂದಲೇ ತಮ್ಮ ನಿಲುವನ್ನು ಸಮರ್ಥಿಸಿ ರಾಷ್ಟ್ರೀಯತೆಯ ಮೂಲಕವೇ ಅಂಥ ಬದಲಾವಣೆಗಳನ್ನು ಲೆಜಿಟಿಮೈಸ್ ಮಾಡುತ್ತಾರೆ."[೯]

ನಮ್ಮ ಸಂಸ್ಕೃತಿಯ ಜೀವಂತ ಹಾಗೂ ಮೃತಾವಸ್ಥೆಯ ಸ್ವರೂಪವನ್ನು 'ಬಲೀಂದ್ರನ ಬಲಿಯ ಪ್ರಸಂಗ' ಮತ್ತು 'ಸೀತೆಗೆ ಬರೆ ಹಾಕುವ ಪ್ರಸಂಗ'ಗಳಲ್ಲಿಯೂ ಕಾಣಬಹುದು. ನಮ್ಮ ಸಂಸ್ಕೃತಿಯಲ್ಲಿ ದೈವ ಸ್ವರ್ಗ ನರಕ ಮುಂತಾದ ಧಾರ್ಮಿಕ ನಂಬಿಕೆಗಳಂತಹ ಪರಿಕಲ್ಪನೆಗಳು ಪ್ರವೃತ್ತವಾಗಿದ್ದ ಇಂತಹ ಅನೇಕ ಅಮಾನವೀಯ ನೆಲೆಗಳನ್ನು ಕುವೆಂಪು ಸಂವೇದನೆಯು ಪ್ರಶ್ನಿಸುವುದನ್ನು ಕಾದಂಬರಿಯಲ್ಲಿ ಗುರುತಿಸಬಹುದು.

'ಕಾನೂರು ಹೆಗ್ಗಡಿತಿ'ಯ ಹೂವಯ್ಯ ಹಿಂದೂ ಧರ್ಮದ ವೇದಾಂತದರ್ಶನಕ್ಕಿಂತ ಬುದ್ಧನ ವಿಚಾರದಾರೆಗೆ ಆಕರ್ಷಿತನಾಗುತ್ತಿರುವುದನ್ನು 'ಕಾನೂರಿ'ನ ಕಥನ ಸ್ಪಷ್ಟಪಡಿಸುತ್ತದೆ. ವೆಂಕಪ್ಪಯ್ಯನ ವಿರೋಧದಿಂದ ನಿರ್ಮಾಣವಾಗಿರುವ ಅಡ್ಡಿ ಆತಂಕಗಳು, ತನ್ನ ಕುಟುಂಬದ ವಿಘಟನೆ ಮತ್ತು ಸೀತೆಯ ಜೊತೆಗಿನ ಅನುರಾಗದ ಮದುವೆಯು ಮುರಿದು ಬಿದ್ದ ಘಟನೆ - ಹೀಗೆ ಹಲವಾರು ಕಾರಣಗಳಿಂದ ಹೂವಯ್ಯನಲ್ಲಿ ಲೌಕಿಕ ಬದುಕಿನ ಬಗೆಗೆ ನಿರಾಶಾಭಾವ ಪ್ರಬಲವಾಗಿ ಬುದ್ಧನ ಧ್ಯೇಯ ಧೋರಣೆಗಳಿಗೆ ಆಕರ್ಷಿತನಾಗುವ ಪ್ರಕ್ರಿಯೆಯಲ್ಲಿ, ಆ ಮುಖೇನ ಸಾಮಾಜಿಕ ಸೇವೆಗೆ ತೊಡಗಬೇಕೆಂಬ ಧ್ಯೇಯ ಧೋರಣೆಗಳಲ್ಲಿ, ವೈದಿಕ ಮತ್ತು ಜಮೀನ್ದಾರಿ ವ್ಯವಸ್ಥೆಯ ಬಗೆಗೆ ಪ್ರತಿರೋಧ ಪ್ರಕಟಗೊಳ್ಳುವುದನ್ನು ಕಾಣಬಹುದಾಗಿದೆ. ಕಾದಂಬರಿಯ ಹತ್ತು ವರ್ಷಗಳಾದ ಮೇಲೆ ಶೀರ್ಷಿಕೆ ಅಡಿಯ ದೀರ್ಘವಾದ ಕಥನ ಮಲೆನಾಡಿಗೆ ಆಧುನಿಕತೆಯು ಪ್ರವೇಶಿಸಿದ್ದನ್ನು ಅಂಥ ಆಧುನಿಕತೆಯ ಪ್ರವೇಶದಿಂದ ಮಲೆನಾಡಿಗೆ ನವಜೀವನ ಕಾಲಿಡುತ್ತಿರುವುದನ್ನು ಪರಿಚಯಿಸುತ್ತದೆ. ಹಾಗೆಯೇ ಶ್ರೀಸಾಮಾನ್ಯ, ಪುರಷ ಮತ್ತು ಮಹಿಳೆಯರಿಗೆ ಅಂತ ಆಧುನಿಕತೆಯ ಪ್ರಭಾವದಿಂದ ಗೌರವಗಳು ಪ್ರಾಪ್ತವಾಗುತ್ತಿರುವುದನ್ನು ಕಾಣಿಸುತ್ತದೆ. ಹಳೆಯ ಅನೇಕ ದುರಂತಗಳಿಗೆ ಕಾರಣವಾಗುತ್ತಿದ್ದ ಕಳ್ಳಂಗಡಿಯಂತಹ ಕುಕುರ್ತ್ಯಗಳ ಜಾಗಗಳು ಪ್ರಾಧಾನ್ಯತೆ ಕಳೆದುಕೊಳ್ಳುತ್ತಿರುವುದು, ಆಧುನಿಕ ಅನುಕೂಲಗಳಾದ ಆಸ್ಪತ್ರೆ, ಸ್ಕೂಲ್, ಪೋಸ್ಟ್ ಆಫೀಸ್, ಅಂಗಡಿಗಳು ಅಧಿಕವಾಗುತ್ತಿರುವುದರ ಮುನ್ಸೂಚನೆಗಳು ಇಲ್ಲಿದೆ. ಇಡೀ ರಾಷ್ಟ್ರದಾದ್ಯಂತ ಬುಗಿಲೆದ್ದಿರುವ ರಾಷ್ಟ್ರೀಯ ಚಳುವಳಿಯ ಪ್ರಭಾವ ಪರಿಣಾಮಗಳಿಂದ, ಪಾರಂಪರಿಕ ಪುರೋಹಿತಶಾಹಿಯ ಮೌಢ್ಯಾಚಾರಗಳಾದ ಮಾರಿಯಹರಕೆ, ದೆವ್ವದ ಪೂಜೆ ಮೊದಲಾದ ಮೂಢ ನಂಬಿಕೆಗಳಿಗೆ ಬದಲಾಗಿ ಮಾನವೀಯ ಮತವಿಧಾನಗಳು ಆಚರಣೆಗೆ ಬಂದು ಮಲೆನಾಡಿಗೂ ನಾಗರೀಕತೆ ಕಾಲಿಡುತ್ತಿರುವುದರೊಂದಿಗೆ ಪಾರಂಪರಿಕವಾಗಿ ಮಲೆನಾಡನ್ನು ಶೋಷಿಸಿದ ವೈದಿಕತನದ ಬಗ್ಗೆ ಒಂದು ಬಗೆಯ ಪ್ರತಿರೋಧ ಕಾಣಿಸುತ್ತಿರುವುದನ್ನು ಇಲ್ಲಿ ಕಾಣುತ್ತೇವೆ. ಕೆಳವರ್ಗಗಳ ಯುವ ಪೀಳಿಗೆ ಅಕ್ಷರಸ್ಥರಾಗುತ್ತಿರುವ ಚಿತ್ರಗಳು ಇಲ್ಲಿವೆ. ಆಧುನಿಕಶಿಕ್ಷಣ ಮತ್ತು ಹೊಸ ವಿಚಾರಧಾರೆಗಳ ಪ್ರವೇಶದಿಂದಾಗಿ ಮಲೆನಾಡಿನ ಮನುಷ್ಯ ಮತ್ತು ಮನುಷ್ಯರ ನಡುವಿನ ಅಂತರಗಳು ಕಡಿಮೆಯಾಗಿ ವೈದಿಕ ಮತ್ತು ಅವೈದಿಕರ ನಡುವೆ ಅಂತರಗಳು ದೂರವಾಗುತ್ತಿರುವುದನ್ನು ಈ ಭಾಗ ಸ್ಪಷ್ಟಪಡಿಸುತ್ತದೆ. ಪುರೋಹಿತಶಾಹಿ ಸಂಸ್ಕೃತಿ ಸಾವಿರಾರು ವರ್ಷಗಳಿಂದ ಅವೈದಿಕರ ಮೇಲೆ ಹೇರಿದ ಅಜ್ಞಾನ ಮತ್ತು ಮೌಢ್ಯಗಳಿಂದ ಮುಕ್ತಿ ಪಡೆಯಲು ಮಲೆನಾಡಿಗೆ ಪ್ರವೇಶಿಸಿದ ಆಧುನಿಕತೆಯ ನವಜೀವನದ ಸಂಕ್ರಾಂತಿ ಪ್ರವೇಶಿಸುತ್ತಿರುವುದನ್ನು ಕಾಣುತ್ತೇವೆ. ಇಂಥ ಪಾರಂಪರಿಕ ಮೌಢ್ಯಗಳಿಂದ ಪಾರುಮಾಡಿಸಲು ಶ್ರಮಿಸಿದ ಬುದ್ಧದೇವನ ವಿಚಾರಧಾರೆಯನ್ನು ಮುಖ್ಯ ಚಿಂತನೆಯಾಗಿ ಮುಂದು ಮಾಡುವುದರ ಮೂಲಕ ವೈದಿಕತೆಗೆ ಒಂದು ಬಗೆಯ ಪ್ರತಿರೋಧ ತೋರುವುದನ್ನು ಕುವೆಂಪು ಅವರ ಕಥನಗಳಲ್ಲಿ ಕಾಣುತ್ತೇವೆ.

ಪುರೋಹಿತಶಾಹಿ ಹೇರಿದ ಮಿಥ್ಯೆಯ ಮೌಢ್ಯತೆಗೆ ಜ್ಞಾನದ ವಿಜ್ಞಾನದ ಮತಿಖಡ್ಗವನ್ನು ಮುಖಾಮುಖಿಯಾಗಿಸುವುದರಿಂದ ನವಕ್ರಾಂತಿಗೆ ಸನ್ನದ್ಧುಗೊಳಿಸುವ ಕಾದಂಬರಿಯ ಕೊನೆಯ ಕವನದ ಸಾಲುಗಳು ಪುರೋಹಿತಶಾಹಿಯ ಕಬಂಧಗಳಿಂದ ಬಿಡುಗಡೆ ಪಡೆಯ ಬಯಸುವ ಅಭೀಪ್ಸೆಯೇ ಆಗಿದೆ. ಆದರೂ ಪುರೋಹಿತಶಾಹಿಯ ಬಗೆಗೆ ನಿರಂತರವಾಗಿ ಪ್ರತಿರೋಧ ತೋರಿದ ಬುದ್ಧ ಬಸವ ಮೊದಲಾದವರ ಕ್ರಾಂತಿಗಳನ್ನು ಹಿಮ್ಮೆಟ್ಟಿಸಿ ತನ್ನ ಪ್ರಾಬಲ್ಯವನ್ನು ಮತ್ತೆ ಮತ್ತೆ ಪ್ರಬಲಗೊಳಿಸುವ ಪುರೋಹಿತಶಾಹಿಯ ಲಕ್ಷಣಗಳನ್ನು ಕುವೆಂಪುರವರು ವಿವೇಕಾನಂದರ ಭಾಷಣದಿಂದ ಆಯ್ದ ಕೆಲವು ಮಾತುಗಳನ್ನು, ಕೆಲವು ವಿಚಾರಗಳನ್ನು ಈ ಕೆಳಕಂಡಂತೆ ಉದ್ಧರಿಸಿರುವುದನ್ನು ಇಲ್ಲಿ ಮತ್ತೆ ಚಿಂತನೆಗಾಗಿ ಎತ್ತಿಕೊಳ್ಳುವುದು ಅಪ್ರಸ್ತುತವಾಗಲಾರದು. ಇಂದಿನ ಅಂದರೆ ಪ್ರಸ್ತುತ ಜಾಗತೀಕರಣ ಹಾಗೂ ಮಾಹಿತಿ - ತಂತ್ರಜ್ಞಾನಗಳ ಕಾಲದಲ್ಲಿಯೂ ಪುರೋಹಿತವರ್ಗ ತನ್ನ ಮೂಲಭೂತವಾದಿತನಗಳಿಂದ ನಿರ್ಮಾಣಮಾಡುತ್ತಿರುವ ಹಿಂಸೆಯ ಈ ಸಂದರ್ಭದಲ್ಲಿಯೂ ಈ ಕೆಳಗಿನ ಉದ್ಧರಣೆ ಮತ್ತಷ್ಟು ಅರ್ಥಪೂರ್ಣವಾಗಿರುವುದನ್ನು ಕಾಣುತ್ತೇವೆ.

> "ಅದನ್ನೇ ಕುರಿತು ಸ್ವಾಮಿ ವಿವೇಕಾನಂದರು ಒಂದು ಭಾಷಣದಲ್ಲಿ ಪುರೋಹಿತ ವರ್ಗವನ್ನು ಹೀಗೆ ಖಂಡಿಸಿದ್ದಾರೆ:
>
> "ಶೂದ್ರ ಸಮಾಜವನ್ನು ತನ್ನ ಕಬ್ಬಿಣದ ಕರಾಳ ಮುಷ್ಟಿಯ ಸಹಸ್ರ ಪಾಶಗಳಿಂದ ಬಿಗಿದು ಬಂಧಿಸಿಟ್ಟುಕೊಳ್ಳುವ ಉದ್ದೇಶದಿಂದ, ದೇಹ ಮತ್ತು ಮನಸ್ಸಿನ ಶುದ್ಧೀಕರಣದ ಬಾಹ್ಯ ಸಾಧನಗಳೆಂಬ ನೆವದಲ್ಲಿ ತನ್ನ ಸುತ್ತಲೂ ಸುತ್ತಿಕೊಂಡ ಅನಂತ ಸಂಖ್ಯೆಯ ಕರ್ಮ, ಕ್ರಿಯೆ ಮತ್ತು ಆಚಾರಸಮೂಹ ರೂಪದ ಕೊನೆಗಾಣದ ಕಣ್ಣಿಯ ಬಲೆಯಲ್ಲಿ ಸಿಕ್ಕಿಕೊಂಡು, ಪುರೋಹಿತಶಾಹಿ, ಉದ್ಧಾರದ ಆಶಾಲವಲೇಶವಿಲ್ಲದೆ, ಅಪಾದಮಸ್ತಕ ಗೋಜು ಬಿಗಿದುಕೊಂಡು, ಈಗ ಸುಸ್ತಾಗಿ, ಸಂಪೂರ್ಣ ಹತಾಶವಾಗಿ, ಮೃತಪಾಯವಾಗಿ ಪತಿತವಾಗಿ ನಿದ್ದೆಹೋಗುತ್ತಿದೆ. ಈಗ ಆ ಬಲೆಯಿಂದ ಅದಕ್ಕೆ ಬಿಡುಗಡೆಯೆ ಇಲ್ಲವಾಗಿದೆ. ಆ ಬಲೆಯನ್ನೇನಾದರೂ ಹರಿದರೆ ಸಾಕು, ಆ ಪುರೋಹಿತ ಪುರೋಹಿತಶಾಹಿ ಬುಡಮುಟ್ಟ ಅಲ್ಲಾಡಿ ಹೋಗುತ್ತದೆ!....."
>
> ◆ ◆ ◆
>
> "ಪ್ರತಿಯೊಬ್ಬ ಮಾನವನಲ್ಲಿಯೂ ಪ್ರಗತಿಯ ಆಕಾಂಕ್ಷೆ ಸ್ವಾಭಾವಿಕವಾಗಿಯೆ ಬೇರೂರಿರುತ್ತದೆ....."
>
> "ಭರತಖಂಡದ ಪತನಕ್ಕೆ ಮುಖ್ಯ ಕಾರಣವೆಂದರೆ, ರಾಜವರ್ಗದವರ ಮತ್ತು ಪುರೋಹಿತವರ್ಗದವರ ಅಧಿಕಾರ ಬಲದಿಂದ ವಿದ್ಯಾ ಬುದ್ಧಿಗಳ ಸರ್ವ ಸ್ವಾಮ್ಯವೂ ಅತ್ಯಲ್ಪ ಸಂಖ್ಯೆಯ ಕೆಲವೇ ಕೆಲವು ಬ್ರಾಹ್ಮಣರ ಹಸ್ತಗತವಾದದ್ದು.
>
> ◆ ◆ ◆

"ಪುರೋಹಿತ ವರ್ಗದ ಪತನಕ್ಕೆ ಯಾವನಾದರೊಬ್ಬ ವ್ಯಕ್ತಿಯ ಅಥವಾ ಯಾವುದಾದರೂ ಒಂದು ಗುಂಪಿನ ಹೊಣೆ ಹೊರಿಸುವ ಯಾರೇ ಆಗಲಿ ತಿಳಿಯಬೇಕು, ಕರ್ಮತತ್ತ್ವದ ಅನಿವಾರ್ಯ ನಿಯತಿಗೆ ವಿಧೇಯವಾಗಿ, ಬ್ರಾಹ್ಮಣ ಜಾತಿ ತನ್ನ ಗೋರಿಯನ್ನು ತಾನೆ ತನ್ನ ಕೈಯಿಂದಲೆ ಕಟ್ಟಿಕೊಳ್ಳುತ್ತಿದೆ ಎಂದು ಮತ್ತು ಹಾಗಾಗತಕ್ಕದ್ದೆ ಸರಿ ಎಂದೂ, ಉಚ್ಚವರ್ಣದ ಮತ್ತು ಉಚ್ಚವರ್ಗದ ಪ್ರತಿಯೊಂದು ಜಾತಿಯೂ ತನ್ನ ಕೈಯಿಂದಲೇ ತನ್ನ ಸ್ಮಶಾನಚಿತೆಯನ್ನು ರಚಿಸಿಕೊಳ್ಳುವುದು ಅದರ ಪ್ರಧಾನ ಕರ್ತವ್ಯವೆ ಆಗಬೇಕಾಗುತ್ತದೆ!" [೧೦]

ಪುರೋಹಿತಶಾಹಿಯ ಮೂಲಭೂತವಾದಿ ನೆಲೆಗಳಿಗೆ ಮುಖಾಮುಖಿಯಾಗುವುದು, ಅದನ್ನು ನಿರ್ನಾಮ ಮಾಡುತ್ತೇನೆಂದು ಬೀಗುವುದು ಅಷ್ಟು ಸುಲಭವಲ್ಲವೆಂದು ಕುವೆಂಪು ಸಂವೇದನೆ ಎಚ್ಚರಿಸುತ್ತದೆ. ಪುರೋಹಿತಶಾಹಿಯು ಹುಲಿ ಇದ್ದಂತೆ ಅದನ್ನು ಹೊಡೆಯುವುದು ಹುಡುಗಾಟದ ಕೆಲಸವಲ್ಲ. ಅದನ್ನು ಹೊಡೆಯಬೇಕಾದರೆ ಪ್ರಬಲವಾದ ಅಸ್ತ್ರಗಳನ್ನೇ ಸಿದ್ದಪಡಿಸಿಕೊಳ್ಳಬೇಕು. ಆ ಅಸ್ತ್ರಗಳ ಮೊದಲ ಏಟು ತಗಲಬೇಕಾದ್ದು ಪುರೋಹಿತಶಾಹಿ ಎಂಬ ಹುಲಿಗಲ್ಲ, ಆ ಪುರೋಹಿತಶಾಹಿ ನಿರ್ಮಾಣ ಮಾಡಿರುವ ಅಜ್ಞಾನದ 'ಇಲ್ಲಣ' ತುಂಬಿರುವ ನಮ್ಮ ತಲೆಗೆ ಎಂಬುದನ್ನು ಕುವೆಂಪು ಸೂಚಿಸುತ್ತಾರೆ. ಕುವೆಂಪು ಅವರ ಎರಡು ಕಾದಂಬರಿಗಳಲ್ಲಿನ ಸಂವಾದಗಳಲ್ಲಿ ಬರುವ ವೈಚಾರಿಕ ಗೊಂದಲಗಳು ಇರಬಾರದೆಂಬ ಕಾರಣಕ್ಕಾಗಿ ಸ್ವತಃ ಕುವೆಂಪು ಸಂವೇದನೆ ನಿರೂಪಕನ ನೆಲೆಯಲ್ಲಿ ನಿಂತು ತುಂಬಾ ಎಚ್ಚರಿಕೆಯಿಂದ ಅಂಥ ವಿಚಾರಗಳನ್ನು, ಅರ್ಥಗಳನ್ನು ಸ್ಪಷ್ಟಪಡಿಸುತ್ತದೆ. ಆದರೆ ಈ ಪ್ರತಿಕ್ರಿಯೆಯನ್ನು ಕಾದಂಬರಿಯ ದೋಷವೆಂದು ಕೆಲವರು ಗುರುತಿಸಿರುವುದನ್ನು ಕಾಣುತ್ತೇವೆ. ಆದರೆ ಕಥನದ ಅಸಂಖ್ಯ ಧ್ಯೇಯೋದ್ದೇಶಗಳು ಅಸ್ಪಷ್ಟ ಹಾಗೂ ಗೊಂದಲಗಳಿಗೆ ಗುರಿಯಾಗದೆ ಓದುಗನಿಗೆ ಲೇಖಕನ ಉದ್ದೇಶ, ಆಶಯ ಮತ್ತು ಧೋರಣೆ ತೀವ್ರವಾಗಿ, ಸ್ಪಷ್ಟವಾಗಿ ತಲುಪಬೇಕೆಂಬ ಆಕಾಂಕ್ಷೆ ಈ 'ಹೆಗ್ಗಡಿತಿ' ಮತ್ತು 'ಮದುಮಗಳು' ಕಾದಂಬರಿಗಳ ಹಿಂದಿದೆ.



# ಅಡಿಟಿಪ್ಪಣಿ

೧. ಕುವೆಂಪು, ವಿಚಾರ ಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೪೦ - ೪೨

೨. ಕುವೆಂಪು, ಪ್ರೇತ - ಕ್ಯೂ, ಉದಯರವಿ ಪ್ರಕಾಶನ, ಮೈಸೂರು, ೧೯೬೭, ಪು : ೫೦

೩. ಕುವೆಂಪು, ಜಲಗಾರ, ಉದಯರವಿ ಪ್ರಕಾಶನ, ಮೈಸೂರು, ೧೯೮೯, ಪು : ೧೬ - ೧೭

೪. ಕುವೆಂಪು, ಶ್ರೀ ರಾಮಕೃಷ್ಣ ಪರಮಹಂಸ, ಶ್ರೀಕಂಠಯ್ಯ ಬಿ.ಎಂ. (ಪ್ರ.ಸಂ), ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೩೪, ಪು : ೦೦

೫. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೪೨೪, ೪೨೬ - ೪೩೦

೬. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೪೪೧

೭. ಕುವೆಂಪು, ಕಾನೂರು ಹೆಗ್ಗಡತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೬೭

೮. ಕುವೆಂಪು, ಕಾನೂರು ಹೆಗ್ಗಡತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೧೦೩ - ೧೦೪

೯. ರಾಜಾರಾಮ ಹೆಗಡೆ, ಕುವೆಂಪು ಕಾದಂಬರಿಗಳಲ್ಲಿ ವಸಾಹತುಶಾಹಿ ಅನುಭವದ ಸ್ವರೂಪ, ಸಾಹಿತ್ಯ ವಿಮರ್ಶೆ - ೧೯೯೪ (ಸಂ) ಹೆಗಡೆ ಎಂ.ಜಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬, ಪು : ೪೯ - ೫೦

೧೦. ಕುವೆಂಪು, ವಿಚಾರಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೫೯ - ೬೦



ಅಧ್ಯಾಯ ೫

# ಕುವೆಂಪು ಕಥನ :
# ಮದುವೆ - ಕುಟುಂಬ - ದಾಂಪತ್ಯದ ಜಿಜ್ಞಾಸೆ

೩

# ಕುವೆಂಪು ಕಥನ : ಮದುವೆ - ಕುಟುಂಬ - ದಾಂಪತ್ಯದ ಜಿಜ್ಞಾಸೆ

ಕುವೆಂಪುರವರ ದೈತ್ಯಕಥನಗಳಾದ 'ಮದುಮಗಳು' ಮತ್ತು 'ಹೆಗ್ಗಡಿತಿ' ಎಂಬ ಶೀರ್ಷಿಕೆಗಳೇ ಮದುವೆ, ಕೌಟುಂಬಿಕ ಪರಿಸರವನ್ನು ನೆನಪಿಸುವ ರೂಪಕಗಳಾಗಿವೆ. ಈ ಶೀರ್ಷಿಕೆಗಳು ಮೇಲ್ನೋಟಕ್ಕೆ ಯಾವುದೋ ಒಂದು ನಿರ್ದಿಷ್ಟ ಪಾತ್ರಕ್ಕೆ ಅನ್ವಯಿಸುವಂತೆ ಕಂಡರು ಈ ಕಥನಗಳ ಅಸಂಖ್ಯ ಪಾತ್ರಗಳ ಹಿನ್ನೆಲೆಯಲ್ಲಿ ಈ ಶೀರ್ಷಿಕೆಗಳು ಸಾಂಕೇತಿಕಗೊಳ್ಳುವುದು ಮಾರ್ಮಿಕವಾಗಿದೆ. ಈ ಕಥನಗಳು ಪ್ರಕಟಿಸುವ ಒಂದೊಂದು ಅರ್ಥಪರಂಪರೆಯೂ ಒಂದೊಂದು ಸಂಪ್ರಬಂಧಗಳಿಗೆ ವಸ್ತುವಾಗಬಲ್ಲಷ್ಟು ವಸ್ತುವನ್ನು ಹೊಂದಿವೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ಪುರೋಹಿತಶಾಹಿಸಂಸ್ಕೃತಿ, ವಸಾಹತುಶಾಹಿಸಂಸ್ಕೃತಿ, ಶಿಕ್ಷಣ, ಆಧುನಿಕತೆ, ಮದುವೆ, ಪುರುಷ ಮತ್ತು ಸ್ತ್ರೀ ಸಂಬಂಧಗಳು, ಕೌಟುಂಬಿಕಪರಿಸರ, ಪರಿಸರದ ಪ್ರಶ್ನೆಗಳು, ರಾಷ್ಟ್ರೀಯತೆ, ಮತಾಂತರ, ಸನಾತನಧರ್ಮ ಮತ್ತು ಆಚರಣೆಗಳು, ಸಮಾಜಶಾಸ್ತ್ರ - ಮಾನವಶಾಸ್ತ್ರ ಮತ್ತು ಮನಶ್ಶಾಸ್ತ್ರೀಯ ಚಿಂತನೆಗಳು - ಹೀಗೆ ಅಸಂಖ್ಯ ಸಂಕಥನಗಳು ಕುವೆಂಪು ಕಥಾಸಾಹಿತ್ಯ ಅಧ್ಯಯನಕ್ಕೆ ವಸ್ತುವಾಗಬಲ್ಲ ಸಂಗತಿಗಳನ್ನು ತನ್ನಲ್ಲಿ ಹುದುಗಿಸಿಕೊಂಡಿವೆ. ಈ ಮೇಲಿನ ಯಾವೊಂದು ವಿಚಾರವನ್ನು ಕುರಿತು ಅಧ್ಯಯನಕ್ಕೆ ತೊಡಗಿದರೂ ಅದೇ ಈ ಕಥನಗಳ ಪ್ರಧಾನ ವಸ್ತು ಅನ್ನಿಸುವಂತೆ ಇನ್ನುಳಿದ ಸಂಗತಿಗಳು ಆ ವಸ್ತುವಿನ ಸುತ್ತ ಪೋಷಕವಾಗುತ್ತಾ, ಸಮರ್ಥನೆಗೆ ಒಳಗಾಗುತ್ತಾ ಅಧ್ಯಯನದ ಮುಖ್ಯ ವಿಚಾರಧಾರೆಯಾಗಿ ಮೈಪಡೆಯುವುದು ಕುವೆಂಪು ಕಥನಗಳ ಅನನ್ಯತೆಯಾಗಿದೆ.

'ಕುವೆಂಪುರವರ ಕಥನ'ಗಳು ಬಾಲ್ಯವಿವಾಹ - ವಿವಾಹ, ಆ ವಿವಾಹದ ಸುತ್ತಾ ರೂಢಿಗತವಾಗಿ ಬೇರುಬಿಟ್ಟಿರುವ ಕ್ರೌರ್ಯಗಳು, ಅಂತಹ ಕ್ರೌರ್ಯಗಳ ನಡುವೆಯೇ ನಿರ್ಮಾಣವಾಗುವ ಕೌಟುಂಬಿಕ ಬದುಕು, ಅಂತಹ ಕೌಟುಂಬಿಕ ಬದುಕಿನ ಅಸಂಖ್ಯ ದುಃಖ ದುಮ್ಮಾನಗಳನ್ನು, ಅಂಥ ದುರಂತಗಳಿಗೆ ಕಾರಣವಾಗುವ ಬಾಹ್ಯ ಮತ್ತು ಆಂತರಿಕ ಧಾರ್ಮಿಕ ಮತ್ತು ಆರ್ಥಿಕ ಸಂಗತಿಗಳು, ಹಾಗೆಯೇ ರೂಢಿಗತ ಮೌಢ್ಯಗಳಿಗೆ ಕಾರಣವಾಗುವ ಬಗೆಯನ್ನು ಒಂದು ಮುಖ್ಯ ಚಿಂತನೆಯಾಗಿ ಅಥವಾ ಒಂದು ಸಂವಾದವಾಗಿ ಶೋಧನೆಗೆ ಗುರಿಪಡಿಸುತ್ತವೆ. ಈ ಅಧ್ಯಾಯದಲ್ಲಿ ಮುಖ್ಯವಾಗಿ ಮದುವೆ, ಕುಟುಂಬ ಮತ್ತು ಅಂಥ ಪರಿಸರದ ಸುತ್ತ ನಿರ್ಮಾಣವಾಗುವ ಅಮಾನವೀಯ ಕ್ರೌರ್ಯಗಳಿಗೆ ಕಾರಣವಾದ

ಅನೇಕ ಸಂಗತಿಗಳು ಯಾವುವು ಎಂಬ ವಿಚಾರವನ್ನು 'ಕುವೆಂಪು ಕಥನ'ಗಳು ಜಿಜ್ಞಾಸೆಗೆ ಗುರಿಪಡಿಸುವ ಮುಖ್ಯ ಧೋರಣೆ ಮತ್ತು ಆಶಯ ಯಾವ ಬಗೆಯದು ಎಂದು ತಿಳಿಯಬಹುದಾಗಿದೆ.

'ಮದುವೆ ಜೀವನದ ಮಹಾಘಟನೆಗಳಲ್ಲಿ ಒಂದು' ಎಂಬುದು ಕುವೆಂಪುರವರ ಗಾಢ ನಂಬಿಕೆ. ಹಾಗೆಯೇ 'ವಿವಾಹವು ಜೀವನದಲ್ಲಿ ಒದಗುವ ಒಂದು ಮುಖ್ಯ ಸಂಧಿಕಾಲವೆಂದು' ಕುವೆಂಪುರವರು ತಿಳಿಯುತ್ತಾರೆ. ಅದೊಂದು ಸಂಭ್ರಮದ ಘಟನೆ - ಸಂದರ್ಭವಾಗಿಯೂ, ಅಂಥ ಘಟನೆ - ಸಂದರ್ಭಗಳಲ್ಲಿ ಪ್ರಜ್ಞಾಪೂರ್ವಕವಾಗಿಯೂ, ಅಪ್ರಜ್ಞಾಪೂರ್ವಕವಾಗಿಯೂ ನಡೆಯುವ ಅಚಾತುರ್ಯಗಳು, ಅವಗಢಗಳು, ದುಂದುಗಾರಿಕೆಗಳು ಮಹಾಪಾಪಗಳೆಂದು ಕುವೆಂಪುರವರ ಸಂವೇದನೆ ತಿಳಿಯಪಡಿಸುತ್ತದೆ. ಮದುವೆಗಳು ಒಂದು ಗಂಡು ಹೆಣ್ಣಿನ ಅನ್ಯೋನ್ಯ ಬದುಕಿಗೆ ಅನುವು ಮಾಡಿಕೊಡುವ ಸಂಗತಿಗಳಾಗಿದ್ದರು, ಮದುವೆಗಳ ಸಂದರ್ಭದಲ್ಲಿ ಪ್ರತಿಷ್ಠೆಗಾಗಿ ಸಾಲಸೋಲಗಳನ್ನು ಮಾಡಿ ಭವಿಷ್ಯತ್ತಿನ ಬದುಕಿಗೆ ದುರಂತವನ್ನು ಆಹ್ವಾನಿಸಿಕೊಳ್ಳುವುದರ ಬಗೆಗೆ ಕುವೆಂಪು ಎಚ್ಚರಿಸುತ್ತಾರೆ:

"ಆದರೆ ವಿವಾಹ ಕಾಲದಲ್ಲಿ ಅತಿ ವ್ಯಯಮಾಡಿ ಸಂಸಾರದ ಸರೋವರದಲ್ಲಿ ಜಲಕ್ರೀಡೆಯಾಡಲೆಂದು ಉಲ್ಲಾಸದಿಂದ ದುಮುಕುವ ಅನುಭವ ಸಾಲದ ನವದಂಪತಿಗಳ ಕೊರಳಿನಲ್ಲಿ ಸಾಲವೆಂಬ ದೊಡ್ಡ ಅರೆಬಂಡೆಯನ್ನು ಕಟ್ಟಿಬಿಟ್ಟರೆ ಏನು ಗತಿ? ಮುಂದಿನ ಭಯಂಕರ ಚಿತ್ರಗಳ ಪರಂಪರೆಯನ್ನು ಊಹಿಸಿಕೊಳ್ಳಿ. ಅತ್ಯಂತ ಭಯಾನಕವೂ ಕರುಣಾಪೂರ್ಣವೂ ರುದ್ರವೂ ಆದ ಹಲವು ಕೋಟಲೆಗಳ ಚಿತ್ರವನ್ನು ಒಂದು ಉಪಮಾನದಲ್ಲಿ ಹೇಳಿದ್ದೇನೆ. ಆ ಉಪಮಾನದ ಪರದೆಯ ಹಿಂದೆ ನೀವೇ ನರಕದರ್ಶನ ಮಾಡಿ, ನನಗೆ ಆ ನರಕ ವರ್ಣನೆ ಮಾಡಲು ಇಷ್ಟವೂ ಇಲ್ಲ. ಈ ಕಾರಣಗಳಿಗಾಗಿ ಮದುವೆ ಮಾಡಿಕೊಳ್ಳುವವರೂ ಮುಂದಿನ ದೃಷ್ಟಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಜಾಗರೂಕತೆಯಿಂದ ವರ್ತಿಸುವುದು ಒಳ್ಳೆಯದು. ಮದುವೆಗೆ ಮದುವೆಯ ಸಂಭ್ರಮವೇ ಗುರಿಯಲ್ಲ; ಮುಂದಿನ ಸುಖ, ಸಮಾಜ ಸೇವೆ ಇತ್ಯಾದಿಗಳು ಅದರ ಗುರಿ. ವಿವಾಹವು ನಡೆಯುವ ಹಾದಿಯೆ ಹೊರತು, ಸೇರುವ ಮನೆಯಲ್ಲ. ಆದ್ದರಿಂದ ಜನರು ವಿವಾಹ ಕಾಲದಲ್ಲಿ ಆಗುವ ದುಂದನ್ನು ಕಡಿಮೆ ಮಾಡಿ, ದಂಪತಿಗಳ ಜೀವನ ಮುಂದೆ ಋಣಭಾರದಿಂದ ಕುಗ್ಗಿ ಪಾತಾಳಗತವಾಗದಂತೆ ನೋಡಿಕೊಳ್ಳಬೇಕು" [೧]

'ಹೆಗ್ಗಡಿತಿ' ಮತ್ತು 'ಮದುಮಗಳು' ಕಾದಂಬರಿಗಳಲ್ಲಿ ಕಾಣುವ ಅನೇಕ ಮದುವೆಗಳು, ಕೌಟುಂಬಿಕ ಹಾಗು ವೈವಾಹಿಕ ವಿಘಟನೆಗಳು ಈ ಮೇಲಿನ ಒಂದಲ್ಲ ಒಂದು ಕಾರಣಕ್ಕಾಗಿ ದುರಂತದ ಕಡೆಗೆ ಮುಖ ಮಾಡಿರುವ ವಿಚಾರಧಾರೆಯನ್ನು, ಆ ವಿಚಾರಧಾರೆಯ ಹಿಂದಿನ ಆಶಯಗಳನ್ನು ಮುಂದೆ ವಿಶ್ಲೇಷಿಸಲಾಗುತ್ತದೆ.

'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಥಾನಕಗಳಲ್ಲಿ ಮದುವೆ - ಕುಟುಂಬ ಕೇಂದ್ರ ವಸ್ತುವಾಗಿ ಚಿಂತಿತವಾಗುವುದನ್ನು ಮೇಲುನೋಟಕ್ಕೆ ಕಾಣಿಸುವ ಸಂಗತಿಯಾಗಿದೆ. ಈ ಎರಡು ಕಾದಂಬರಿಗಳಲ್ಲಿ ತಾವು ಬಯಸಿದ ಹೆಣ್ಣಿಗಾಗಿ ನಿರಂತರವಾಗಿ ತೊಳಲಾಡುವ ಪುರುಷಪಾತ್ರಗಳು ಹಾಗೆಯೇ ತಾನು ಬಯಸಿದ ಗಂಡಿಗಾಗಿ ತೊಳಲಾಡುವ ಸ್ತ್ರೀ ಪಾತ್ರಗಳ ಹೋರಾಟದ ಬದುಕು ಉದ್ದಕ್ಕೂ ಕಾಣಿಸುತ್ತದೆ. ಹಾಗೆಯೇ ತಾನು ಒಲ್ಲದ ಗಂಡಿನ ಜೊತೆ ದಾಂಪತ್ಯ ನಡೆಸಬೇಕಾಗಿ ಬಂದಿರುವ ದುರಂತದ ಕುಟುಂಬಗಳು ಈ ಕಾದಂಬರಿಗಳ ಉದ್ದಕ್ಕೂ ಜಿಜ್ಞಾಸೆಗೆ ಒಳಪಡುತ್ತವೆ. ಲೈಂಗಿಕ ಲಂಪಟತನದಿಂದ ಹಲವು ಗುಹ್ಯರೋಗಗಳಿಗೆ ಗುರಿಯಾಗಿ ವಿಷಮ ದಾಂಪತ್ಯಕ್ಕೆ ಕಾರಣ

ವಾಗಿರುವ ಕುಟುಂಬಗಳಂತೆಯೇ, ಅತ್ಯಂತ ಕಿರಿಯ ವಯಸ್ಸಿನ ಹೆಣ್ಣುಗಳ ಜೊತೆ ದಾಂಪತ್ಯ ಹೂಡಿ ಅ-ಸಾಮರಸ್ಯಗಳಿಂದ ತೊಳಲಾಡುತ್ತಿರುವ ಕೌಟುಂಬಿಕ ಚಿತ್ರಗಳು ಈ ಕಥನಗಳಲ್ಲಿ ಚಿತ್ರಿತವಾಗಿವೆ. ಸೀರುಡಿಕೆ, ಕೂಡಿಕೆಯಂತಹ ವಿವಾಹದ ದಾಂಪತ್ಯಗಳು ಇಲ್ಲಿ ಚಿತ್ರಿತವಾಗಿವೆ.

ದಾಂಪತ್ಯದ ಅನನ್ಯವಾದ ಅನುರಾಗಕ್ಕಾಗಿ ಮತ್ತು ಬದುಕಿನ ಆಶ್ರಯಕ್ಕಾಗಿ ವಯಸ್ಸಾದ ಗಂಡಸು ಹೆಣ್ಣಿಗಾಗಿ 'ತೆರ' ತೆತ್ತು ಸಾಲಸೋಲಗಳಿಗೆ ಒಳಗಾಗಿ ದುರಂತದ ಕಡೆಗೆ ಮುಖಮಾಡಿರುವ ಕುಟುಂಬಗಳು ಇಲ್ಲಿವೆ. ತಮ್ಮ ಮೊದಲ ಪತ್ನಿಗೆ ಹುಟ್ಟಿದ ಮಗ ಮತ್ತು ಮಗಳು ಮದುವೆಯ ವಯಸ್ಸಿಗೆ ಬಂದಿದ್ದರೂ ಅವರ ಮದುವೆಯ ಬಗೆಗೆ ಚಿಂತಿಸದೆ, ತನ್ನ ಸ್ವಾರ್ಥ ಲೋಲುಪತೆ ಮತ್ತು ಮಕ್ಕಳ ಆಶ್ರಯಕ್ಕಾಗಿ ತಪತಪಿಸುವ ಕುಟುಂಬಗಳು ಇಲ್ಲಿವೆ. ಶ್ರೇಣೀಕೃತ ಸಮಾಜದ ಹಲವು ಮದುವೆ - ಕುಟುಂಬಗಳ ಚಿತ್ರಗಳು ಈ ಕಥಾನಕಗಳ ಉದ್ದಕ್ಕೂ ವ್ಯಷ್ಟಿ ಮತ್ತು ಸಮಷ್ಟಿಯ ನೆಲೆಯಲ್ಲಿ ಜಿಜ್ಞಾಸೆಗೆ ಒಳಗಾಗುತ್ತವೆ. ಕೌಟುಂಬಿಕ ದುರಂತಗಳು ವ್ಯಕ್ತಿ ಮತ್ತು ಸಮಾಜಕ್ಕೆ ಸಮಸ್ಯೆಗಳಾಗಿ ಪರಿಣಮಿಸುವುದರಿಂದ ಆಗುವ ಅನಾಹುತಗಳನ್ನು ಕುವೆಂಪು ಸಂವೇದನೆ ಅತ್ಯಂತ ಪ್ರಜ್ಞಾಪೂರ್ವಕವಾಗಿಯೇ ಚಿಂತಿಸುತ್ತದೆ. ಮದುವೆ ಮತ್ತು ಕುಟುಂಬಗಳ ವಾಸ್ತವ ಚಿತ್ರಗಳನ್ನು ಚಿತ್ರಿಸುವ ಕುವೆಂಪು ಸಂವೇದನೆ ಒಂದು ಕಾಲದ ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ಸಂಬಂಧಗಳ ಜಿಜ್ಞಾಸೆಯನ್ನು ಮಾಡುವುದರೊಂದಿಗೆ ಅಂತಹ ಸಂಬಂಧಗಳಿಂದ ಏರ್ಪಡುವ ಅಮಾನವೀಯ ನೆಲೆಗಳನ್ನು ತೀವ್ರ ವಿಮರ್ಶೆಗೆ ಗುರಿಪಡಿಸುತ್ತದೆ.

ರೋಗಗ್ರಸ್ಥನಾದ ನಡುವಯಸ್ಸಿನ ಸಿಂಬಾವಿ ಭರಮೈಹೆಗ್ಗಡೆ ಸಂತಾನವಿಲ್ಲವೆಂಬ ಕಾರಣಕ್ಕಾಗಿ ಸುಬ್ಬಣ್ಣಹೆಗ್ಗಡೆಯ ಕಿರಿಯ ಮಗಳು ಮಂಜಮ್ಮನನ್ನು ಮದುವೆಯಾಗಲು ಬಯಸುವುದು, ಈ ಸಂಬಂಧವನ್ನು ತನ್ನ ಹೆಂಡತಿಯು ಪ್ರತಿರೋಧಿಸಿದ್ದರಿಂದ ಮದುವೆ ಮುರಿದುಬೀಳುವುದು, ಆನಂತರ ತನ್ನ ಸಾಲಗಾರನಾದ ಹೂವಳ್ಳಿ ವೆಂಕಟಣ್ಣನ ಮಗಳಾದ ಚಿನ್ನಮ್ಮನನ್ನು ಮದುವೆಯಾಗಲು ನಡೆಸುವ ಪ್ರಯತ್ನಗಳು, ಆ ನಡುವೆ ಏರ್ಪಡುವ ಕೌಟುಂಬಿಕ ಹಾಗು ಮಾನಸಿಕ ಕ್ಲೇಶಗಳು - ಹಲವು ಅನರ್ಥಗಳಿಗೆ ಎಡೆಮಾಡಿಕೊಡುತ್ತವೆ. ಹಾಗೆಯೇ ತಿಮ್ಮಪ್ಪಹೆಗ್ಗಡೆಗೆ ಭರಮೈಹೆಗ್ಗಡೆ ತನ್ನ ತಂಗಿ ಲಕ್ಕಮ್ಮನನ್ನು ಕೊಡಲು ನಿರಾಕರಿಸಿದಾಗ, ಭರಮೈಹೆಗ್ಗಡೆ ಮತ್ತು ಚಿನ್ನಮ್ಮನ ಮದುವೆಯ ಸಂಬಂಧವನ್ನು ಮುರಿಯುವ ಪ್ರಯತ್ನಗಳು, ಗುತ್ತಿ - ತಿಮ್ಮಿ ಮತ್ತು ಬಚ್ಚನ ನಡುವೆ ಏರ್ಪಡುವ ವಿವಾಹ ಸಂಬಂಧಿ ಜಗಳಗಳು, ಬೆಟ್ಟಳ್ಳಿ ದೇವಯ್ಯಗೌಡ - ಕಾವೇರಿ ಮತ್ತು ಜೀವರತ್ನಯ್ಯನ ಮಗಳ ನಡುವಿನ ಅನೈತಿಕ ಪ್ರಣಯ ಕಾಮ ಸಂಬಂಧಗಳು, ಮುಕುಂದಯ್ಯ - ಚಿನ್ನಮ್ಮನ ನಡುವಿನ ಪ್ರೇಮ ಸಂಬಂಧ, ಐತ - ಪೀಂಚಲಳ ಸಹಜ ಅನುರಾಗದ ವೈವಾಹಿಕ ಸಂಬಂಧ, ಚೀಂಕ್ರ - ದೇಯಿ, ಪಿಜಿಣ - ಅಕ್ಕಣಿ ಕುಟುಂಬಗಳ ದುರಂತ ಮತ್ತು ಅನೈತಿಕ ಸಂಬಂಧಗಳು, ಹೂವಳ್ಳಿ ವೆಂಕಟಣ್ಣನಾಯಕ ಮತ್ತು ನಾಗತ್ತೆ - ನಾಗಕ್ಕರ ನಡುವಿನ ದೈಹಿಕ ಸಂಬಂಧಗಳು - ಹೀಗೆ ಅಸಂಖ್ಯ ಗಂಡು ಹೆಣ್ಣಿನ ಸಂಬಂಧಗಳ ಕಥಾನಕಗಳು 'ಮದುಮಗಳು' ಕಾದಂಬರಿಯ ಮುಖ್ಯ ವಸ್ತುವೆಂಬಂತೆ ಚಿತ್ರಿಸಲ್ಪಡುತ್ತಾ ಒಂದು ಪ್ರಾದೇಶಿಕ ಬದುಕಿನ ಅಸಂಖ್ಯ ಕೌಟುಂಬಿಕ ದುರಂತಗಳನ್ನು, ಅ-ಸಾಮರಸ್ಯ ದಾಂಪತ್ಯಗಳನ್ನು ಅಂತಹ ಅ-ಸಾಮರಸ್ಯ ದಾಂಪತ್ಯಗಳಿಗೆ ಕಾರಣವಾಗಿರುವ ಮಲೆನಾಡ ಬದುಕಿನ ವಿರಾಟ್ ದರ್ಶನಗಳನ್ನು ಈ ಕಥನಗಳು ಬಿಚ್ಚಿಡುತ್ತವೆ. ಈ ಬಗೆಯ ಕೌಟುಂಬಿಕ ದುರಂತಗಳಿಗೆ, ದುಃಖ ದುಮ್ಮಾನಗಳಿಗೆ, ಅ-ಸಾಮರಸ್ಯ ದಾಂಪತ್ಯಗಳಿಗೆ

ಕಾರಣವಾದ ಮಲೆನಾಡಿನ ಬದುಕಿನಲ್ಲಿ ಬೇರೂರಿರುವ ದರ್ಪ - ದಬ್ಬಾಳಿಕೆ, ಆರ್ಥಿಕ ಸಮಸ್ಯೆ, ಮೂಢನಂಬಿಕೆ, ಹುಂಬಪ್ರತಿಷ್ಠೆಗಳು, ಕೆಳವರ್ಗಗಳ ಮತ್ತು ಸ್ತ್ರೀಯರ ಮೇಲೆ ಮಲೆನಾಡಿನ ಪ್ರತಿಷ್ಠಿತ ಜನವರ್ಗ ಮತ್ತು ಪುರೋಹಿತ ವ್ಯವಸ್ಥೆ ಹೇರಿರುವ ಯಾಜಮಾನ್ಯದ ನೆಲೆಗಳು, ಇಂಥ ದುರಂತ ಬದುಕಿಗೆ ಇವೆಲ್ಲವೂ ಹೇಗೆ ಕಾರಣಗಳೆಂಬ ವಿಚಾರವನ್ನು ಈ ಕಥಾನಕಗಳು ವಿಶದಪಡಿಸುತ್ತವೆ. ಸಿಂಬಾವಿ ಭರಮೈಹೆಗ್ಗಡೆ, ಹೂವಳ್ಳಿ ವೆಂಕಟಪ್ಪನಾಯಕನ ಕೌಟುಂಬಿಕ ದುರಂತ ಚಿತ್ರಗಳನ್ನು, ಗುತ್ತಿ - ತಿಮ್ಮಿ, ಐತ - ಪೀಂಚಲು, ಚಿನ್ನಮ್ಮ - ಮುಕುಂದಯ್ಯರ ಸಹಜ ದಾಂಪತ್ಯಗಳನ್ನು ಮುಖಾಮುಖಿಯಾಗಿಸುವುದರ ಮೂಲಕ ಭರಮೈಹೆಗ್ಗಡೆ ಮತ್ತು ವೆಂಕಟಣ್ಣನಾಯಕರ ಕೌಟುಂಬಿಕ ದುರಂತಗಳಿಗೆ ಕಾರಣವಾದ ಲೈಂಗಿಕ ಲಂಪಟತನ, ಪೊಳ್ಳು ಪ್ರತಿಷ್ಠೆಗಳು, ದರ್ಪ, ಈರ್ಷೆಗಳು ಅಂತಹ ದುರಂತಗಳಿಗೆ ಹೇಗೆ ಕಾರಣವಾದುವೆಂಬುದನ್ನು ಕುವೆಂಪು ಅವರು ನಿರ್ಭಿಡೆಯಿಂದ ಪ್ರಕಟಿಸುತ್ತಾರೆ.

ಇದೇ ರೀತಿ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಚಂದ್ರೇಗೌಡನ ಲಂಪಟತನ ಮತ್ತು ದರ್ಪ - ದಬ್ಬಾಳಿಕೆಗಳು ಇಡೀ 'ಕಾನೂರು' ಮನೆಯ ದುರಂತಕ್ಕೆ ಕಾರಣವಾಗುವ ವಿಚಾರವನ್ನು ಕಾದಂಬರಿಯು ಈ ಕೆಳಕಂಡ ಉದ್ಧೃತಭಾಗದಲ್ಲಿ ಪ್ರಕಟಿಸುತ್ತದೆ.

> "ರಾಮಯ್ಯನ ತಾಯಿ - ಚಂದ್ರಯ್ಯಗೌಡರ ಪ್ರಥಮ ಪತ್ನಿ ತೀರಿಕೊಂಡಾಗ ಅವರು ದು:ಖಾತಿರೇಕದಿಂದ ಆತ್ಮಹತ್ಯೆ ಮಾಡಿಕೊಳ್ಳಲೋಸುಗ ಬಂದೂಕನ್ನು ಕೈಗೆ ತೆಗೆದುಕೊಂಡಿದ್ದರೂ ಒಂದು ವರ್ಷದ ಒಳಗಾಗಿಯೇ ಅವರಿಗೆ ಎರಡನೆ ವಿವಾಹ ನಡೆದುಹೋಗಿತ್ತು. ಎರಡನೆ ಹೆಂಡತಿ ಪುಟ್ಟಮ್ಮ, ವಾಸು ಇಬ್ಬರನ್ನು ಹೆತ್ತು, ಮೂರನೆಯ ಹೆರಿಗೆಯಲ್ಲಿ ಶಿಶು ಸಮೇತ ದಿವಂಗತರಾದರು. ಅವರು ತೀರಿಕೊಂಡು ಇನ್ನೂ ಒಂದು ವರ್ಷ ಕಳೆಯುವುದರೊಳಗೆ ಚಂದ್ರಯ್ಯಗೌಡರಿಗೆ ಮೂರನೆಯ ಮದುವೆಯ ಅವಶ್ಯಕತೆಯೂ ತೋರಿ ಎಲ್ಲರನ್ನು ಆಶ್ಚರ್ಯಗೊಳಿಸಿದರು. ಅವರು ವಿಧುರರಾದ ಕೆಲವು ತಿಂಗಳೊಳಗೆ ಅವರ ಮೇಲೆ ಅಪವಾದ ಹುಟ್ಟಿತ್ತು. ಚಂದ್ರಯ್ಯಗೌಡರು ದೃಢಕಾಯರಾಗಿ ಶ್ರೀಮಂತರಾಗಿದ್ದರೂ ನಡುವಯಸ್ಸು ಮೀರಿದುದರಿಂದಲೂ ಮೂರು ಮಕ್ಕಳ ತಂದೆಯಾಗಿದ್ದುದರಿಂದಲೂ, ಸುಸಂಸ್ಕೃತರಾದ ಶ್ರೀಮಂತರೆಲ್ಲರು ಅವರಿಗೆ ಹೆಣ್ಣುಕೊಡಲು ಹಿಂಜರಿದರು. ಗೌಡರು ಅಪ್ರತಿಭರಾಗದೆ ನೆಲ್ಲುಹಳ್ಳಿಗೆ ಹೋಗಿ ಹೆಣ್ಣು ಕೇಳಿದರು. ಅಸಂಸ್ಕೃತರೂ ಒರಟು ಜೀವಿಗಳೂ ಬಡವರೂ ಆಗಿದ್ದ ನೆಲ್ಲುಹಳ್ಳಿಯವರು ಹಿಗ್ಗಿ ಮರುಮಾತಾಡದೆ ಹೆಣ್ಣು ಕೊಡಲು ಒಪ್ಪಿದರು. ಆ ವಿಚಾರ ತಿಳಿದ ಕೂಡಲೆ ಮುತ್ತಳ್ಳಿ ಶಾಮಯ್ಯಗೌಡರೇ ಮೊದಲಾದ ಹಿತಚಿಂತಕರೂ ಬಂಧುಗಳೂ ಚಂದ್ರಯ್ಯಗೌಡರನ್ನು ಆ ಸಾಹಸದಿಂದ ಪರಾಙ್ಮುಖಗೊಳಿಸಲು ಪ್ರಯತ್ನಿಸಿದರು. ಆ ಹೆಣ್ಣನ್ನು ತರುವುದು ನಿಮಗೆ ಯೋಗ್ಯವಲ್ಲ ಎಂದರು. ಪುಟ್ಟಮ್ಮ, ವಾಸು ಇಬ್ಬರೂ ತಮ್ಮ, ದೊಡ್ಡಮ್ಮನಿಂದ ಎಲ್ಲ ವಿಷಯಗಳನ್ನೂ ಅರಿತು ಕಣ್ಣೀರು

ಕರೆದರು. ಏನೆಂದರೂ ಗೌಡರ ನವದಾಂಪತ್ಯ ಪ್ರೇಮವು ಮಾತ್ರ ಒಂದಿನಿತೂ ಕುಗ್ಗಲಿಲ್ಲ. ವಿವಾಹವೂ ನಿಶ್ಚಯವಾಯಿತು. ಮೈಸೂರಿನಲ್ಲಿದ್ದ ಹೂವಯ್ಯ ರಾಮಯ್ಯರಿಗೆ ವಿಷಯವೇನೂ ಗೊತ್ತಾಗಲಿಲ್ಲ. ಗೌಡರ ಇಷ್ಟದ ಪ್ರಕಾರ ವಿವಾಹ ಮಹೋತ್ಸವಕ್ಕೆ ಅವರಿಬ್ಬರನ್ನು ಆಹ್ವಾನಿಸಲೂ ಇಲ್ಲ. ಆದಕಾರಣ ಗೌಡರ ತೃತೀಯ ವಿವಾಹದ ವಿಚಾರದಲ್ಲಿ ಅವರಲ್ಲಿ ಸಂಪೂರ್ಣ ಅಂಧಕಾರವಿತ್ತು."

"ಕಾನೂರು ಚಂದ್ರಯ್ಯಗೌಡರು ತಮ್ಮ ಮನೆಗೆ ಹೆಣ್ಣು ಕೇಳಲು ಬಂದಿದ್ದಾರೆ ಎಂಬ ಸುದ್ದಿ ಆಕೆಯ ಕಿವಿಗೆ ಬಿದ್ದ ಕೂಡಲೆ ಅಘಟನ ಘಟನವಾದಂತೆ ಆಕೆಗೆ ದಿಗ್ಭ್ರಮೆಯಾದರೂ, ನಿಲುಕದ ನಕ್ಷತ್ರವು ಹಸ್ತಗತವಾಗುತ್ತದೆಂದು ಆನಂದ ಸಂಭ್ರಮ ಸ್ರೋತವಾಗಿದ್ದಳು. ಆದರೆ ನಿಜವಾದ ಸಂಗತಿ ತಿಳಿದ ಮೇಲೆ ಆಕೆ ಹತಾಶೆಯಾದರೂ ಹೆಚ್ಚೇನೂ ವ್ಯಸನಪಡಲಿಲ್ಲ. ಕಾನೂರಿನಂತಹ ಒಂದು ದೊಡ್ಡಮನೆಗೆ ಯಜಮಾನರಾಗಿ ಗಣ್ಯರಾಗಿದ್ದ ಚಂದ್ರಯ್ಯಗೌಡರ ಕೈಹಿಡಿಯುವುದೂ ಹೆಗ್ಗಡಿತಿಯಾಗುವುದೂ ಒಂದು ಮಹಾ ಸುಕೃತವೆಂದೇ ಭಾವಿಸಿ ಸಂತುಷ್ಟಳಾದಳು. ಕುಶಲಹೃದಯರಾದ ತರಳೆಯರಿಗಾದರೆ ತಾವು ಒಲಿದವನನ್ನುಳಿದು ಬೇರೆಯವನನ್ನು ಮದುವೆಯಾಗುವುದೂ ವಿಧುರ ವಿವಾಹವೂ ಎದೆಬಿರಿಯುವ ಮಹಾಸಂಕಟಗಳಾಗುತ್ತವೆ. ಆದರೆ ಸುಬ್ಬಮ್ಮನ ಬಾಳಿನಲ್ಲಿ ಅಂತಹ ಕುಶಲತೆಗೆ ಅವಕಾಶವಾಗಲಿ ತಾವಾಗಲಿ ಸ್ವಲ್ಪವೂ ಇರಲಿಲ್ಲ. ಆದ್ದರಿಂದ ಆಕೆ ಸಂಭ್ರಮದಿಂದಲೆ ಚಂದ್ರಯ್ಯಗೌಡರ ತೃತೀಯ ವಧುವಾಗಿ ಕಾನೂರಿಗೆ ಬಂದಿದ್ದಳು." ೨

'ಮದುಮಗಳು' ಕಾದಂಬರಿಯಲ್ಲಿಯೇ ಕಾಣಿಸಿಕೊಳ್ಳುವ ಚಂದ್ರಯ್ಯಗೌಡರ ಪಾತ್ರ ಮೊದಲ ಹೆಂಡತಿಯು ತೀರಿಕೊಂಡ ನಂತರ ಎರಡನೆಯ ಹೆಂಡತಿಯ ಅನ್ವೇಷಣೆಗಾಗಿ ಮಾಳೂರು ಮಂಡಗದ್ದೆ ಹಳ್ಳಿಗಳಿಗೆ ಬರುವ ಚಿತ್ರಗಳನ್ನು ಸಂದರ್ಭಗಳನ್ನು ಈಗಾಗಲೇ ನೋಡಿದ್ದೇವೆ. ಆ ಎರಡನೆಯ ಹೆಂಡತಿಯು ವಾಸು, ಪುಟ್ಟಮ್ಮನನ್ನು ಹೆತ್ತು ತೀರಿ ಹೋದ ಮೇಲೆ ಮತ್ತೆ ಮೂರನೆಯ ಮದುವೆಗಾಗಿ ಹೆಣ್ಣನ್ನು ಹುಡುಕುತ್ತಿರುವ ಕಾನೂರು ಚಂದ್ರಯ್ಯಗೌಡರ ಚಿತ್ರ 'ಕಾನೂರು ಹೆಗ್ಗಡಿತಿ' ಕಥನದಲ್ಲಿ ನಮಗೆ ಎದುರಾಗುತ್ತದೆ. ನಡುವಯಸ್ಸು ಮೀರಿದ, ಈಗಾಗಲೇ ಬೆಳೆದು ನಿಂತು ವಯಸ್ಸಿಗೆ ಬಂದಿರುವ ಮೂರು ಮಕ್ಕಳ ತಂದೆಯಾಗಿರುವ ಚಂದ್ರಯ್ಯಗೌಡ, ತನ್ನ ಮಗಳ ವಯಸ್ಸಿನ ಹೆಣ್ಣನ್ನೇ ಮೂರನೆಯ ಮದುವೆಯ ವಧುವಾಗಿ ಸ್ವೀಕರಿಸಿ ದಾಂಪತ್ಯದಲ್ಲಿ ತೊಡಗಿದ ನಂತರ, ಹಲವು ಕೌಟುಂಬಿಕ ಕಾರಣಗಳಿಂದ ಕಾನೂರು ಮನೆ ದುರಂತದ ಕಡೆ ಮುಖ ಮಾಡಿರುವುದನ್ನು ಈ ಮೇಲಿನ ಉದ್ಧರಣೆಯು ಸ್ಪಷ್ಟಪಡಿಸುತ್ತದೆ.

ಚಂದ್ರಯ್ಯಗೌಡನ ಕುಟುಂಬದಂತೆಯೇ ಮೂರು ನಾಲ್ಕು ಮದುವೆಗಳಿಗಾಗಿ ತೆರ ತೆತ್ತು, ಬೆಳೆದ ಮಗನಿಗೆ ಮದುವೆ ಮಾಡದೆ ತನಗಾಗಿ ಹೆಣ್ಣನ್ನು ಹುಡುಕುವ ಅಣ್ಣೇಗೌಡರ ಕೌಟುಂಬಿಕ ದುರಂತವು ಕರುಣಾಜನಕ ಸ್ಥಿತಿಗೆ ತಲುಪುದನ್ನು ಈ ಕೆಳಗಿನ ಉದ್ಧರಣೆಯಲ್ಲಿ ಕಾಣುತ್ತೇವೆ :

"ತನ್ನ ತಾಯಿ ಸಾಯುವಾಗ ಅವನು ತಕ್ಕಮಟ್ಟಿಗೆ ಮನೆಯ ಕೆಲಸಗಳನ್ನೆಲ್ಲ ಚೆನ್ನಾಗಿ ನೋಡಿಕೊಳ್ಳುತ್ತ ತಂದೆಗೆ ಅಚ್ಚುಮೆಚ್ಚಾಗಿದ್ದನು. ಗದ್ದೆ ತೋಟಗಳು ಅವನ ಗೆಯ್ಮೆಯಿಂದಲೆ ಊರ್ಜಿತವಾಗಿದ್ದುವೆಂದು ಎಲ್ಲರೂ ಹೇಳುತ್ತಿದ್ದರು. ಅಣ್ಣಯ್ಯಗೌಡರು ಎಂಟುನೂರು ರೂಪಾಯಿ ತೆರ ತೆತ್ತು ಮೂರನೆ ಮದುವೆ ಮಾಡಿಕೊಂಡರೋ ಅಂದಿನಿಂದ ಓಬಯ್ಯನ ಮನಸ್ಸು ಮುರಿಯತೊಡಗಿತು. ತಂದೆ ಮತ್ತೆ ಮದುವೆ ಮಾಡಿಕೊಳ್ಳುವುದರಲ್ಲಿ ಅವನಿಗೆ ಸಹನೆಯಿರಲಿಲ್ಲ. ಅದರಲ್ಲಿಯೂ ಎಂಟುನೂರು ರೂಪಾಯಿ ತೆರ ತೆರುವುದು ಅವನಿಗೆ ಸಂಸಾರ ವಿನಾಶಕರವಾಗಿ ತೋರಿತು. ಅಡುಗೆಮಾಡಿ ಹಾಕುವುದಕ್ಕೆ ಹೆಣ್ಣು ಬೇಕಾಗಿದ್ದರೆ ತನಗೇ ಏಕೆ ಒಂದು ಮದುವೆ ಮಾಡಬಾರದಾಗಿತ್ತು? ತನಗಾದರೆ ಕಡಿಮೆ ತೆರಕ್ಕೇ ಹೆಣ್ಣು ದೊರೆಯುತ್ತಿತ್ತಲ್ಲ." ತಂದೆಯ ತೃತೀಯ ವಿವಾಹವಾದ ಕಾಲದಿಂದ ಆತನ ಪರವಾಗಿಯೂ ಮನೆಗೆಲಸ ದಲ್ಲಿಯೂ ಉದಾಸೀನವಾಗಿದ್ದ ಓಬಯ್ಯ, ಆತನು ಒಂಬೈನೂರು ರೂಪಾಯಿ ತೆರ ತೆತ್ತು ನಾಲ್ಕನೆ ಮದುವೆ ಮಾಡಿಕೊಳ್ಳಲು, ಸಂಪೂರ್ಣ ವಿರೋಧಿಯಾಗಿ ವರ್ತಿಸಲಾರಂಭಿ ಸಿದನು. ಯುವಕನಾಗಿದ್ದ ತನಗೆ ಸುಲಭವಾಗಿ ಮದುವೆ ಮಾಡುವುದನ್ನು ಬಿಟ್ಟು, ವಯಸ್ಸು ಹೋದ ತಂದೆ ಅಷ್ಟೊಂದು ಹಣವನ್ನು ತೆರವಾಗಿ ತೆತ್ತು ತಾನೇ ಮದುವೆಯಾದುದು ಮಗನ ಈರ್ಷ್ಯಾಕೋಪ ವೈರಗಳಿಗೆ ಕಾರಣವಾಯಿತು. ತಾನು ಕಷ್ಟಪಟ್ಟು ಮುಂದಿನ ಸುಖಕ್ಕೆಂದು ದುಡಿದುದನ್ನೆಲ್ಲ ಅವಿವೇಕಿಯಾದ ತಂದೆ ದುಂದುವೆಚ್ಚಮಾಡಿದರೆ ಯಾವ ಮಗನು ತಾನೆ ಸಹಿಸಿಯಾನು?" [೩]

ಕಾನೂರು ಚಂದ್ರಯ್ಯಗೌಡರ ಒಕ್ಕಲಾಗಿದ್ದ ಅಣ್ಣೇಗೌಡರು ಹೆಣ್ಣುಗಳಿಗಾಗಿ ತೆರವನ್ನು ತೆತ್ತು ಈಚೆಗೆ ದರಿದ್ರಾವಸ್ಥೆಗೆ ಇಳಿದಿದ್ದರು. ಆದರು ಮದುವೆಯ ವಯಸ್ಸಿಗೆ ಬಂದ ಮಗ ಓಬಯ್ಯನಿಗೆ 'ಮದುವೆ' ಮಾಡದೆ, ಆರ್ಥಿಕವಾಗಿ ದುರ್ಬಲರಾಗಿದ್ದರು. ತನ್ನ ಒಕ್ಕಲ ಒಡೆಯನಾದ ಕಾನೂರು ಚಂದ್ರಯ್ಯಗೌಡರಲ್ಲಿ ಮತ್ತೆ ಮತ್ತೆ ಹಣವನ್ನು ಸಾಲ ಪಡೆದು ಮರುಮದುವೆಗಳಿಗೆ ತೆರ ತೆತ್ತು ತೆತ್ತು '.....ಸಂಸಾರ ಸಾಗಿಸುವುದಕ್ಕೋಸ್ಕರ ಮತ್ತೆ ಮದುವೆಯಾದರೆ ತಪ್ಪೇನು' ಎಂಬ ಗೊಡ್ಡು ಮೌಢ್ಯತೆಯಿಂದ, ಮೂರ್ನಾಲ್ಕು ಮದುವೆ ಮಾಡಿಕೊಂಡಿದ್ದರಿಂದ ತಂದೆ ಮಕ್ಕಳಲ್ಲಿ ವ್ಯಾಜ್ಯಗಳುಂಟಾಗಿ ಜೀವನವೆಲ್ಲ ನರಕಯಾತನೆಯಲ್ಲಿ ಮುಳುಗುತ್ತಿರುವ ಸ್ಪಷ್ಟ ಚಿತ್ರಣ ಈ ಮೇಲಿನ ಉದ್ಧರಣೆಯಲ್ಲಿ ಕಂಡುಬರುತ್ತದೆ.

ಇಂಥ ತಂದೆ ಮತ್ತು ಮಗನ ನಡುವೆ ಉಂಟಾದ ಕೌಟುಂಬಿಕ ಕ್ಲೇಶದಿಂದ ಇಡೀ ಮನೆಯ ನೆಮ್ಮದಿ ಹದಗೆಡುತ್ತದೆ. ಚಂದ್ರಯ್ಯಗೌಡರ ಒಕ್ಕಲಾದ ಅಣ್ಣೇಗೌಡರ ಮಗ ಓಬಯ್ಯನಿಗೆ ಇಪ್ಪತ್ತೈದು ವರ್ಷವಾದರೂ 'ಮದುವೆ' ಮಾಡದಿದ್ದರಿಂದ ತಂದೆ ಮಕ್ಕಳಲ್ಲಿ ನಿರಂತರ ವ್ಯಾಜ್ಯ ಮತ್ತ ಮನಸ್ತಾಪಗಳು ಉಂಟಾಗಿದ್ದವು. ಓಬಯ್ಯನಿಗೆ ವಿವಾಹ ಮಾಡದೆ ಇದ್ದುದಕ್ಕೆ ಮುಖ್ಯ ಕಾರಣ ವಧುವಿಗೆ ತೆರ ಕೊಡಲು ಹಣವಿಲ್ಲದ್ದು. ತನ್ನ ಮದುವೆಗಳಿಗೆ ಮಾಡಿದ ಸಾಲ

ಈಗಾಗಲೇ ಸಾವಿರ ರೂಪಾಯಿ ಮೀರಿದ್ದರಿಂದ ಚಂದ್ರಯ್ಯಗೌಡರು ಮಗನ ಮದುವೆಗಾಗಿ ಸಾಲ ಕೊಡಲು ನಿರಾಕರಿಸಿದ್ದು ಮುದುಕನಾದ ಅಣ್ಣೇಗೌಡರಿಗೆ ಆಘಾತ ಉಂಟುಮಾಡಿತ್ತು. ಇಂಥ ಆಘಾತಕ್ಕೆ "ಯೌವ್ವನದಲ್ಲಿ ಪಟ್ಟ ಅತಿ ಸುಖಕ್ಕೆ ವೃದ್ಧಾಪ್ಯದಲ್ಲಿ ಪ್ರಾಯಶ್ಚಿತ್ತವಾಗಿ ಕಷ್ಟ ಪಡಬೇಕಾಗುವುದು ಅವರ ಕರ್ಮ" ಎಂಬಂತೆ ಅವರ ಸ್ಥಿತಿ ನಿರ್ಮಾಣವಾಗಿತ್ತು. ಹಾಗಾಗಿ ಅಣ್ಣೇಗೌಡರ ಮನಸ್ಸಿನಲ್ಲಿ ಅಶಾಂತಿಯ ಕ್ರಾಂತಿ ಪ್ರಾರಂಭವಾಗಿ ಅವರ ಸ್ಥಿತಿ ಮರುಭೂಮಿಯಲ್ಲಿ ಕಣ್ಣು ಕಟ್ಟಿ ಬಿಟ್ಟವನಂತಾಗಿತ್ತು. ಬದುಕಿನ ಕೊನೆಗಾಲದಲ್ಲಿ ಮುದುಕನಿಗೆ ಒದಗಿದ ಇಂಥ ದುಃಸ್ಥಿತಿಗೆ ಒಂದರ್ಥದಲ್ಲಿ ತಾನು ಮಾಡಿಕೊಂಡ 'ಮದುವೆ'ಗಳೇ ಕಾರಣವಾಗಿದ್ದವು. ಇದೆಲ್ಲಕ್ಕೂ ತನ್ನ ಹಿಂದಿನ ಜನ್ಮದ ಕರ್ಮಫಲವೆಂದು ನಂಬುತ್ತಾನೆ. ಅವನ ನಂಬಿಕೆಯನ್ನು ಪುರೋಹಿತಶಾಹಿ ಭಿತ್ತಿದ ಮೌಢ್ಯತೆ ಮತ್ತಷ್ಟು ಬಲಪಡಿಸುವುದನ್ನು ಈ ಕೆಳಗಿನ ಉದ್ಧರಣೆಯಲ್ಲಿ ಕಾಣುತ್ತೇವೆ.

> "…..ಚಂದ್ರಯ್ಯಗೌಡರು ಸಾಲ ಕೊಡುವುದಿಲ್ಲ. ಮುಂದೇನು ಗತಿ? ಮಗನೂ ತನ್ನನ್ನು ಬಿಟ್ಟು ಹೋದರೆ ತನಗಾರು ದಿಕ್ಕು? ರೋಗಿಯಾದ ಹೆಂಡತಿಗೂ ವೃದ್ಧನಾದ ತನಗೂ ದುರ್ಬಲೆಯಾದ ಪುಟ್ಟ ಮಗಳೊಬ್ಬಳೆ ಶುಶ್ರೂಷೆ ಮಾಡಬಲ್ಲಳೆ? ಉಳುವವರಾರು? ಬಿತ್ತುವವರಾರು?…..ಅಯ್ಯೋ ದೇವರೇ, ಕಡೆಗಾಲದಲ್ಲಿ ಎಂತಹ ಕಷ್ಟ ಕೊಟ್ಟೆ!…..ತನ್ನ ಜೀವನದ ಚಿತ್ರಗಳೆಲ್ಲ ಕಣ್ಣುಮುಂದೆ ಸುಳಿದವು. ಮುದುಕನ ಹೃದಯ ಶೋಕದಿಂದ ವಿದೀರ್ಣವಾಯಿತು. ಪ್ರಕೃತಿ ಪ್ರಪಂಚವಲ್ಲದೆ ಬೇರೆ ಯಾರೂ ಅಲ್ಲಿರಲಿಲ್ಲ. ಎಳಮಕ್ಕಳಂತೆ ಬಿಕ್ಕಿ ಬಿಕ್ಕಿ ಅಳತೊಡಗಿದರು…..ನಾರಾಯಣಾ ನಿನಗೂ ಕೇಳಿಸದೇ? ಮುದುಕನು ನಿನಗೆ ಎಷ್ಟು ಸಾರಿ ಮುಡಿಪು ಕಟ್ಟಿದ್ದಾನೆ? ತಿರುಪತಿ ಧರ್ಮಸ್ಥಳಗಳಿಗೆ ಹೇಳಿಕೊಂಡಿದ್ದಾನೆ…..ವೆಂಕಪ್ಪಯ್ಯನವರಿಂದ ಚಂದ್ರಮೌಳೇಶ್ವರನಿಗೆ ಹಣ್ಣುಕಾಯಿ ಕಾಣಿಕೆಗಳನ್ನು ಅರ್ಪಿಸಿದ್ದಾನೆ!…..ಅವರಿಂದಲೇ ನಿಮಿತ್ತ ಕೇಳಿಸಿ ಚೀಟಿ ವಿಭೂತಿ ತಂದಿದ್ದಾನೆ!…..ದೆವ್ವ, ಜಕ್ಕಣಿ, ಪಂಜ್ರೊಳ್ಳಿ ಮೊದಲಾದ ಅಂತರಬೆಂತರಗಳಿಗೆಲ್ಲ ಕೋಳಿಗಳನ್ನು ಬಲಿ ಕೊಟ್ಟಿದ್ದಾನೆ…..ತನಗೆ ತಿಳಿದಿದ್ದ ಗಿಡಮೂಲಿಕೆ ಕಷಾಯಗಳನ್ನು ಮಾಡಿದ್ದಾನೆ…..ಕೆಲವರೇನೋ ಹೇಳಿದರು: ಆಸ್ಪತ್ರೆಗೆ ಹೋಗಿ ಡಾಕ್ಟರಿಂದ ಔಷಧಿ ತೆಗೆದುಕೊಂಡು ಬಾ ಎಂದು; ಕರೆದುಕೊಂಡು ಹೋಗಿ ಡಾಕ್ಟರಿಗೆ ತೋರಿಸು ಎಂದು…..ಮುದುಕನು ಯೋಚಿಸಿದನು: ಆಸ್ಪತ್ರೆ ಡಾಕ್ಟರುಗಳಿಂದೇನಾಗುತ್ತದೆ? ಅಗ್ರಹಾರದ ಜೋಯಿಸರು ವೆಂಕಪ್ಪಯ್ಯನವರ ಮಂತ್ರತಂತ್ರಗಳಿಂದಲೂ ತಿರುಪತಿ ಧರ್ಮಸ್ಥಳಗಳ ದೇವರುಗಳಿಂದಲೂ ತನ್ನ ಹಳ್ಳಿಯ ವೈದ್ಯದಿಂದಲೂ (ತಾನು ಎಷ್ಟು ಜನಕ್ಕೆ ಮದ್ದು ಕೊಟ್ಟಿಲ್ಲ! ಎಷ್ಟು ಜನರು ಬದುಕಿಕೊಂಡಿಲ್ಲ!) ಭೂತ ಜಕ್ಕಣಿಗಳಿಂದಲೂ ಆಗದ ಕಾರ್ಯ ಆಸ್ಪತ್ರೆ ಡಾಕ್ಟರುಗಳಿಂದೇನಾಗುತ್ತದೆ? ಎಷ್ಟೋ ಜನರಿಗೆ ತಾನೇ ಉಪದೇಶ ಮಾಡಿಲ್ಲವೇ ಆಸ್ಪತ್ರೆಗೆ ಹೋಗಬೇಡಿ ಎಂದು? 'ಅಪ್ಪ ಅವ್ವ ಸತ್ರೆ ಆಸ್ಪತ್ರೆ!'

ಎಂಬ ಗಾದೆಯಿಲ್ಲವೇ? ವೇದ ಸುಳ್ಳಾದರೂ ಗಾದೆ ಸುಳ್ಳಾಗದು!.....ಎಲ್ಲಾ ಕರ್ಮದ ಫಲ. ಹಿಂದಿನ ಜನ್ಮದಲ್ಲಿ ಬೆನ್ನಿಗೆ ಹತ್ತಿದುದು ಸುಮ್ಮನೆ ಹೋಗುತ್ತದೆಯೆ?.....ಮತ್ತೆ ಮುದುಕನಿಗೆ ತನ್ನ ನಾಲ್ಕು ಮದುವೆಗಳ ನೆನಪಾಯಿತು. ಒಂದು ಸಾರಿ ತಾನು ಮಾಡಿದ್ದು ತಪ್ಪು ಎನ್ನಿಸಿತು.....ಆದರೆ ಮತ್ತೆ ಮದುವೆ ಮಾಡಿಕೊಳ್ಳುವುದರಲ್ಲಿ ತಪ್ಪೇನು! ಸಂಸಾರ ಸಾಗುವುದು ಹೇಗೆ? ಎಂದು ತನ್ನನ್ನು ತಾನೇ ಸಮರ್ಥಿಸಿಕೊಂಡನು....." '

ಇಂಥ ಮಾನಸಿಕ ಸಂಕಟಗಳಿಗೆ, ಕೌಟುಂಬಿಕ ಕಲಹಗಳಿಗೆ, ತಂದೆ ಮತ್ತು ಮಗನ ನಡುವಿನ ವಿರೋಧಗಳಿಗೆ 'ಮದುವೆ' ಹೇಗೆ ಕಾರಣವಾಯಿತೆಂಬುದನ್ನು ಇಂಥ ಚಿತ್ರಗಳಿಂದ ಕುವೆಂಪು ಕಥನಗಳು ಸ್ಪಷ್ಟಪಡಿಸುತ್ತವೆ. ದುರಂತವೆಂದರೆ ತನ್ನ ಒಕ್ಕಲಿಗೆ ಒಡೆಯನಾದ ಚಂದ್ರಯ್ಯಗೌಡರ 'ಕಾನೂರು' ಕುಟುಂಬವು ತನ್ನ ಮೂರನೆಯ ಮದುವೆಯಿಂದ ಅನೇಕ ಕಷ್ಟಗಳಿಗೆ ಗುರಿಯಾಗಿ ಮಾನಸಿಕ ಹಾಗೂ ಆರ್ಥಿಕ ಸಂಕಷ್ಟಗಳಿಗೆ ಸಿಕ್ಕಿ ದುರಂತಕ್ಕೆ ಒಳಗಾಗುತ್ತದೆ. ಚಂದ್ರಯ್ಯಗೌಡ ತನಗಿಂತ ಅತ್ಯಂತ ಕಿರಿಯ ವಯಸ್ಸಿನ ಸುಬ್ಬಮ್ಮನನ್ನು ಮದುವೆಯಾದ್ದರಿಂದ ತಂದೆ ಮತ್ತು ಮಕ್ಕಳಲ್ಲಿ ಉಂಟಾಗುವ ಅಂತರಗಳು, ವೈಮನಸ್ಸುಗಳು, ಕಿರಿಯಳನ್ನು ಮದುವೆಯಾದುದ್ದರಿಂದ ತನ್ನೊಳಗೆ ಉಂಟಾದ ಅನೇಕ ಅನುಮಾನಗಳು, ಅತ್ಯಂತ ಸಮೃದ್ಧವಾಗಿದ್ದ ಕುಟುಂಬದ ದುರ್ಗತಿಗೆ ಕಾರಣವಾಗುವ ಬಗೆಯನ್ನು 'ಕಾನೂರು ಹೆಗ್ಗಡಿತಿ' ಕಥನ ಅತ್ಯಂತ ಮಾರ್ಮಿಕವಾಗಿ ಚಿತ್ರಿಸುತ್ತದೆ. ಒಕ್ಕಲಿಗರು ಮತ್ತು ಹಳೇ ಪೈಕದವರ ನಡುವಿನ ಕಟ್ಟುಕಟ್ಟಳೆಗಳ ಬಗ್ಗೆ ಕೆಲವು ನಿಷಿದ್ಧಗಳಿದ್ದವು. ಆದರು ಹಳೇ ಪೈಕದವರಲ್ಲಿ ಜಮೀನ್ದಾರರಾಗಿದ್ದವರು ಒಕ್ಕಲಿಗರ ಜೊತೆ ಸ್ಪರ್ಧಿಸಲು ಸ್ಪರ್ಧೆಗೆ ಇಳಿಯುತ್ತಿದ್ದರು. ಇದಕ್ಕೆ 'ಮದುಮಗಳು' ಕಾದಂಬರಿಯಲ್ಲಿ ಈ ಕೆಳಗಿನ ಉದ್ಧೃತ ಭಾಗದಲ್ಲಿ ಬರುವ ವಿವರಗಳನ್ನು ಗಮನಿಸಬಹುದು.

"ವೇದ ಕಲಿಯುವುದು ಶೂದ್ರರಿಗೆ ಹೇಗೆ ನಿಷಿದ್ಧವೋ ಹಾಗೆಯೇ ಸ್ವಂತ ಜಮೀನು ಮಾಡುವುದು ಹಳೆ ಪೈಕದವರಿಗೆ ನಿಷಿದ್ಧ ಎಂದು ಒಕ್ಕಲಿಗರಾಗಿದ್ದ ಹೆಗ್ಗಡೆ ಗೌಡ ನಾಯಕರುಗಳೆಲ್ಲ ಸೇರಿ ತೀರ್ಮಾನ ಮಾಡಿದ್ದರು. ಅಷ್ಟೇ ಅಲ್ಲದೆ, ಮದುವೆ ಮೊದಲಾದ ಸಂಭ್ರಮಗಳಲ್ಲಿ ಹಳೆ ಪೈಕದವರು ಒಕ್ಕಲಿಗರನ್ನು ಯಾವ ವಿಧದಲ್ಲಿಯೂ ಅನುಸರಿಸಿಕೂಡದೆಂದೂ ಮಾಮೂಲು ಕಟ್ಟಾಗಿತ್ತು. ದಿಬ್ಬಣದಲ್ಲಿ ಮದುವೆಯ ಗಂಡು ಕುದುರೆಯ ಮೇಲೆ ಸವಾರಿ ಮಾಡಬಾರದು; ದಂಡಿಗೆಯ ಮೇಲೆ ಕೂತರಂತೂ ಮದುಮಕ್ಕಳಿಗೂ ದಿಬ್ಬಣದವರಿಗೂ ಉಳಿಗತಿಯಿರಲಿಲ್ಲ. ಈ ಚರ್ಚೆ ಸರ್ಕಾರದವರೆಗೂ ಹೋಗಿ, ಅದೂ ಒಕ್ಕಲಿಗರ ಪರವಾಗಿಯೆ ತೀರ್ಮಾನ ಕೊಟ್ಟದ್ದರಿಂದ ಮಾಮೂಲಿಗೂ ಮಾತ್ಸರ್ಯಕ್ಕೂ ಕಾನೂನಿನ ಮುದ್ರೆ ಬೇರೆ ಬಿದ್ದಿತ್ತು."

"ಒಕ್ಕಲಿಗ ಜಮೀನುದಾರರ ಆಳುಗಳೂ ಒಕ್ಕಲುಗಳೂ ಆಗಿದ್ದ ಹಳೆಪೈಕದವರು ಬಹಿರಂಗವಾಗಿ ಯಾವ ತಂಟೆ ತಕರಾರುಗಳ ಗೋಜಿಗೂ ಹೋಗುತ್ತಿರಲಿಲ್ಲ. ಆದರೆ ಸೇಸನಾಯ್ಕನಂತಹ ಸ್ವಂತ ಜಮೀನುದಾರರಿಗೆ 'ಅವರಿಗಿಂತ ನಾವೇನು ಕಡಿಮೆ?' 'ನಮ್ಮ

ಕುದುರೆ, ನಮ್ಮ ದಂಡಿಗೆ, ನಮ್ಮ ವಾದ್ಯ, ನಮ್ಮ ಬೋವಿಗಳು! ನಮ್ಮ ದುಡ್ಡು ನಾವು ಖರ್ಚು ಮಾಡುವುದಕ್ಕೆ ಇವರದೇನು ಅಡ್ಡಿ?' ಎಂಬ ಹುಮ್ಮಸ್ಸು ಇರುತ್ತಿತ್ತು."

"ನಮ್ಮ ದಂಡಿಗೆ ಹಕ್ಕಿಗೆ, ಕುದುರೆಹಕ್ಕಿಗೆ, ಗೌಡಮಕ್ಕಳು ಅಡ್ಡಬರುವುದು ಯಾವ ನ್ಯಾಯ? ನಾವೇಕೆ ಹೊಡೆದಾಟಕ್ಕೆ ಹೆದರಬೇಕು? ನಾಳೆ ನನ್ನ ಮಗನ ಮದುವೆ ಮಾಡಿದಾಗ ದಂಡಿಗೆ ಸಿಕ್ಕದೆ ಇದ್ದರೂ ಕುದುರೆ ಮೇಲಾದರೂ ಹೆಣ್ಣು ಗಂಡೂ ಕೂರಿಸಿ ದಿಬ್ಬಣ ತಗೊಂಡು ಹೋಗಲೇಬೇಕು. ಜಾತಿಯವರು ನೀವೆಲ್ಲಾ ಸಹಾಯ ಮಾಡಿದರೆ ನಾನೊಂದು ಕೈ ನೋಡೇ ಬಿಡ್ತೀನಿ." "

ಇಷ್ಟಾಗಿಯೂ ಹಳೇಪೈಕದ ಜಮೀನ್ದಾರ ಸೇಷನಾಯ್ಕನಿಗೆ ತನ್ನ ಸಮಾಜದ ಕಟ್ಟಳೆಯೊಂದನ್ನು ಮೀರಿ ಒಕ್ಕಲಿಗರ ವಿರುದ್ಧ ನಿಲ್ಲುವುದರ ಬಗ್ಗೆ ಭಯವೂ ಇದೆ. ಅದಕ್ಕಾಗಿ ಆತ ತನ್ನ ಜಾತಿಯವರ ಬೆಂಬಲವನ್ನು ಅಪೇಕ್ಷಿಸುತ್ತಾನೆ. ಆ ಬೆಂಬಲವಿದ್ದರೆ ಮೇಲು ಜಾತಿಯವರನ್ನು ವಿರೋಧಿಸಬಲ್ಲೆ ಎಂಬ ಆತ್ಮವಿಶ್ವಾಸ ಅವನಲ್ಲಿ ಕಂಡು ಬರುತ್ತದೆ. ಈ ಒಳಗಿನ ಬಂಡಾಯ ಪ್ರವೃತ್ತಿಗಳಿಗೆ ಕಾದಂಬರಿಯಲ್ಲಿಯೇ ಅನೇಕ ವಿವರಗಳು ಸಿಗುತ್ತವೆ.

ವಸಾಹತು ಸಂಸ್ಕೃತಿಯ ಚಹರೆಗಳು ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮಲೆನಾಡ ಬದುಕಿನಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ಮನೆಮಾಡುತ್ತಿರುವುದನ್ನು ಕಾದಂಬರಿಯ ಉದ್ದಕ್ಕೂ ಕಾಣಬಹುದಾಗಿದೆ. ಕಾದಂಬರಿಯ ಎರಡನೇಯ ಭಾಗದಿಂದಲೇ ವಸಾಹತು ಆಳ್ವಿಕೆ ಬಲಗೊಳ್ಳುತ್ತಿರುವ ಸೂಚನೆಗಳು ಕಾಣಿಸಿಕೊಳ್ಳಲು ಪ್ರಾರಂಭವಾಗುತ್ತವೆ. ಹಳೆಪೈಕದವರಿಗೆ ಅಂದರೆ ದೀವರು ಸ್ವಂತ ಜಮೀನನ್ನು ಪಡೆಯುವುದು ಮತ್ತು ಮದುವೆಯ ಸಂದರ್ಭದಲ್ಲಿ ಒಕ್ಕಲಿಗರ ಸಂಪ್ರದಾಯವನ್ನು ಅನುಸರಿಸುವುದು ನಿಷಿದ್ಧವೆಂಬ ಪ್ರಶ್ನೆಯನ್ನು ಕುರಿತ ಸನ್ನಿವೇಶದಲ್ಲಿಯೇ ಆಧುನಿಕ ಸರ್ಕಾರದ ಪರಿಕಲ್ಪನೆ ಮತ್ತು ಕಾನೂನಿನ ಕಲ್ಪನೆಗಳು ರೂಪಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಹಳೆಯ ಆಡಳಿತ ಕ್ರಮಗಳು ಹಿಂದೆ ಸರಿದು ಆಧುನಿಕ ಸರ್ಕಾರ ಕಾನೂನು, ನ್ಯಾಯವ್ಯವಸ್ಥೆ ಒಂದಾಗುತ್ತಿರುವುದನ್ನು ಕಾಣುತ್ತೇವೆ:

"ಸರ್ಕಾರದ ಇತ್ಯರ್ಥಕ್ಕೆ ಕಾರಣ ನ್ಯಾಯಪಕ್ಷಪಾತವಾಗಿರಲಿಲ್ಲ; ಬಲ ಪಕ್ಷಪಾತ ವಾಗಿತ್ತು. ಬಲಿಷ್ಠರೂ ಬಹು ಸಂಖ್ಯೆಯವರೂ ಆದರವರ ಕಡೆ ಸರ್ಕಾರವಿದ್ದರೆ ಅದಕ್ಕೂ ಕ್ಷೇಮ; ನ್ಯಾಯರಕ್ಷಣೆಯೂ ಸುಲಭ ಸಾಧ್ಯ. ಅದರಲ್ಲಿಯೂ ಮೈಸೂರು ಸಂಸ್ಥಾನದ ಅಂಚಾಗಿ, ದುರ್ಗಮವಾದ ಪರ್ವತಾರಣ್ಯಗಳ ಬೀಡಾಗಿ, ಆಗತಾನೆ ನಗರ, ಕೌಲೆದುರ್ಗ ಮೊದಲಾದ ಪಾಳೆಯ ಪಟ್ಟುಗಳ ಕಿರುಕುಳದಿಂದ ಪಾರಾಗಿದ್ದ ಮಲೆನಾಡಿಗೆ ಅಲ್ಲಿದ್ದ ಬಹುಸಂಖ್ಯೆಯ ಬಲಿಷ್ಠರು ಇಚ್ಛೆಯಂತೆ ಸರ್ಕಾರದ ಕಾನೂನಾದುದರಲ್ಲಿ ಆಶ್ಚರ್ಯವೇನಿಲ್ಲ" [೬]

ಈ ಮೇಲಿನ ಉದ್ಧರಣೆಯಲ್ಲಿ ಹೊಸ ಸರ್ಕಾರಗಳು ಕೂಡ ಬಲಪಕ್ಷಪತಾದ ಕಡೆ ಇದ್ದವೆಂಬುದು ಮನದಟ್ಟಾಗುತ್ತದೆ. ಅಂತೆಯೇ ಬಹುಸಂಖ್ಯೆಯ ಬಲಿಷ್ಠರ ಇಚ್ಛೆಗೆ ಅನುಸಾರವಾಗಿ ಹೊಸಕಾನೂನುಗಳು ನಿರ್ಮಾಣವಾಗುತ್ತಿರುವುದರ ಬಗೆಗೆ ವ್ಯಂಗ್ಯ ಧ್ವನಿಯೊಂದು ಈ ಉದ್ಧರಣೆಯಲ್ಲಿ ಪ್ರಕಟಗೊಳ್ಳುತ್ತದೆ. ಕಾನೂನು ಯಾವಾಗಲು ಬಲಿಷ್ಠರ ಪರವಾಗಿಯೇ ಇರುತ್ತದೆಯೆಂಬ ವಾಸ್ತವ ಸತ್ಯವನ್ನು ಈ ಉದ್ಧರಣೆ ಕಾಣಿಸುತ್ತದೆ:

"ನೆರೆಹೊರೆಯವರು ಮಗಳಿಗೆ ಮದುವೆಯ ವಯಸ್ಸು ಮೀರಿ ಹೋಯಿತೆಂದು ಹೇಳುತ್ತಿದ್ದರೂ ಸುಬ್ಬಣ್ಣ ಹೆಗ್ಗಡೆಯವರಿಗೆ ಹಾಗೇನೂ ತೋರುತ್ತಿರಲಿಲ್ಲ. ಚೆನ್ನಾಗಿ ಕೆಲಸಮಾಡಿ ಹೊಟ್ಟೆ ತುಂಬಾ ತಿನ್ನುವ ಹಳ್ಳಿಯ ಹೆಣ್ಣು ಬೆಳೆಯುವಂತೆ ಮಂಜಮ್ಮ ಸುಪುಷ್ಟವಾಗಿ ಬೆಳೆದಿದ್ದ ಮಾತ್ರಕ್ಕೆ ಮದುವೆಯ ವಯಸ್ಸು ಮೀರಿತೆಂದು ಹೇಳುವುದು ಯಾವ ನ್ಯಾಯ? ಮದುವೆಗೆ ವಯಸ್ಸು ಮೀರುವುದೆಂದರೆ ಅರ್ಥವಾದರೂ ಏನು? ಅವಳೇನು ಹಾರುವರ ಮನೆಯ ಹೆಣ್ಣೇ? ಮದುಮೆಯಾಗುವುದಕ್ಕೆ ಮೊದಲೆ ದೊಡ್ಡವಳಾಗಿಬಿಟ್ಟರೆ ಕಾಡಿಗಟ್ಟಬೇಕೆಂಬ ಹೆದರಿಕೆಯೇನು ತಮಗೆ? ಒಂದು ವರ್ಷ ಹೆಚ್ಚು ಕಡಿಮೆ, ಸರಿಯಾದ ಮನೆಗೆ ಕೊಟ್ಟರಾಯಿತು. ಅಲ್ಲದೆ ತಾಯಿ ಸತ್ತ ಹುಡುಗಿ. ಸ್ವಲ್ಪ ತಿಳುವಳಿಕೆ ಬಂದ ಮೇಲೆಯೆ ಗಂಡನ ಮನೆಗೆ ಹೋದರೆ ನೆಮ್ಮದಿ. ಒಂಟಿಬಾಳು ಬಾಳುತ್ತಿರುವ ತಮಗೂ ಮಗಳನ್ನು ತಟಕ್ಕನೆ ಅಗಲಿರಬೇಕೆಂದರೆ ಸಂಕಟ. ಮಗನೇನೋ ಇದ್ದಾನೆ. ಆದರೆ ತಿಮ್ಮಪ್ಪಹೆಗ್ಗಡೆ ಕಂತ್ರಿ, ಸ್ವತಂತ್ರಿ. ಯಾವಾಗಲೂ ಇತರರಿಗೆ ಆಶ್ರಯಕೊಡುತ್ತಾ ಬಾಳಿದವರಿಗೆ ಆಶ್ರಿತರು ದೂರವಾದರೆ ಆಶ್ರಯವೆ ತಪ್ಪಿದಂತಾಗುತ್ತದೆ." ೬

ಸುಬ್ಬಣ್ಣ ಹೆಗ್ಗಡೆಯವರ ಆಲೋಚನೆಗೆ ಇಷ್ಟೆಲ್ಲಾ ಮೀರಿದ್ದರೂ ತನ್ನ ಆತ್ಮಕ್ಕೆ ಅದು ವೇದ್ಯವಾಗಿದ್ದುದರಿಂದಲೇ ತನ್ನ ಮಗಳ ಮದುವೆಗೆ ತನ್ನ ಮಗನ ಮದುವೆಯ ಅಡಚಣೆಯನ್ನೊಡ್ಡಿ ಕಾಲವಂಚನೆ ಮಾಡುತ್ತಿರುತ್ತಾನೆ. ವೈದಿಕರ ಮತ್ತು ಶೂದ್ರರ ಮನೆಯ ಹೆಣ್ಣುಮಕ್ಕಳ ಮದುವೆಗಳ ಬಗ್ಗೆ ಆ ಸಮಾಜ ಹೊಂದಿದ್ದ ಪರಿಕಲ್ಪನೆಯನ್ನು ಈ ವರ್ಣನೆಯಿಂದ ವ್ಯಕ್ತವಾಗುತ್ತದೆ.

ಬಡತನವೆ ಬಾಳಾಗಿದ್ದ, ಕೀಳು ಜಾತಿಯಲ್ಲಿ ಹುಟ್ಟಿದ, ಕೇರಿಗೆಲ್ಲ ವಯಸ್ಸಾಗಿದ್ದ ಕುಳವಾಡಿ ಸಣ್ಣ ಸುತ್ತಮುತ್ತಲ ಹಳ್ಳಿಗಳಿಗೆಲ್ಲ ವೃದ್ಧ ಪಿತಾಮಹಾ ಎಂಬ ಗೌರವ ಹೊಂದಿದ್ದವನು. ಇವನಿಗೆ ಹೆಂಡತಿ ತೀರಿ ನಾಲ್ಕೈದು ವರ್ಷಗಳಾಗಿದ್ದರೂ ಮತ್ತೆ ಸೀರುಡಿಕೆ ಆಗಲೂ ಇಷ್ಟವಿಲ್ಲ ಮದುವೆಗೆ ಬಂದ ತನ್ನ ಮಗಳನ್ನು ಮದುವೆ ಮಾಡಿ ಹೊರಗೆ ಕೊಡಲು ಇಷ್ಟವಿಲ್ಲ. ತನ್ನ ಸಂಸಾರದ ಜವಾಬ್ದಾರಿಯನ್ನು ತನ್ನ ಮಗಳ ಮೇಲೆ ವರ್ಗಾಹಿಸಿದ್ದಾನೆ. ಅವಳನ್ನು ತನ್ನ ಮನೆಯಲ್ಲೇ ಅಳಿಯ ಸಂತಾನದ ಮೂಲಕ ಉಳಿಸಿಕೊಳ್ಳುವ ಆಲೋಚನೆ ಅವನದು. ಇದರಿಂದ ತನಗೆ ಅವರು ಒಂದು ಆಶ್ರಯವಾಗುತ್ತಾರೆಂದು, ಆ ಸಮಾಜದಲ್ಲಿ ಕೂಡಿಕೆ ಪದ್ಧತಿ ಮತ್ತು ಮನೆ ಅಳಿಯ ಸಂಪ್ರದಾಯವಿತ್ತು ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಈ ಪದ್ಧತಿಗಳೆ ಈ ಯುಗದ ಕೊನೆಯಲ್ಲಿಯೂ ಮುಂದುವರಿದಿರುವುದೆಂದು ಕುಳವಾಡಿ ಸಣ್ಣನ ಒಳಮನಸ್ಸಿನ ತುಮುಲಗಳನ್ನು ಕಾದಂಬರಿಕಾರರು ಹೀಗೆ ಹಿಡಿದಿಟ್ಟಿದ್ದಾರೆ.

"ಅವನಿಗೆ ಹೆಂಡತಿ ತೀರಿಹೋಗಿ ನಾಲ್ಕೈದು ವರ್ಷಗಳಾಗಿದ್ದರೂ ಅವನು ಮತ್ತೆ ಮದುವೆಯಾಗಿರಲಿಲ್ಲ. ಮದುವೆಯಾಗುವ ಯೋಚನೆಯನ್ನು ಇಟ್ಟುಕೊಂಡಿರಲಿಲ್ಲ. ಅವನೊಡನೆ ಸೀರುಡಿಕೆಯಾಗಲು ಆಸೆಪಟ್ಟ ಗಂಡಸತ್ತವರಿದ್ದರೂ ಅವನು ಕೂಡಿಕೆಗೂ

ಒಪ್ಪಿರಲಿಲ್ಲ. ಕಡೆಗೆ ಗಂಜಿ ಬೇಯಿಸಿವುದಕ್ಕಾದರೂ ಎಂದು ಹೆಣ್ಣು ಕೈ ಇರಲಿ ಎಂದು ಸಲಹೆಕೊಟ್ಟು ಹಿತೈಷಿಗಳ ಮಾತನ್ನೂ ಅವನು ಮುಗುಳುನಕ್ಕು ತಟ್ಟಿಹಾರಿಸಿದ್ದನು. ಅವನ ಹಿರಿಯ ಮಗಳು ಪುಟ್ಟಿಯೇ, ತನ್ನ ತಾಯಿ ಗಂಗನನ್ನು ಹೆತ್ತು ತೀರಿಕೊಂಡ ಮೇಲೆ, ಅಪ್ಪನ ಆರೈಕೆಯನ್ನೂ, ತಂಗಿ ತಮ್ಮಂದಿರ ಲಾಲನೆ ಪಾಲನೆಯನ್ನು ನೋಡಿಕೊಂಡು ಬರುತ್ತಿದ್ದಳು. ಅವಳಿಗೂ ಮದುವೆಯಾಗುವ ವಯಸ್ಸು, ಬೇಗ ಮಾಡಿಬಿಡು ಎಂದು ನೆಂಟರಿಷ್ಟರು ಸಣ್ಣನಿಗೆ ಸಲಹೆ ಹೇಳುತ್ತಿದ್ದರೂ ಅವನು 'ಅವಳಿನ್ನು ನೆರೆದು ಎರಡು ವರ್ಷವೂ ಆಗಿಲ್ಲ. ಅವಳಿಗಿಂತಲೂ ದೊಡ್ಡವರು ಕೇರಿಯಲ್ಲಿ ಮದುವೆಯಾಗದೆ ಇರುವವರು ಇಲ್ಲವೆ? ಇಷ್ಟು ಅವಸರ ಏಕೆ ಅವಳ ಮದುವೆಗೆ?' ಎಂದು ಸಮಾಧಾನ ಹೇಳುತ್ತಿದ್ದನು. ಅಲ್ಲದೆ ಮಗಳು ಮದುವೆಯಾಗಿ ಹೋದರೆ ತನ್ನ ಸಂಸಾರ ಸಾಗುವುದೂ ಕಷ್ಟವಾಗುತ್ತದೆ; ಆದ್ದರಿಂದ ಏನಾದರೂ ಮಾಡಿ ಮದುವೆಯಾದ ಮೇಲೆಯೂ ಮಗಳು ಮನೆಯಲ್ಲಿಯೇ ಉಳಿಯುವಂತೆ ಒಬ್ಬ ಮನೆ ಅಳಿಯನನ್ನು ಮಾಡಿಕೊಂಡರೆ ತನ್ನ ಇಳಿ ವಯಸ್ಸಿನಲ್ಲಿ ತನಗೂ ಒಂದು ದಿಕ್ಕಾಗುತ್ತದೆ ಎಂಬುದೂ ಅವನ ಒಳಮನಸ್ಸಾಗಿತ್ತು." ೮

ಗುತ್ತಿ ಮತ್ತು ತಿಮ್ಮಿಗೆ ವಿವಾಹ ಪೂರ್ವದಲ್ಲೇ ಲೈಂಗಿಕ ಅನುಭವವಾಗಿದೆ. ಆದರೆ ಹುಲಿಕಲ್ಲಿನ ನೆತ್ತಿಯ ಮೇಲೆ ರಾತ್ರಿ ಇಬ್ಬರೂ ರಸಾನುಭವದಲ್ಲಿ ಮಲಗಿದ್ದಾಗ ಲೈಂಗಿಕ ಕ್ರಿಯೆಗೆ ತೊಡಗಲು ಒಬ್ಬೊಬ್ಬರಿಗೂ ಭಯ, ಯಾರು ಮೊದಲು ಮುಂದುವರಿಯುತ್ತಾರೆಂಬ ನಿರೀಕ್ಷೆಯಲ್ಲಿ ಇಬ್ಬರೂ ಮಲಗಿ ನಿದ್ರಿಸುತ್ತಾರೆ. ಆದರೆ ಇಬ್ಬರ ನಡುವೆ ಸಂಕೋಚದ ಪ್ರವೃತ್ತಿ ವ್ಯಕ್ತವಾಗುತ್ತದೆ. ಆದರೆ ಇಬ್ಬರೂ ಲೈಂಗಿಕ ಅನುಭವದಲ್ಲಿ ಕನ್ನೆತನವನ್ನು ಹೊಂದಿರದ ರೀತಿಯಲ್ಲಿ ವರ್ತಿಸುವುದು ಸಹವಾಗಿಯೇ ಕಾದಂಬರಿಯಲ್ಲಿ ಬಣ್ಣಿತವಾಗಿದೆ.

"ಆದರೆ ಬೆಳಗಿನ ಜಾವ ತಿಮ್ಮಿಗೆ ಎಚ್ಚರವಾಗಿ ಅವಳು ತಾನಿದ್ದ ಸ್ಥಿತಿಗೆ ಮೊದಲು ಅಚ್ಚರಿಪಟ್ಟು, ಆಮೇಲೆ ಸೊಗಂಬಟ್ಟು, ಕಡೆಗೆ ಗುತ್ತಿಯ ಮೈಗೆ ಮತ್ತಷ್ಟು ಬಿಗಿಯಪ್ಪಿ, ನಿದ್ರಿಸುತ್ತಿದ್ದಂತೆ ನಟಿಸಿದ್ದನು! ಸ್ವಲ್ಪ ಹೊತ್ತಿನಲ್ಲಿಯೆ, ತನ್ನ ಮೈಸೋಂಕಿನಿಂದ ಅವಳ ಮೈಗೆ ಹೇಗೆ ಸವಿ ಏರತೊಡಗಿತ್ತೋ ಹಾಗೆಯೆ ಆಗತೊಡಗಿತ್ತು ಗುತ್ತಿಗೂ! ಇಬ್ಬರಿಗೂ ಅದೇನು ಮೊತ್ತಮೊದಲನೆಯದೂ ಆಗಿರಲಿಲ್ಲ. ಅಂತಹ ರಹಸ್ಯಾನುಭವ! ಪರಸ್ಪರವಾಗಿ ಮಾತ್ರ ಹಾಗಿತ್ತು, ಅಷ್ಟೆ.

ತಿಮ್ಮಿ ತನ್ನ ಸಿಂಬಾವಿ ಬಾವನೂ ಹಿಂದೊಮ್ಮೆ, - ತಮ್ಮ ಕೇರಿಯವನೆ ಆಗಿ ಈಗ ತನ್ನನ್ನು ಮದುವೆಯಾಗಲಿದ್ದ, - ಆ ಬಚ್ಚಬಾವ ತನಗೆ ಮಾಡಿದ್ದಂತೆಯೆ ಮಾಡಬಹುದು ಎಂದು ನಿರೀಕ್ಷಿಸುತ್ತಿದ್ದಳು. ಹಾಗೆಯೆ ಗುತ್ತಿ ಒಮ್ಮೆ ತಾನು ಹಳೆಮನೆಯ ತಮ್ಮವರ ಕೇರಿಗೆ ನಂಟನೊಬ್ಬನ ಮದುವೆಗಾಗಿ ಹೋಗಿ ನಾಲ್ಕುದಿನ ತಳವಾರ ಸಣ್ಣನ

ಬಿಡಾರದಲ್ಲಿದ್ದಾಗ ಅವನ ಹಿರಿಯ ಮಗಳು, ಈಗಲೂ ಅವಿವಾಹಿತೆಯೆ ಆಗಿ ಉಳಿದಿರುವ ಪುಟ್ಟಿ, ತನ್ನನ್ನು ಒಂದು ದಿನ ಬೈಗುಗಪ್ಪಿನಲ್ಲಿ ಒಡೆಯರ ಕಣದ ಹುಲ್ಲು ಬಣಬೆಯ ಹಿಂದೆ ಮರೆಗೆ ಕರೆದುಕೊಂಡು ಹೋಗಿ ಮಾಡಿದ್ದಂತೆಯೆ ತಿಮ್ಮಿಯೂ ಮಾಡಬಹುದು ಎಂದು ಹಾರೈಸುತ್ತಿದ್ದನು. ಆದರೆ ಅವರಿಬ್ಬರಲ್ಲಿ ಯಾರೊಬ್ಬರಿಗೂ ತಾನೆ ಮೊದಲು ಮುಂದುವರಿಯಾಲಾಗದ ಸಂಕೋಚವೊಂದು ಅವರನ್ನು ಪ್ರಣಯದ ಶಿಖರಕ್ಕೇರದಂತೆ ತಡೆದಿತ್ತು." ೯

ಈ ಸನ್ನಿವೇಶವನ್ನ ಕುರಿತು ಎನ್.ಕೆ. ಕೋದಂಡರಾಮವರು ಈರೀತಿ ಅಭಿಪ್ರಾಯಪಡುತ್ತಾರೆ. ಶಿಷ್ಟ ಮತ್ತು ಪರಿಶಿಷ್ಟ ಸಮುದಾಯಗಳ ನಡುವೆ ವ್ಯಕ್ತವಾಗುವ ಮದುವೆ - ಲೈಂಗಿಕ ಚಲನಶೀಲತೆಯ ವೈರುಧ್ಯವನ್ನು ಎನ್.ಕೆ. ಕೋದಂಡರಾಮವರು ಸೂಕ್ತವಾಗಿಯೇ ಗುರುತಿಸಿದ್ದಾರೆ:

"ಗುತ್ತಿ - ತಿಮ್ಮಿಯರಿಗೆ ವಿವಾಹಪೂರ್ವದಲ್ಲಿ ಲೈಂಗಿಕ ಸಂಬಂಧವು ಅನ್ಯ ನೆಲೆಗಳಲ್ಲಿ ಆಗಿದ್ದರೂ, ಅದು ಕೇವಲ ದೈಹಿಕ ತೃಪ್ತಿಗೆ ಸಂಬಂಧಿಸಿದೆ ಆಶಯವಾಗಿದೆ. ಅದನ್ನು ನೆನಪಿಸಿಕೊಳ್ಳುವಾಗ ಅವರಿಗೆ ಯಾವುದೇ ಬಗೆಯ ಪಶ್ಚಾತ್ತಾಪವಾಗಲಿ ಅಥವಾ ಒಬ್ಬರು ಇನ್ನೊಬ್ಬರಿಗೆ ಮಾಡಿಕೊಂಡ ದ್ರೋಹವೆಂದು ಅಸ್ತಿತ್ವ ಪಡೆಯುವ ಶಿಷ್ಟ ಆಲೋಚನಾ ಧಾಟಿಯನ್ನು ತಿರಸ್ಕರಿಸಿಬಿಡುತ್ತಾರೆ. ಅಲ್ಲಿ ಲೈಂಗಿಕತೆ ಎಂಬುದು ಹೊಟ್ಟೆಯ ಹಸಿವಿನಷ್ಟೇ ಸಾಮಾನ್ಯ ಸ್ಥಿತಿಯದಾಗಿದೆ. ಅದರ ನೆನಪು ಅವರಿಗೆ ವ್ಯಕ್ತಿತ್ವವು ಚಲನಶೀಲಗೊಳ್ಳುತ್ತಿರುವುದನ್ನು ಮಾತ್ರ ಸೂಚಿಸುತ್ತದೆ. ಇದೇ ಮಾತನ್ನು ಮುಕುಂದಯ್ಯ ಚಿನ್ನಮ್ಮರ ಸಂದರ್ಭಕ್ಕೆ ಹೇಳಲು ಸಾಧ್ಯವಾಗುವುದಿಲ್ಲ. ಶಿಷ್ಟ ಬದುಕು ಇವರನ್ನ ಹೆಚ್ಚಿನಮಟ್ಟಿಗೆ ಪ್ರಜ್ಞಾಸ್ಥಿತಿಯಲ್ಲಿ ಮಾತ್ರ ಪ್ರತಿಕ್ರಿಯಿಸುವಂತೆ, ಕ್ರಿಯೆಯನ್ನು ಸಾಧ್ಯವಾಗಿಸುವಂತೆ ಮಾಡುವುದರಿಂದ, ಇವರ ನಡುವಿನ ಆರಂಭದ ಕೇವಲ ಪರಿಚಯಾತ್ಮಕ ಸಂಬಂಧ ಕೂಡ ಸಂಕೋಚದಲ್ಲಿ ತಟಸ್ಥವಾಗಿರುತ್ತದೆ. ಅದು ಎಷ್ಟು ಪ್ರಾತಿನಿಧಿಕವಾಗಿದೆಯೆಂದರೆ, ಚಿನ್ನಮ್ಮ ತನ್ನ ಮದುವೆಯಿಂದ ತಪ್ಪಿಸಿಕೊಳ್ಳುವಾಗ ಮುಕುಂದಯ್ಯನೊಡನೆ ಒಂಟಿಯಾಗಿ ಹೋಗುವುದನ್ನು ನಿರಾಕರಿಸುತ್ತಾಳೆ ಮತ್ತು ಅವನ ಮೋರೆ ನೋಡಲು ಕೂಡಾ ಅವಳ ಇಡೀ ವ್ಯಕ್ತಿತ್ವ ನಾಚಿಕೆಯ ಸಂಕೋಚದ ಮುದ್ದೆಯಾಗಿ ಬಿಡುತ್ತದೆ. ಬದುಕನ್ನು ಕಟ್ಟಿಕೊಡುವ ಕಾಲ ಮತ್ತು ವರ್ಗೀಯ ಆವರಣವು ಆ ಗಳಿಗೆಯ ಭಾವನೆಗಳನ್ನು ಕ್ರಿಯಾತ್ಮಕಗೊಳಿಸುತ್ತಲೇ ಬೆಳೆಸುವ ಮತ್ತು ನಿಯಂತ್ರಿಸುವ ಸಾಧ್ಯತೆಗೆ ಮುನ್ನಡೆಯುತ್ತದೆ." ೧೦

ಹೆಗಡೆ ಅವರಿಗೂ ಬೆಟ್ಟಳ್ಳಿಗೌಡರಿಗೂ ಇರುವ ವೈರತ್ವ ಗುತ್ತಿಗೆ ಗೊತ್ತು. ಅದನ್ನು ತನ್ನ ಸ್ವಂತಕ್ಕಾಗಿ ಬಳಸಿಕೊಳ್ಳಲು ಯತ್ನಿಸುತ್ತಾನೆ. ಕೊನೆಗೂ ಹೆಗಡೆ ಅವರನ್ನು ಬಗ್ಗಿಸುತ್ತಾನೆ:

"ನಿಮ್ಮ ಹತ್ರ ಒಂದು ಇಸಿಯ ಕೇಳಾನ ಅಂತಾ....." ಎಂದು ಗುತ್ತಿ ಕಿವಿಯ ಹಿಂದೆ ತಲೆ ಕೆರೆದುಕೊಳ್ಳುತ್ತಾ ಮುಖವೆತ್ತಿದನು.

"ಏನೊ: ಅದು? ಬೊಗಳೋ?"

"ನನ್ನ.....ಸ್ವಾದರ ಮಾವನಮಗಳು ತಿಮ್ಮಿನ....."

"ನಿನಗೇನು ಸೊಕ್ಕೇನೊ? ತಲೆಗಿಲೆ ಕೆಟ್ಟಿದೆಯೋ? ಅವರ ಸಾಲನೆಲ್ಲಾ ತೀರಿಸಿ, ಅವಳಿಗೆ ಅಷ್ಟೊಂದು ತೆರಾ ಕೊಟ್ಟು, ನಾ ನಿನಗೆ ಮದೇಮಾಡ್ಸಿ, ನನ್ನ ಮನೆ ಹಾಳು ಮಾಡಿಕೊಳ್ಳಲೇನೊ? ನಿನಗೆ, ನಿನ್ನ ಅಪ್ಪಗೆ, ಕೊಟ್ಟ ಸಾಲಾನೇ ಕತ್ತರೆ ಬೆಳದ್ಹಾಂಗೆ ಬೆಳೆದು ನಿಂತದೆ! ಅದನ್ನೇ ನೀವು ತೀರಿಸಾದು ಯಾವಾಗಲೋ?.....ಹೇಳ್ತೀನಿ ನೋಡು. ನಿಂಗೆ ಅವಳನ್ನು ಮದೇ ಮಾಡಿಕೊಳ್ಳಲೇಬೇಕು ಅಂತಾ ಅಷ್ಟೊಂದು ತೆವಲು ಹತ್ತಿದ್ರೆ, ಬೆಟ್ಟಳ್ಳಿ ಗೌಡ್ರಿಂದಲೆ ಸಾಲಾ ತಗೊಂಡು, ನನ್ನ ಸಾಲಾನೆಲ್ಲ ತೀರ್ಸಿ, ಅವರ ಕೇರಿಗೇ ಹೋಗಿ, ಅವಳನ್ನೇ ಮದೇ ಮಾಡಿಕೊಂಡು ಸುಕಾಗಿರು! ಯಾರು ಬ್ಯಾಡ ಅಂತಾರೆ?"

"ಗುತ್ತಿ ಒಡೆಯರಿಂದ ಬೇರೆ ರೀತಿಯ ಮಾತನ್ನು ನಿರೀಕ್ಷಿಸಿದ್ದನು. ಒಡೆಯರಿಗೆ ದುಡಿಯಲು ಮತ್ತೊಂದು ಹೆಣ್ಣಾಳು ದೊರೆಯುವುದರಿಂದ ತನ್ನ ಪ್ರಯತ್ನಕ್ಕೆ ಪ್ರೋತ್ಸಾಹ ಲಭಿಸುತ್ತದೆ ಎಂದು ಹಾರೈಸಿದ್ದನು. ಅಲ್ಲದೆ ಆಳುಗಳ ವಿಚಾರಕ್ಕಾಗಿಯೇ ಹಿಂದಿನಿಂದಲೂ ಸಿಂಬಾವಿಗೂ ಬೆಟ್ಟಳ್ಳಿಗೂ ಒಂದು ಸ್ಪರ್ಧಾ ಮನೋಭಾವ ಬೆಳೆದು, ಕೆಲವೊಮ್ಮೆ ಮನಸ್ತಾಪಕ್ಕೂ ಜಗಳಕ್ಕೂ ಕೂಡಾ ಕಾರಣವಾಗಿಬಿಟ್ಟಿತ್ತು. ತನ್ನ ತಂದೆ ಕರಿಸಿದ್ದಗೆ ಬೆಟ್ಟಳ್ಳಿ ಕೇರಿಯ ದೊಡ್ಡಬೀರನ ತಂಗಿ ಗಿಡ್ಡಿಯನ್ನು ತಂದಾಗಲೆ ಬೆಟ್ಟಳ್ಳಿ ಕಲ್ಲಯ್ಯಗೌಡರಿಗೂ ಭರಮೈ ಹೆಗ್ಗಡೆಯ ತಂದೆ ಸಿಂಬಾವಿಯ ದಿವಂಗತ ದುಗ್ಗಣ್ಣ ಹೆಗ್ಗಡೆಯವರಿಗೂ ಹೊಡೆದಾಟವಾಗುವುದರಲ್ಲಿತ್ತಂತೆ ಎಂಬುದೂ ಬಿದ್ದಿತ್ತು ಗುತ್ತಿಯ ಕಿವಿಗೆ, ಪೂರ್ವೇತಿಹಾಸರೂಪದಲ್ಲಿ ಆಗ ಕಲ್ಲೂರು ಸಾಹುಕಾರ ಮಂಜಭಟ್ಟರ ಮಧ್ಯಸ್ಥಿಕೆಯಲ್ಲಿ ಪಂಚಾಯಿತಿ ನಡೆದು, ಸಿಂಬಾವಿ ಕೇರಿಯ ಗುತ್ತಿಯ ಅಪ್ಪ ಕರಿಸಿದ್ದನ ತಂಗಿ ಸೇಸಿಯನ್ನು ಬೆಟ್ಟುಳ್ಳಿ ಕೇರಿಯ ತಿಮ್ಮಿಯ ಅಪ್ಪ ದೊಡ್ಡ ಬೀರನಿಗೆ ಮದುವೆ ಮಾಡಿಸಿ, ಆಳಿಗೆ ಆಳು ಬದಲು ಬಂದು ತುಂಬಿಕೊಳ್ಳುವಂತೆ ಮಾಡಿ, ಎರಡು ಮನೆತನಗಳಿಗೂ ರಾಜಿ ಮಾಡಿಸಿದ್ದರಂತೆ. ಎರಡು ಮನೆತನಗಳಿಗೂ ಅಂತಹ ಜಗಳಗಳೂ ಅಂತಹ ರಾಜಿಗಳೂ ಅನೇಕ ಸಾರಿ ಅನೇಕ ಕಾರಣಗಳಿಗಾಗಿ ನಡೆದಿದ್ದುವು."

....."ನಾನೊಂದು ನಿಮ್ಮ ಕಾಲ ಕಸ! ಸಾಯೋವರೆಗೂ ನಿಮ್ಮ ಗುಲಾಮನಾಗಿ ದುಡಿದು ರುಣ ತೀರಿಸ್ತೀನಿ! ಅಯ್ಯಾ, ನಾನೇನು ನನಗಾಗಿ ಮಾಡಿದ್ದಲ್ಲ. ನಮ್ಮ ಧಣೇರ ಮಾನಮಾರ್ಯದೆ ಕಾಪಾಡಕ್ಕಾಗಿ ನಾನು ಹಾಂಗೆ ಮಾಡಿದ್ದು....."

"ಏನು ಮಾಡಿದೆಯೋ ನೀನು?" ಒಡೆಯರ ಪ್ರಶ್ನೆಯನ್ನು ಗಮನಿಸದವನಂತೆ ಮುಂಬರಿದನು ಗುತ್ತಿ.

"ಆ ಲುಚ್ಚ! ಆ ನೀಚ! ಆ ಹೊಲೇರ ಕುರುದೆ! ಆ ಬಚ್ಚ, ಅಂವ ಮೂರುಕಾಸಿನ ಮನುಷ್ಯ, ನನ್ನ ಒಡೇರನ್ನ ನನ್ನ ಮುಂದೆ 'ಅವನು ಇವನು ನೀನು ತಾನು' ಅಂತಾ ಮಾತಾಡ ಬೈದೇನು? ಹೇಳಿ! ನೀವೇ ಹೇಳಿ! ಅದಕ್ಕೆ ನಾನು ಮಾಡಿದ್ದು ಹಾಂಗೆ!....."

"ಏನು ಮಾಡಿದ್ದೊ? ಬಿಡಿಸಿ ಹೇಳೊ ಸರಿಯಾಗಿ," ಬೆಟ್ಟಳ್ಳಿಗೌಡರ ಪ್ರತಿಜ್ಞೆಯ ವಿಚಾರವಾಗಿ ಹೇಳುವಾಗ ಸಿಂಬಾವಿ ಹೆಗ್ಗಡೆಯವರಿಗೆ ಅವಮಾನಕರವಾಗಿ ಅವರನ್ನು ಕೆರಳಿಸುವಂತಹ ಅಲ್ಪಸ್ವಲ್ಪ ನಿಂದಾಂಶವನ್ನು ಸೇರಿಸಲು ಮರೆಯಲಿಲ್ಲ."

"ಏನೋ? ನಿಜ ಹೇಳ್ತಿದ್ದಿಯೋನೋ?" ಹೆಗ್ಗಡೆಯ ಗಡಸುದನಿ." "ಧರ್ಮಸ್ಥಳದ ದೇವರಾಣೆಗೂ! ನಾ ಹೇಳಿದ್ದು ಸುಳ್ಳಾಗಿದ್ರೆ ನನ್ನ ನಾಲಿಗೆ ಬಿದ್ದೇ ಹೋಗ್ಲಿ!"

"ಆ ಹುಡುಗಿ ಅದರ ಒಪ್ಪಿಗೆಯಿಂದಲೆ ನಿನ್ನ ಸಂಗಡ ಬಂತೇನೊ?".

"ಹೌದು, ನನ್ನೊಡೆಯಾ, ಅದು, ಅದರ ಅಪ್ಪ, ಇಬ್ಬರೂ ಒಪ್ಪಿಗೆ ನಾ ಕಾಣಾದೆ ತಡ, ಅತ್ತೆ 'ಅಪ್ಪಾ, ಹೆಂಗಾದ್ರೂ ಮಾಡಿ ನನ್ನ ಹುಡುಗೀನ ಬದುಕ್ಸು' ಅಂತ ಹೇಳಿ ನನ್ನ ಸಂಗಡ ರಾತ್ರಾ ರಾತ್ರಿ ಕಳ್ಸಿಕೊಟ್ಟು, ಬ್ಯಾರೆ ಯಾರಿಗೂ ಗೊತ್ತಿಲ್ದಂಗೆ. ನಂದೇನೂ ತಪ್ಪಿಲ್ಲ, ನನ್ನೊಡೆಯಾ!" ೧೧

ಹೀಗೆ ಗುತ್ತಿ ಹೆಗ್ಗಡೆ ಅವರ ಮನೆಯ ಜೀತದ ಆಳಾಗಿ ದುಡಿಯಲು ನಿರ್ಧರಿಸುತ್ತಾನೆ. ತನ್ನ ಹಾಗೂ ತನ್ನ ಅಪ್ಪನ ಸಾಲವನ್ನು ದುಡಿದು ತೀರಿಸುವುದಾಗಿ ಭರವಸೆ ನೀಡುತ್ತಾನೆ. ತನ್ನನ್ನು ಒಪ್ಪಿ, ಬಂದಿರುವ ಗುತ್ತಿ ಮತ್ತು ತನ್ನತ್ತೆ ಸೇಸಿ ತನ್ನ ಮತ್ತು ಗುತ್ತಿಯ ನಡುವಿನ ಮದುವೆಗೆ ಒಪ್ಪಿಗೆ ನೀಡಿರುವುದನ್ನು ವಿವರಿಸುತ್ತಾನೆ. ಬೆಟ್ಟಳ್ಳಿಗೌಡರ ವಿರುದ್ಧ ತನ್ನ ಮಾತುಗಾರಿಕೆಯಿಂದ ಹೆಗ್ಗಡೆ ಅವರನ್ನ ಎತ್ತಿಕಟ್ಟುತ್ತಾನೆ. ಹೆಗ್ಗಡೆ ಅವರಿಗೆ ಗುತ್ತಿಗೆ ನೆರವು ನೀಡುವುದರ ಮೂಲಕ ಮತ್ತೊಬ್ಬಳು ಹೆಣ್ಣಾಳು ಜೀತದಾಳಾಗಿ ಸುಲಭವಾಗಿ ಸಿಗುತ್ತಾಳೆಂದು ಲೆಕ್ಕಾಚಾರ. ಕೊನೆಗೆ ಹೆಗಡೆ ಗುತ್ತಿಯ ಮಾತಿಗೆ ಒಪ್ಪಿಕೊಳ್ಳುತ್ತಾನೆ. ತಿಮ್ಮಿ ಮತ್ತು ಗುತ್ತಿಯರು ತಮ್ಮ ಪ್ರಣಯದ ಯಾತ್ರೆಯಲ್ಲಿ ಯಶಸ್ವಿಯಾಗುತ್ತಾರೆ.

'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಈ ಎರಡು ಕಥನಗಳಲ್ಲಿ ಕುವೆಂಪು ಸಂವೇದನೆ ಅಸಾಮರಸ್ಯ 'ಮದುವೆ'ಗಳಿಂದ (ಅಸಾಮರಸ್ಯ ದಾಂಪತ್ಯಗಳಿಂದ) ಅನೇಕ ಕುಟುಂಬಗಳು ವಿಘಟನೆಗೊಳ್ಳುವ, ಮಾನಸಿಕ ಕ್ಲೇಶಗಳಿಗೆ ಕಾರಣವಾಗುವ, ಕುಟುಂಬದ ಸದಸ್ಯರಲ್ಲಿ ಅಪನಂಬಿಕೆಗಳಿಗೆ ಗುರಿಯಾಗುವ ಅಷ್ಟೇ ಏಕೆ ಇಡೀ ಕುಟುಂಬವೇ ಆರ್ಥಿಕವಾಗಿ ದಿವಾಳಿತನಕ್ಕೆ ಗುರಿಯಾಗಿ ನಾಶವಾಗುವುದಕ್ಕೆ ಕಾರಣಗಳನ್ನು ಶೋಧಿಸಿಕೊಳ್ಳುತ್ತವೆ.

'ಮದುವೆ' ಎಂಬ ಸಂಸ್ಥೆಯನ್ನು ಪುರೋಹಿತಶಾಹಿ ವ್ಯವಸ್ಥೆ ಸನಾತನ ಸಂಪ್ರದಾಯಗಳಿಗೂ, ಗೊಡ್ಡು ಕಂದಾಚಾರಗಳಿಗೂ ಬಲಿಗೊಟ್ಟದನ್ನು ಈ ಎರಡು ಕಥನಗಳು ಉದ್ದಕ್ಕೂ ವಿಶ್ಲೇಷಿಸುತ್ತವೆ. ವರದಕ್ಷಿಣೆ, ವಧುದಕ್ಷಿಣೆ, ಸಾಂಪ್ರದಾಯಿಕ ಆಡಂಬರದ ದುಂದುವೆಚ್ಚದ ಆಚರಣೆಗಳನ್ನಾಗಿ 'ಮದುವೆ' ಗಳನ್ನು ರೂಪಿಸಿದ ಪುರೋಹಿತಶಾಹಿ

ತಂತ್ರಗಳನ್ನು ಕುವೆಂಪು ಸಂವೇದನೆ ಈ ಎರಡು ಕಥನಗಳ ಉದ್ದಕ್ಕೂ ವಿಡಂಬಿಸುತ್ತದೆ. 'ಮದುವೆ'ಯನ್ನು ಕುರಿತ ಅವರ ಜಿಜ್ಞಾಸೆ ಕೇವಲ ಈ ಕಥನಗಳಲ್ಲಿ ಮಾತ್ರವಲ್ಲದೆ ಅವರ ಒಟ್ಟು ಕೃತಿ ಸಮೂಹದ ಸಂದರ್ಭದಲ್ಲಿಯೂ ಈ ಚಿಂತನೆಯನ್ನು ಕಾಣಬಹುದಾಗಿದೆ. ಇಂಥ ದುಂದುವೆಚ್ಚದ, ಆಡಂಬರದ, ಮೌಢ್ಯದ ಕಂದಾಚಾರಗಳ ವಿವಾಹಗಳನ್ನು ಧಿಕ್ಕರಿಸಲೋ ಎಂಬಂತೆ 'ಮಂತ್ರ ಮಾಂಗಲ್ಯ'ವೆಂಬ ಹೊಸ ವಿವಾಹ ವಿಧಾನವೊಂದನ್ನು ಶೋಧಿಸಿಕೊಂಡದ್ದು ಕುವೆಂಪುರವರ ಈ ಶತಮಾನದ ಬಹು ದೊಡ್ಡ ಕೊಡುಗೆ ಎನ್ನಬಹುದು. 'ಮಂತ್ರ ಮಾಂಗಲ್ಯ' ಸರಳ ವಿವಾಹ ವಿಧಿಯೊಂದನ್ನು ರೂಪಿಸುವುದರಿಂದ ಸನಾತನ ವಿವಾಹ ಪದ್ಧತಿಗೆ ಪ್ರತ್ಯಕ್ಷವಾಗಿಯೂ ಮತ್ತು ಪರೋಕ್ಷವಾಗಿಯೂ ಮುಖಾಮುಖಿಯಾಗುವುದರೊಂದಿಗೆ ಪ್ರತಿರೋಧ ಒಡ್ಡುವುದನ್ನು ಕಾಣುತ್ತೇವೆ. ಮಂತ್ರ ಮಾಂಗಲ್ಯದ ಮುಖ್ಯವಾದ ಕೆಲವು ಕನಿಷ್ಠ ಕಡ್ಡಾಯವಾಗಿ ಪಾಲಿಸಬೇಕಾದ ಶಿಸ್ತುಗಳನ್ನು ಈ ಕೆಳಕಂಡಂತೆ ಉದಾಹರಿಸಬಹುದು.

> "ಮಂತ್ರಮಾಂಗಲ್ಯ ಸರಳ ವಿವಾಹವಿಧಿಯಂದೇ ರೂಪಿಸಿರುವುದರಿಂದ ಈ ವಿವಾಹದ ಯಾವೊಂದು ಕಾರ್ಯಕ್ರಮವನ್ನು ಅದ್ದೂರಿಯಾಗಿ ನೆರವೇರಿಸಕೂಡದು." ....."ಮಂತ್ರಮಾಂಗಲ್ಯದ ಮದುವೆಯಲ್ಲಿ ಉಡುಗೊರೆಗಳು ನಿಷಿದ್ದ. ಯಾರು ಯಾವಾಗ ಬೇಕಾದರೂ ವಿವಾಹದ ಸವಿನೆನಪಿಗೆ ವಧುವರರಿಗೆ ಉಡುಗೊರೆಗಳನ್ನು ಕೊಡಬಹುದು"..... "ಯಾವುದೇ ವಾದ್ಯ ಓಲಗ ತಮ್ಮಟೆ ಧ್ವನಿವರ್ಧಕ ಮುಂತಾದ ಪ್ರಚಾರ ಸಾಮಗ್ರಿಗಳನ್ನು ಬಳಸಬಾರದು.".....
> "ಮಂತ್ರಮಾಂಗಲ್ಯ ವಿವಾಹಕ್ಕೆ ರಾಹುಕಾಲ, ಗುಳಿಗಕಾಲ, ಯಮಗಂಡಕಾಲ, ಯಾವೂ ಇಲ್ಲ"..... "ಮಂತ್ರಮಾಂಗಲ್ಯ ಮದುವೆಯಲ್ಲಿ ಈ ಪುಸ್ತಕದಲ್ಲಿ ಸೂಚಿಸಿರುವ ಮಂತ್ರ ಮತ್ತು ಪ್ರತಿಜ್ಞಾವಿದಿಗಳ ಉಪದೇಶವಲ್ಲದೆ ಇನ್ನಾವುದೇ ಶಾಸ್ತ್ರಾಚಾರಗಳನ್ನಾಗಲೀ, ಜೋಯಿಸರಿಂದ ಜಾತಕಾದಿಗಳನ್ನು ನೋಡಿಸುವುದೇ ಆಗಲೀ ನಿಷಿದ್ಧ. ಜಾತಿಪದ್ಧತಿ, ಸ್ತ್ರೀ ಅಸಮಾನತೆ, ಅಸ್ಪೃಷ್ಯತೆ ಮೊದಲಾದ ಅನಿಷ್ಟಗಳಿಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣವಾಗಿರುವ ಈ ಶಾಸ್ತ್ರಾಚಾರಗಳಿಂದ ಭಾರತೀಯರನ್ನು ವಿಮುಕ್ತಗೊಳಿಸುವುದೇ ಮಂತ್ರ ಮಾಂಗಲ್ಯದ ಮೂಲ ಉದ್ದೇಶ. ಇಲ್ಲಿ ಯಾವ ವೃತ್ತಿ ಪುರೋಹಿತನಿಗೂ ಪ್ರವೇಶವಿಲ್ಲ." ೨

ಈ ಮೇಲೆ ಉದ್ಧರಿಸಿದ ಮಂತ್ರಮಾಂಗಲ್ಯ ವಿವಾಹ ವಿಧಾನದ ಈ ಎಲ್ಲ ನಿಯಮಗಳು ಸನಾತನ ವೈವಾಹಿಕ ಪದ್ಧತಿಗೆ ಪರ್ಯಾಯವಾಗಿ ಶೋಧಿಸಿಕೊಂಡ ಹೊಸ ವೈವಾಹಿಕ ಪದ್ಧತಿಯಾಗಿದೆ. ಇಂಥ ಶೋಧನೆಯಿಂದ ಸನಾತನ ಪುರೋಹಿತಶಾಹಿ ವ್ಯವಸ್ಥೆಯು ರೂಪಿಸಿದ ಅರ್ಥಹೀನ ಆಚಾರ ವಿಚಾರಗಳಿಗೆ, ಆಡಂಬರಗಳಿಗೆ ಅವಕಾಶವಿಲ್ಲದ ಪರ್ಯಾಯ ವ್ಯವಸ್ಥೆಯನ್ನು ರೂಪಿಸಿದ್ದು ಕುವೆಂಪುರವರ ಸಾಂಸ್ಕೃತಿಕ ಕೊಡುಗೆಯು ಇದಾಗಿದೆ. ಇಂಥ ಸಾಂಸ್ಕೃತಿಕ ಕೊಡುಗೆಗಳ ಹಿಂದೆ ಗಾಂಧಿ ವಿಚಾರಧಾರೆ ಗಾಢ ಪ್ರಭಾವವಿರುವಂತೆಯೇ ರಾಷ್ಟ್ರೀಯ ಚಳುವಳಿಯ ಸುಧಾರಣಾವಾದಿ ನೆಲೆಗಳ ಪ್ರಭಾವವನ್ನೂ ಇಂಥ ಚಿಂತನೆಗಳ ಹಿಂದೆ ನಿಚ್ಚಳವಾಗಿ ಗುರುತಿಸಿಕೊಳ್ಳಬಹುದು. ಕುವೆಂಪು ಸಂವೇದನೆ

ಪಾರಂಪರಿಕ ಅರ್ಥಹೀನ ಕೌಟುಂಬಿಕ ಹಾಗೂ ವೈವಾಹಿಕ ಪದ್ಧತಿಗಳನ್ನು ಕೇವಲ ವಿಮರ್ಶೆಗೆ, ವಿಶ್ಲೇಷಣೆಗೆ ಗುರಿಪಡಿಸಿದ್ದು ಮಾತ್ರವಲ್ಲದೆ ಒಂದು ಪರ್ಯಾಯ ಸರಳ, ಆಡಂಬರವಿಲ್ಲದ ವಿವಾಹ ಪದ್ಧತಿಯೊಂದನ್ನು ಈ ಕಥನಗಳ ಆಚೆಗೂ ಚಿಂತಿಸಿದ್ದು ಅವರ ಸಾಂಸ್ಕೃತಿಕ ಬದುಕಿನ ಬಗೆಗೆ ಅವರು ತೋರಿದ ಬಹುಮುಖ್ಯ ದಾರ್ಶನಿಕ ಕಾಳಜಿಗಳಲ್ಲಿ ಇದೂ ಒಂದಾಗಿದೆ.



# ಅಡಿಟಿಪ್ಪಣಿ

೧. ಕುವೆಂಪು, ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ಉದಯರವಿ ಪ್ರಕಾಶನ, ಮೈಸೂರು, ೧೯೮೬, ಪು : ೨೨ - ೨೩

೨. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೩೪ - ೩೬

೩. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೮೬

೪. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೭೮ - ೭೯

೫. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೮, ೯, ೧೧

೬. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೯

೭. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೪೧

೮. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೯೪ - ೯೫

೯. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೨೧೮ - ೨೧೯

೧೦. ಕೋದಂಡರಾಮ ಎನ್.ಕೆ, ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯಿತ್ರಿ ಸ್ಮಾರಕ ಗ್ರಂಥಮಾಲೆ, ೧೯೯೬, ಪು : ೯೩ - ೯೪

೧೧. ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೩೨೫ - ೩೨೬, ೩೨೮

೧೨. ಕುವೆಂಪು, ಮಂತ್ರಮಾಂಗಲ್ಯ, ಉದಯರವಿ ಪ್ರಕಾಶನ, ಮೈಸೂರು, ೧೯೬೭, ಪು : ೧ - ೩



## ೬

# ರಾಷ್ಟ್ರೀಯ ಚಳುವಳಿ ಮತ್ತು ಸುಧಾರಣಾ ನೆಲೆಗಳು

ಬ್ರಿಟಿಷರ ಆಗಮನದಿಂದ, ಆ ಮೂಲಕ ಹರಿದು ಬಂದ ಹೊಸ ವಿಚಾರಧಾರೆಯ ಸಂಪರ್ಕದಿಂದ ಭಾರತದ ಸಾಂಸ್ಕೃತಿಕ ಪರಿಸರ ಪುನರ್ ಮೌಲ್ಯಮಾಪನಕ್ಕೆ ಗುರಿಯಾದುದನ್ನು ಅನೇಕ ಸಾಂಸ್ಕೃತಿಕ ಚಿಂತನೆಗಳು ಸ್ಪಷ್ಟಪಡಿಸಿರುವುದು ನಮ್ಮೆಲ್ಲರಿಗೂ ತಿಳಿದ ವಿಷಯವೆ ಆಗಿದೆ. ಅಂದರೆ ಸಂಸ್ಕೃತಿಯ ಮೂಲಭೂತ ನೆಲೆಗಳನ್ನು ಪುನರ್ ಮೌಲ್ಯಮಾಪನಕ್ಕೆ ಒಳಪಡಿಸುವದರ ಮೂಲಕ, ಹೊಸ ಮಾನವೀಯ ವಿಚಾರಧಾರೆಯನ್ನು ಶೋಧಿಸಿಕೊಳ್ಳಲು ಭಾರತೀಯ ಸಂವೇದನೆ ಸನ್ನದ್ದುಗೊಂಡು, ಅನೇಕ ಬದಲಾವಣೆಗಳಿಗೆ ಕಾರಣವಾದುದನ್ನು ಮತ್ತು ಸ್ಥಳೀಯ ಧರ್ಮ, ಜಾತಿ ಮೊದಲಾದ ಅನಿಷ್ಟ ಆಚಾರ ವಿಚಾರಗಳಲ್ಲಿನ ಮೌಢ್ಯತೆಗಳನ್ನು ತೊಡೆದುಹಾಕಿಕೊಳ್ಳಲು ಪ್ರಯತ್ನಿಸಿದ್ದನ್ನು ಚರಿತ್ರೆ ಸ್ಪಷ್ಟಪಡಿಸುತ್ತವೆ. ಬ್ರಿಟಿಷರು ಭಾರತವನ್ನು ಪ್ರವೇಶಿಸಿದಾಗ ರಾಜಕೀಯ ಪ್ರಪಂಚದ ದುರಂತಗಳು ಇದ್ದಂತೆಯೇ ಧಾರ್ಮಿಕ ಪ್ರಪಂಚದಲ್ಲಿಯೂ ಅನೇಕ ಸಂಕುಚಿತ ಭಾವನೆಗಳು, ಹೀನ ಆಚಾರ ವಿಚಾರಗಳು, ಮನುಷ್ಯ ಮನುಷ್ಯರ ನಡುವೆ ಅಂತರಗಳನ್ನು ಉಂಟುಮಾಡುವ ಜಾತಿಪದ್ಧತಿಯಂತಹ ಕ್ರೂರ ಆಚರಣೆಗಳಿದ್ದವು. ಹಾಗೆಯೇ ಅನೇಕ ಸಾಮಾಜಿಕ ಸಮಸ್ಯೆಗಳಿಗೆ ಭಾರತದ ಪರಿಸರ ಸಿಕ್ಕಿಕೊಂಡಿತ್ತು. ಸತಿಸಹಗಮನ ಪದ್ಧತಿ, ಬಾಲ್ಯವಿವಾಹ ಮೊದಲಾದ ಕ್ರೂರ ಆಚರಣೆಗಳ ಕಪಿಮುಷ್ಠಿಗೆ ಶ್ರೀ ಸಾಮಾನ್ಯನ ಬದುಕು ಗುರಿಯಾಗಿದ್ದಂತೆ, ಅನೇಕ ದುಶ್ಚಟಗಳಿಗೂ ಶ್ರೀ ಸಾಮಾನ್ಯನ ಬದುಕು ಬಲಿಯಾಗಿ ದುರಂತದಲ್ಲಿ ಇದ್ದುದ್ದನ್ನು ಹತ್ತೊಂಬತ್ತನೇ ಶತಮಾನದ ಹಾಗೂ ಇಪ್ಪತ್ತನೆಯ ಶತಮಾನದ ಆದಿಭಾಗದ ಚರಿತ್ರೆಯ ದಾಖಲೆಗಳು ಸ್ಪಷ್ಟಪಡಿಸುತ್ತವೆ. ಬ್ರಿಟಿಷರ ಆಗಮನದಿಂದ ಹಾಗೂ ಆ ಮೂಲಕ ಪರಿಚಿತವಾದ ಹೊಸ ವಿಚಾರಧಾರೆ ಮತ್ತು ಇಂಗ್ಲೀಷ್ ಶಿಕ್ಷಣದ ಪ್ರಭಾವದಿಂದ ಭಾರತೀಯ ಸಂವೇದನೆಯಲ್ಲಿ ಹೊಸ ಚೈತನ್ಯ ಮತ್ತು ಹೊಸ ಎಚ್ಚರ ಉಂಟಾಯಿತು. ಅಂಥ ಹೊಸ ಎಚ್ಚರ ಹಾಗೂ ಚೈತನ್ಯ ಸ್ಥಳೀಯವಾಗಿ ನಿರ್ಮಾಣವಾಗಿದ್ದ ಅನಿಷ್ಟಕಾರಕ ಪದ್ಧತಿಗಳ ನಿರ್ಮೂಲನೆಗಾಗಿ ಅನೇಕ ಸುಧಾರಣಾ ಮಾರ್ಗಗಳಿಗೆ ಕೈಹಾಕಿತು. ಜೊತೆಗೆ ಪರಕೀಯ ಸಂಸ್ಕೃತಿಗಳ ಸಂಘರ್ಷಕ್ಕೆ ಒಳಗಾಗುತ್ತಲೇ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಶ್ರಮಿಸಿತು. ಇಂತಹ ಸಂವೇದನೆಯುಳ್ಳ ಅನೇಕ ಸುಧಾರಣಾವಾದಿ ಮನೋಭಾವದ ರಾಷ್ಟ್ರಮಟ್ಟದ ನಾಯಕರು ಆ ಸಂದರ್ಭದಲ್ಲಿ ಭಾರತದಲ್ಲಿನ ಅನಿಷ್ಟಕಾರಕ

ವಿಚಾರಗಳನ್ನು ತೊಡೆದುಹಾಕಲು ಶ್ರಮಿಸಿದ್ದು ನಮಗೆ ತಿಳಿದ ವಿಷಯವೇ ಆಗಿದೆ. ಅಂಥ ಸುಧಾರಣಾವಾದಿ ನಾಯಕರು ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಚಳುವಳಿಗಳಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡದ್ದಲ್ಲದೆ ಭಾರತೀಯ ಸಾಂಪ್ರದಾಯಿಕ ಸಮಾಜದಲ್ಲಿದ್ದ ಅನಿಷ್ಟಕಾರಕ ದುಶ್ಚಟಗಳನ್ನು ನಿರ್ಮೂಲನ ಮಾಡಲು ಕ್ರಿಯಾಶೀಲರಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡದ್ದನ್ನು ಚರಿತ್ರೆಯಿಂದ ತಿಳಿಯಬಹುದಾಗಿದೆ. ಸತಿಪದ್ಧತಿ, ಬಾಲ್ಯವಿವಾಹ, ಜಾತಿಪದ್ಧತಿ ಹಾಗೂ ಮದ್ಯಪಾನ ಮೊದಲಾದ ಅನಿಷ್ಟ ಪದ್ಧತಿಗಳಿಂದ ಜನತೆಯನ್ನು ಮುಕ್ತಗೊಳಿಸಲು ಈ ಸುಧಾರಣಾವಾದಿಗಳ ಸಂವೇದನೆ ಶ್ರಮಿಸಿದ್ದನ್ನು ಅನೇಕ ಸಾಂಸ್ಕೃತಿಕ, ಚಾರಿತ್ರಿಕ ದಾಖಲೆಗಳು ಸ್ಪಷ್ಟಪಡಿಸುತ್ತವೆ. ಇಂಥ ಸುಧಾರಣಾವಾದಿಗಳ ಸುಧಾರಣೆಯ ಪ್ರಭಾವಗಳು ಇಡೀ ಭಾರತದಾದ್ಯಂತ ಪ್ರಸರಣಗೊಂಡು, ಭಾರತೀಯ ಬದುಕಿನಲ್ಲಿ ಅನೇಕ ಬದಲಾವಣೆಗಳಿಗೆ ಕಾರಣವಾದುದು ಅನೇಕ ಸಾಂಸ್ಕೃತಿಕ, ಸಾಹಿತ್ಯಿಕ ದಾಖಲೆಗಳಿಂದ ತಿಳಿದುಬರುವ ಹಾಗೂ ಸ್ಪಷ್ಟಗೊಳ್ಳುವ ಸಂಗತಿಯಾಗಿದೆ. ನಮ್ಮ ಸಾಂಸ್ಕೃತಿಕ ದಾಖಲೆಗಳ ಮುಖ್ಯ ಆಕರಗಳಂತೆ ಕಾಣುವ ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಥನಗಳು, ಈ ಮೇಲಿನ ಸಾಂಸ್ಕೃತಿಕ ಆಗುಹೋಗುಗಳ ಬಗೆಗೆ ತೀಕ್ಷ್ಣವಾಗಿ ವಿಮರ್ಶೆ ಮತ್ತು ವಿಶ್ಲೇಷಣೆಗಳಿಗೆ ಒಳಪಡಿಸುವುದರ ಮುಖೇನ, ಒಂದು ಬಗೆಯ ಸಂಕಥನವನ್ನು ಕಟ್ಟಿಕೊಡುತ್ತವೆ. ಈ ಸಂಕಥನ ಪುರೋಹಿತಶಾಹಿ, ವಸಾಹತುಶಾಹಿ, ಇಂಗ್ಲೀಷ್ ವಿದ್ಯಾಭ್ಯಾಸ, ರಾಜಕೀಯ ಪರಿಸರ ಮತ್ತು ಧಾರ್ಮಿಕ ಪರಿಸರಗಳ ವಿಭಿನ್ನ ನೆಲೆಗಳನ್ನು ಪರಿಚಯಿಸುವಂತೆಯೇ ಸಾಮಾಜಿಕ ಅನಿಷ್ಟಗಳಾದ ಮದ್ಯಪಾನದಂತಹ ದುಶ್ಚಟಗಳ ಬಗೆಗೆ ಕೈಗೊಂಡ ಕಥನಗಳ ಹಲವು ಮುಖಗಳನ್ನೂ ಪರಿಚಯಿಸುತ್ತವೆ.

ಮಲೆನಾಡನ್ನು ಆವರಿಸಿರುವ ಅಜ್ಞಾನ, ಗೊಡ್ಡು ಆಚಾರಗಳಲ್ಲಿಯ ಮೌಢ್ಯತೆ, ಮಲೇರಿಯಾಗಳಂತೆ ಮನುಷ್ಯನ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಹಾನಿಕಾರಕವಾದ ಮದ್ಯಪಾನ ಮಲೆನಾಡಿನ ಜನತೆಯ ಪುರೋಭಿವೃದ್ಧಿಗೆ ಹಾನಿಕಾರಕವೆಂದು ಕುವೆಂಪು ನಲ್ವತ್ತರ ದಶಕದಲ್ಲಿಯೇ ಈ ಕೆಳಕಂಡಂತೆ ಎಚ್ಚರಿಸುತ್ತಾರೆ.

> "ಆರೋಗ್ಯಕ್ಕೆ ಹಾನಿತರುವ ಇನ್ನೆರಡು ವಿಷಯಗಳು ನಮ್ಮಲ್ಲಿವೆ. ಒಂದನೆಯದು ಮದ್ಯಪಾನ; ಎರಡನೆಯದು ಬಾಲ್ಯವಿವಾಹ. ಮದ್ಯಪಾನದಿಂದ ಮನುಷ್ಯನಿಗೆ ತಾತ್ಕಲಿಕ ಉತ್ಸಾಹ ಉಲ್ಲಾಸಗಳು ತೋರಿಬಂದರು ಪರಿಣಾಮದಲ್ಲಿ ಅದು ಅನರ್ಥಕಾರಿ. ದೇಹವನ್ನು ನಿರ್ವೀರ್ಯವನ್ನಾಗಿಯೂ ಮನಸ್ಸನ್ನು ನಿಸ್ತೇಜವನ್ನಾಗಿಯೂ ಮಾಡಿ ಆತ್ಮನಾಶಗೈಯುತ್ತದೆ. ಮದ್ಯಪಾನದಿಂದಾಗುತ್ತಿರುವ ಮಹಾ ಕಷ್ಟ ನಷ್ಟಗಳ ಪರಂಪರೆಗಳನ್ನು ಅರಿತು, ಮಹಾತ್ಮ ಗಾಂಧಿಯವರೇ ಮೊದಲಾದ ಮಹನೀಯರು ಅದನ್ನು ತೊಲಗಿಸಲು ಸರ್ವಪ್ರಯತ್ನ ಮಾಡುತ್ತಿದ್ದಾರೆ. ಸೆಕೆದೇಶದವರ ಮಾತಂತಿರಲಿ; ಚಳಿದೇಶದವರೂ ಕೂಡ ಮದ್ಯಪಾನದ ಪಿಶಾಚಿಯಿಂದ ಪಾರಾಗಲು ಹಾತೊರೆಯುತ್ತಿದ್ದಾರೆ. ಮದ್ಯಪಾನದಿಂದ ಮಾನ, ಪ್ರಾಣ, ಧನ ಎಲ್ಲವೂ ನಷ್ಟ. ಮದ್ಯಪಾನಿಯ ಮನದಲ್ಲಿಯೂ ಶಾಂತಿಯಿರುವುದಿಲ್ಲ. ಆತನೂ ದಿನದಿನವೂ ಅಧೋಗತಿಗಿಳಿಯುತ್ತಾನೆ. ಆತನಿಗೆ ಸಂಭವಿಸುವ ಮಕ್ಕಳು ಕೂಡ ಮಂದ ಅಥವಾ ವಕ್ರಬುದ್ಧಿಗಳಾಗಿಯೂ

ಅಬಲರಾಗಿಯೂ ಇರುತ್ತಾರೆ. ಆದ್ದರಿಂದ ಮದ್ಯಪಾನಿಯ ಪಾಪ ಅವನೊಂದಿಗೇ ನಶಿಸುವುದಿಲ್ಲ; ಅದು ಆತನ ಸಂತಾನಕ್ಕೂ, ಅಲ್ಲಿಂದ ಸಮಾಜಕ್ಕೂ ಹಬ್ಬಿ ಕೇಡು ಮಾಡುತ್ತದೆ. ಆದ್ದರಿಂದ ತಮ್ಮ ಮತ್ತು ತಮ್ಮ ಜನಾಂಗದ ಶ್ರೇಯಸ್ಸನ್ನು ಬಯಸುವರೆಲ್ಲರೂ ಮದ್ಯಪಾನವೆಂಬ ಪಿಶಾಚಿಯನ್ನು ಸರ್ವಪ್ರಕಾರದಿಂದಲೂ ಸಂಹರಿಸುವುದಕ್ಕೆ ಪ್ರಯತ್ನಿಸಬೇಕು." [೧]

ಈ ಮೇಲಿನ ಉದ್ಧರಣೆಯ ಹಿಂದೆ ಗಾಂಧೀಜಿಯವರ ಮದ್ಯಪಾನ ನಿಷೇಧ ಕುರಿತ ವಿಚಾರಧಾರೆ ಗಾಢವಾಗಿರುವುದನ್ನು ಕಾಣುತ್ತೇವೆ. ಹಾಗೆಯೇ ಮದ್ಯಪಾನದಿಂದ ವ್ಯಕ್ತಿ, ಕುಟುಂಬ ಹಾಗೂ ಸಾಮಾಜಿಕ ನೆಲೆಯಲ್ಲಿ ಎದುರಾಗುವ ಸಮಸ್ಯೆಗಳನ್ನು ಕುವೆಂಪು ಸಂವೇದನೆ ಇಲ್ಲಿ ತೀವ್ರವಾಗಿ ಚಿಂತಿಸಿರುವುದನ್ನು ಕಾಣುತ್ತೇವೆ. ಮದ್ಯಪಾನದಿಂದ ಒದಗುವ ದುರಂತಗಳ ವಿಚಾರಗಳು ಇಲ್ಲಿ ವೈಚಾರಿಕವಾಗಿ, ವೈಜ್ಞಾನಿಕವಾಗಿ ಸ್ಪಷ್ಟಪಡಿಸಿದಂತೆ, ಕುವೆಂಪು ಅವರ ಕಥನಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮಲೆನಾಡಿನ ಬದುಕಿನ ಅನೇಕ ಸ್ತರಗಳ ಕೌಟುಂಬಿಕ ದುರಂತಗಳ ಸರಮಾಲೆಯ ಚಿತ್ರಗಳಿಂದ ವೇದ್ಯವಾಗಿಸುತ್ತವೆ. ಮದ್ಯಪಾನ ಮಲೆನಾಡಿನ ಬದುಕಿನಲ್ಲಿ ಒಂದು ಆಚರಣೆಯಾಗಿ, ಅಗತ್ಯದ ಚಟವಾಗಿ ಬಲಗೊಂಡಿರುವ ಸಮಷ್ಟಿ ಸನ್ನಿವೇಶವನ್ನು ಕುವೆಂಪು ಸಂವೇದನೆ ಕಟ್ಟಿ ಕೊಡುತ್ತಲೆ, ಅಂಥ ಸನ್ನಿವೇಶದಿಂದ ಎದುರಾಗುವ ಅಸಂಖ್ಯ ಸಮಸ್ಯೆಗಳ ಪರಿಣಾಮ ಮಾರಕವಾಗುವ ಬಗೆಯನ್ನು ಬದುಕಿನ ನಡುವೆಯ ವಿಶ್ಲೇಷಣೆಗೆ ಒಳಪಡಿಸುವುದನ್ನು ಮತ್ತು ಆ ಬಗೆಗೆ ಸುಧಾರಣೆಯಾಗಬೇಕೆಂಬ ಆಶಯ ಈ ಕಥನಗಳ ಹಿಂದಿರುವುದನ್ನು ಗುರುತಿಸಬಹುದಾಗಿದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮದ್ಯಪಾನ ಬದುಕಿನ ಒಂದು ಅಂಗ ಎಂಬಂತೆ ಚಿತ್ರಿತವಾಗಿ ಯಾವುದೇ ಅಬ್ಬರದ ಪ್ರತಿರೋಧವಿಲ್ಲದೆ ಅದರ ಮಾರಕತೆಯನ್ನು ವಿಶ್ಲೇಷಿಸುತ್ತಿದ್ದರೆ, 'ಕಾನೂರು ಹೆಗ್ಗಡಿತಿ' ಕಥನದಲ್ಲಿ ಮದ್ಯಪಾನದಂತಹ ಸಾಮಾಜಿಕ ಅನಿಷ್ಟ ದುಶ್ಚಟದಿಂದ ಮಲೆನಾಡಿನ ಜನತೆಯನ್ನು ಬಿಡುಗಡೆಗೊಳಿಸಬೇಕೆಂಬ ಸುಧಾರಣ ಧೋರಣೆಯನ್ನು ಕಾಣುತ್ತೇವೆ. ಇಂಥ ಧೋರಣೆಗಳ ಹಿಂದೆ ೧೯೨೦ - ೨೧ರಲ್ಲಿ ಗಾಂಧೀಜಿಯವರು ರಾಷ್ಟ್ರವ್ಯಾಪಿ ಕೈಗೊಂಡ ಪಾನ ನಿರೋಧ ಚಳುವಳಿಯ ಪ್ರಭಾವವನ್ನು ಗುರುತಿಸಬಹುದಾಗಿದೆ. ಗಾಂಧೀಜಿಯವರು 'ನಾನೊಂದು ಗಂಟೆ ಅಖಿಲಭಾರತ ಸರ್ವಾಧಿಕಾರಿಯಾದರೆ' ನಾನು ಮಾಡುವ ಪ್ರಥಮ ಕಾರ್ಯ, ಯಾವ ಪರಿಹಾರವನ್ನು ಕೊಡದೆ ಎಲ್ಲ ಮದ್ಯಪಾನದ ಅಂಗಡಿಗಳನ್ನು ನಿಲ್ಲಿಸುವೆನೆಂತಲೂ, ಗುಜರಾತಿನಲ್ಲಿ ಇರುವಂಥ ಹೆಂಡಕೊಡುವ ತಾಳೆ ವೃಕ್ಷಗಳನ್ನು ನಾಶಪಡಿಸುವೆನೆಂದೂ ಘೋಷಿಸುತ್ತಾರೆ. ಅಂತೆಯೇ ಮದ್ಯಪಾನದ ಸಮಸ್ಯೆ ಸಾಮಾಜಿಕ ದುಷ್ಟ ಪದ್ಧತಿಯೆಂದು ಇದರ ಹಾನಿಯಿಂದ ಕೂಲಿಕಾರರನ್ನು ಮತ್ತು ಹರಿಜನರನ್ನು ತಪ್ಪಿಸಬೇಕೆನ್ನುತ್ತಾರೆ. ಇದೊಂದು ಮಹಾ ಸಮಸ್ಯೆ ನಾನು ತಳೆದಿರುವ ಪಾನ ನಿರೋಧ ಚಳುವಳಿಯು ಕೇವಲ ಆರಂಭ ಮಾತ್ರ. ಮದ್ಯಪಾನ ಮಾಡುವವನ ಮನೆಯ ಪಕ್ಕದಲ್ಲಿಯೆ ಅವನನ್ನು ಸೆಳೆಯುವ ಪಾನದ ಅಂಗಡಿ ಇರುವವರೆಗೆ ನಾವು ಕುಡುಕರ ಮೇಲೆ ಪ್ರಭಾವ ಬೀರಲಾರೆವು ಎನ್ನುತ್ತಾರೆ. ಹಾಗೆಯೇ ಕಳ್ಳತನ, ವ್ಯಭಿಚಾರಗಳಿಗಿಂತ ಕುಡಿತ ಅಥವಾ ಮದ್ಯಪಾನ ಹೇಯವಾದುದೆಂದು ಗಾಂಧೀಜಿ ಭಾವಿಸುತ್ತಾರೆ. ('ಸಮಾಜಧರ್ಮ', ಗಾಂಧಿಸ್ಮಾರಕ ನಿಧಿ ಪ್ರಕಟಣೆ - ೧೯೫೯)

ಈ ಮೇಲಿನ ಚಿಂತನೆಗಳ ಹಿಂದಿರುವ ಗಾಂಧೀಜಿಯವರ ತೀವ್ರ ಕಳವಳವನ್ನು ಗಮನಿಸಿದರೆ, ಮದ್ಯಪಾನದ ಬಗೆಗೆ ಅವರಿಗಿದ್ದ ಪ್ರತಿರೋಧ ಸ್ಪಷ್ಟವಾಗಿಯೇ ಕಾಣುತ್ತದೆ. ಹಾಗೂ ಮದ್ಯಪಾನದಿಂದ ಶ್ರೀಸಾಮಾನ್ಯರು ಬಲಿಯಾಗುತ್ತಿದ್ದ ದುರಂತಗಳ ಬಗೆಗೆ ಇರುವ ಕಾಳಜಿಯು ಮನವರಿಕೆಯಾಗುತ್ತದೆ. ಮದ್ಯಪಾನದಿಂದ ಶ್ರೀಸಾಮಾನ್ಯರನ್ನು ಪಾರುಮಾಡಲು ಕೈಗೊಳ್ಳಬೇಕಾದ ಎಚ್ಚರಿಕೆಗಳನ್ನು, ಪರ್ಯಾಯ ಮಾರ್ಗಗಳನ್ನು ಗಾಂಧಿ ತೀವ್ರವಾಗಿ ಚಿಂತಿಸಿರುವುದನ್ನು ಇಲ್ಲಿ ಕಾಣುತ್ತೇವೆ. "ಸಮಾಜದ ಕೆಲವು ಅಹಿತ ವ್ಯಸನಗಳು" ಎಂಬ ಶೀರ್ಷಿಕೆಯಡಿ ಗಾಂಧೀಜಿ ಮದ್ಯಪಾನದ ಸಮಸ್ಯೆ, ಮದ್ಯಪಾನದಿಂದ ರಾಷ್ಟ್ರಕ್ಕೆ ಎದುರಾಗಿರುವ ವಿನಾಶ, ಮದ್ಯಪಾನ ನಿರ್ಮೂಲನಾ ವಿಧಾನಗಳು, ಮದ್ಯಪಾನ ನಿರೋಧಕ್ಕಾಗಿ ಕೈಗೊಳ್ಳಬೇಕಾದ ಚಳುವಳಿಯ ರೂಪುರೇಷೆಗಳನ್ನು ದೀರ್ಘವಾಗಿ ಚಿಂತಿಸಿರುವುದನ್ನು ಕಾಣುತ್ತೇವೆ. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಮದ್ಯಪಾನ ನಿರ್ಮೂಲನೆಗಾಗಿ ಭಾರತದಾದ್ಯಂತ, ಅಷ್ಟೇ ಏಕೆ ಬೇರೆ ಬೇರೆ ದೇಶಗಳಲ್ಲಿಯೂ ಆ ಕುರಿತ ಚಿಂತನೆ ಮುಖ್ಯವಾಗಿ ನಡೆದಿರುವುದನ್ನು, ಕುವೆಂಪು ಅವರ ಕಥನಗಳಂತೆಯೇ ಬೇರೆ ಬೇರೆ ಭಾಷೆಗಳಲ್ಲಿಯೂ ಈ ಚಿಂತನೆ ಪ್ರಾದೇಶಿಕವಾಗಿ ನಡೆದಿರುವುದನ್ನು ಕಂಡುಕೊಳ್ಳಬಹುದಾಗಿದೆ. ಪ್ರಪಂಚದ ಮಹಾಲೇಖಕರಲ್ಲಿ ಒಬ್ಬರಾದ "ಮಹರ್ಷಿ ಟಾಲ್‌ಸ್ಟಾಯ್"ರೂ ಸಹ ಮಾದಕವಸ್ತುಗಳ ಬಗೆಗೆ, ಅದರ ಸೇವನೆಯಿಂದ ಎದುರಾಗುವ ಮಾರಕಗಳ ಬಗೆಗೆ, ಅಂಥ ವ್ಯಸನಗಳಿಂದ ಎದುರಾಗುವ ಮನಸ್ಥಿತಿಯ ಹಿಂದಿರುವ ಮನೋಧೋರಣೆಯ ಬಗೆಗೆ ಮನೋವೈಜ್ಞಾನಿಕ ನೆಲೆಯಲ್ಲಿ ವಿಶ್ಲೇಷಿಸಿರುವುದನ್ನು ಕಾಣುತ್ತೇವೆ. ಹಾಗೆಯೇ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಯ ಅನೇಕ ಭಾಗಗಳು ಅಂಥದ್ದೆ ನೆಲೆಯಲ್ಲಿ ಮದ್ಯಪಾನ ದುರಂತಗಳನ್ನು ವಿಶ್ಲೇಷಣೆಗೆ ಒಳಪಡುವುದನ್ನು ಕುವೆಂಪು ಕಥನಗಳ ಅನೇಕ ಘಟನೆಗಳು, ಸನ್ನಿವೇಶಗಳು ತಿಳಿಯಪಡಿಸುತ್ತವೆ.

ಅಣ್ಣಯ್ಯಗೌಡರ ನೆಮ್ಮದಿಯ ಸಂಸಾರ ವಿನಾಶಕಾರವಾಗಲು ಕಾರಣ ಎರಡು-ಮೂರು ಮದುವೆಗಳಾದದ್ದು. ಅಲ್ಲದೆ ಮದುವೆಯ ವಯಸ್ಸಿಗೆ ಬಂದ ಮಗನಿಗೆ ವಿವಾಹ ಮಾಡದೆ, ಎಂಟುನೂರು ರೂಪಾಯಿ ಸಾಲ ಮಾಡಿ ವಧುವಿಗೆ ತೆರ ತೆತ್ತು ಮೂರನೇ ಮದುವೆಯಾದದ್ದೇ ಪ್ರಬಲ ಕಾರಣವಾಗಿ ತಂದೆ ಮತ್ತು ಮಗನ ನಡುವಿನ ಬಾಂಧವ್ಯ ದೂರವಾಗತೊಡಗಿತು. ಓಬಯ್ಯ ಮನೆಗೆಲಸದಲ್ಲಿ ಉದಾಸೀನವಾಗತೊಡಗಿದನು. ತಂದೆ ಮಗನ ಬಾಂಧವ್ಯ ಮುರಿಯತೊಡಗಿದ್ದರಿಂದ, ಸಾಲಮಾಡಿ ಒಂಬೈನೂರು ರೂಪಾಯಿ ತೆರ ತೆತ್ತು ನಾಲ್ಕನೆಯ ಮದುವೆಯಾಗಲು ಸಿದ್ಧನಾಗಿದ್ದ ತನ್ನ ತಂದೆಗೆ ಸಂಪೂರ್ಣವಾಗಿ ವಿರೋಧಿಯಾಗಿ ವರ್ತಿಸಿದ್ದರಿಂದ, ತಂದೆ ಮಗನ ನಡುವೆ ಕೋಪ ವೈರವಗಳಿಗೆ ಕಾರಣವಾಯಿತು. ಅಂಥ ವಿರೋಧದ ಫಲವಾಗಿ ಮಾನಸಿಕವಾಗಿ ನೊಂದು ಬೇಸತ್ತಿದ್ದ ಓಬಯ್ಯ ಮದ್ಯಪಾನ ಚಟಕ್ಕೆ ಬಲಿಯಾದನು. ಹಾಗೆಯೇ ಅಂಥದ್ದೆ ತಂದೆಯ ಬಗೆಗಿನ ಪ್ರತಿರೋಧದ ಮನೋಭಾವದಿಂದ ಅನೈತಿಕ ಸಂಬಂಧಗಳನ್ನು ಬೆಳಸಲು ಮುಂದಾದನು. ಕುಡಿತ ಮತ್ತು ಪ್ರಣಯ ಸಂಬಂಧಗಳಿಗಾಗಿ ಅಗತ್ಯವಾದ ಹಣಕ್ಕಾಗಿ ಓಬಯ್ಯ ಮನೆಯ ಭತ್ತ, ಒಡವೆ ವಸ್ತ್ರ ಮೊದಲಾದ ಪದಾರ್ಥಗಳನ್ನು ತನ್ನ ಮನೆಯಿಂದಲೇ ಕದ್ದು ಮಾರಿ ಮದ್ಯಪಾನ ಮತ್ತು ಪ್ರಣಯ ಸಂಬಂಧಗಳಿಗೆ ವೆಚ್ಚಮಾಡಲು ಮುಂದಾದನು. ಹಾಗಾಗಿ ಮೊದಲೇ ಬಡತನದಲ್ಲಿದ್ದ ಅಣ್ಣೇಗೌಡನ ಕುಟುಂಬ ಮತ್ತೂ ಅಧೋಗತಿಗೆ ಇಳಿದು ದೇವರ ಕಾಣಿಕೆಯ ಬೆಳ್ಳಿ ಕಡಗವನ್ನು ಹೆಂಡಕ್ಕಾಗಿ ಅಡ ಇಡುವ ದುರಂತಕ್ಕೆ ತಲುಪಿತು.

ಇದೇ ರೀತಿ 'ಕಾನೂರು ಹೆಗ್ಗಡಿತಿ' ಕಥನದ 'ಕಳ್ಳಂಗಡಿ' ಭಾಗದಲ್ಲಿ ಅನೇಕ ರೀತಿಯ ಚಲನವಲನಗಳಿಂದ ಮದ್ಯಪಾನದ ಚಟಕ್ಕೆ ಒಳಗಾದ ನಂಜನ ಹಾಗೂ ಇನ್ನಿತರರ ದುರಂತ ಚಿತ್ರಗಳನ್ನು ಕಾಣುತ್ತೇವೆ. ಮಲೆನಾಡ ಗೌಡ ಮತ್ತು ಹೆಗ್ಗಡೆಯವರ ಆಳುಗಳು, ಒಕ್ಕಲುಗಳಲ್ಲಿಯೂ ಅನೇಕರು ಕಳ್ಳಂಗಡಿಗೆ ಆಗಾಗ ಬಂದು ತಮ್ಮ ಹೊಟ್ಟೆಗೆ ಅನ್ನವಿಲ್ಲದಿದ್ದರೂ, ತಮ್ಮ ಹೆಂಡತಿ ಮಕ್ಕಳಿಗೆ ಕೂಳಿಲ್ಲದಿದ್ದರೂ ಲೆಕ್ಕಿಸದೆ ದಿನಗೂಲಿಯ ಭತ್ತವನ್ನು ಕಳ್ಳಂಗಡಿಗೆ ಸುರಿದು ಮದ್ಯಪಾನದಿಂದ ಉನ್ಮತ್ತರಾಗುವ, ಕೆಲವು ಸಾರಿ ವ್ಯವಸಾಯಕ್ಕೆ ಅಗತ್ಯವಾದ ಕತ್ತಿ, ಹಾರೆ, ಗುದ್ದಲಿ ಮೊದಲಾದ ಸಲಕರಣೆಗಳನ್ನು ಕದ್ದು ಮಾರಿ ಕಳ್ಳು ಹೆಂಡಗಳನ್ನು ಕುಡಿಯುವ ಸ್ಥಿತಿಗೆ ತಲುಪಿದ ಅನೇಕ ಬಡ ಕುಟುಂಬಗಳ ಚಿತ್ರಗಳನ್ನು ಕಳ್ಳಂಗಡಿ ಭಾಗ ವಿಶದಪಡಿಸುತ್ತದೆ. ಹಾಗೆಯೇ ಕಳ್ಳಂಗಡಿಗಳಲ್ಲಿ ಕಳ್ಳು ಹೆಂಡಗಳು ಮಾಯವಾದಂತೆಲ್ಲ ಮನುಷ್ಯರು ಉನ್ಮತ್ತರಾಗಿ ಮೃಗಗಳಾಗುತ್ತಾ, ಅಸಹ್ಯ ಹಾಗೂ ಭಯಾನಕ ವಾತಾವರಣ ನಿರ್ಮಾಣವಾಗುವ ಸ್ಥಿತಿಯನ್ನು ಕುವೆಂಪು ಸಂವೇದನೆ ಚಿತ್ರಿಸುವುದರ ಮೂಲಕ ಮದ್ಯಪಾನದಂತಹ ದುಶ್ಚಟದ ಮಾರಕತೆಯನ್ನು ಪ್ರಕಟಿಸುತ್ತಾರೆ. ಅನೇಕ ಸಮಾಜಬಾಹಿರ ಚಟುವಟಿಕೆಗಳನ್ನು ಮಾಡಲು, ಉತ್ತೇಜಿಸಲು ಮದ್ಯಪಾನವನ್ನು ಒಂದು ಅಸ್ತ್ರವನ್ನಾಗಿ ಬಳಸುವುದನ್ನು ಕುವೆಂಪು ಅವರ ಎರಡು ಕಥನಗಳು ನಿಚ್ಚಳವಾಗಿ ವಿಶ್ಲೇಷಿಸಿರುವುದನ್ನು ಕಾಣುತ್ತೇವೆ. 'ಮದುಮಗಳು' ಕಾದಂಬರಿಯ ನಾಗಕ್ಕ ಮತ್ತು ವೆಂಕಟಪ್ಪನಾಯಕರ ಒಪ್ಪಿತವಲ್ಲದ ಸೀರುಡಿಕೆಗಾಗಿ ನಾಗತ್ತೆ ಸೊಸೆಗೆ ಮೋಸದಿಂದ ಕಳ್ಳು ಮತ್ತು ಹೆಂಡವನ್ನು ಕುಡಿಸುವುದರ ಮೂಲಕ ಅನೈತಿಕ ಸಂಬಂಧಗಳಿಗೆ ಮದ್ಯಪಾನವನ್ನು ಒಂದು ಅಸ್ತ್ರವನ್ನಾಗಿ ಬಳಸಲು ಪ್ರಯತ್ನಿಸುವುದು ಮತ್ತು ಅಂಥ ಪ್ರಯತ್ನದಿಂದ ತಾನೇ ಅದಕ್ಕೆ ಒಳಗಾಗುವುದರ ಮಾರ್ಮಿಕ ದುರಂತಗಳ ಚಿತ್ರಗಳನ್ನು ಕುವೆಂಪು ಸಂವೇದನೆ ಈ ಕಥನಗಳಲ್ಲಿ ಕಟ್ಟಿಕೊಡುತ್ತದೆ. ನಾಗಮ್ಮನ ಆತ್ಮಸಾಕ್ಷಿಗೆ ವಿರುದ್ಧವಾದ ಕೆಲಸಕ್ಕೆ ಪ್ರೇರಿಪಿಸಲು ಮದ್ಯ ಕುಡಿಸುವ ತಂತ್ರ ಇದಾಗಿದೆ. ಈ ಮೇಲಿನ ಘಟನೆಗಳ ಹಿಂದಿರುವ ಮನೋಧರ್ಮ ಯಾವ ಬಗೆಯದೆಂಬುದನ್ನು ಟಾಲ್ ಸ್ಟಾಯ್ ರವರ "ಮನುಷ್ಯರು ಮತ್ತು ಬರಿಸಿಕೊಳ್ಳುವುದೇಕೆ?" ಎಂಬ ಲೇಖನದ ಈ ಕೆಳಗಿನ ಮಾತುಗಳು ಸ್ವಲ್ಪಮಟ್ಟಿಗೆ ವಿಶದಪಡಿಸಿಕೊಳ್ಳಲು ಸಹಾಯಕವಾಗುತ್ತದೆ :

> "ಹಷೀಷ್ , ಅಫೀಮು, ದ್ರಾಕ್ಷಾರಸ ಮತ್ತು ತಂಬಾಕುಗಳ ಜಗದ್ವ್ಯಾಪೀ ಬಳಕೆಗೆ ಕಾರಣ - ಅವುಗಳ ರುಚಿಯಲ್ಲ, ಅಥವಾ ಅವು ಕೊಡಬಹುದಾದ ಯಾವುದೇ ಆಮೋದ ವಿನೋದ ಲವಲವಿಕೆಗಳೂ ಅಲ್ಲ: ವ್ಯಕ್ತಿಯು ತನ್ನ ಆತ್ಮಸಾಕ್ಷಿಯ ನಿರ್ದೇಶನಗಳನ್ನು ಕಡೆಗಾಣಿಸುವುದಕ್ಕೆ ಅವು ಅಗತ್ಯ ಎನ್ನುವುದು ಮಾತ್ರ. .....ಅಂದರೆ, ಯಾವುದೇ ವ್ಯಕ್ತಿ ತನ್ನ ಬುದ್ಧಿ ಸ್ಥಿಮಿತವಾಗಿದ್ದಾಗ ಯಾವ ಕೆಲಸವನ್ನು ಮಾಡಲು ಹೇಸುತ್ತಿದ್ದನೋ ಅದನ್ನೇ ಅವನು ಕುಡಿತದ ಅಮಲಿನಲ್ಲಿ ಮಾಡಿದ್ದರೆ ಅವನಿಗೆ ತಪ್ಪೆಂದು ತೋರುತ್ತಿರಲಿಲ್ಲ ಎಂದಂತಾಯಿತು. ಮನುಷ್ಯರು ಮಾದಕವಸ್ತುಗಳನ್ನು ಸೇವಿಸುವುದಕ್ಕೆ ಮೂಲಕಾರಣ ಈ ಮಾತಿನಲ್ಲಡಗಿದೆ; 'ಆತ್ಮಸಾಕ್ಷಿಗೆ ವಿರುದ್ಧ ತಾವು ಮಾಡಿದ ದುಷ್ಕೃತ್ಯದ ಪೇಚಿನಿಂದ ಪಾರಾಗುವುದಕ್ಕಾಗಿ; ಅಥವಾ 'ತಮ್ಮ ಪಶು ಸ್ವಭಾವದಿಂದ ಪ್ರೇರಿತವಾದ, ಆದರೆ ತಮ್ಮ ಆತ್ಮಸಾಕ್ಷಿಗೆ ವಿರುದ್ಧವಾದ ಕೃತ್ಯಗಳನ್ನೆಸಗಲು ಅಗತ್ಯವಾದ ಪೂರ್ವಕ್ರಮವಾಗಿ."

"…..ಬುದ್ಧಿನೆಟ್ಟಗಿರುವವನು ಹಾದರಗಿತ್ತಿಯನ್ನು ಹಿಂಬಾಲಿಸಲು ಹೇಸುತ್ತಾನೆ. ಕದಿಯಲು ಹೇಸುತ್ತಾನೆ. ಕೊಲೆಮಾಡಲು ಹೇಸುತ್ತಾನೆ; ಕುಡಿತದ ಅಮಲೇರಿದವನು ಇವು ಯಾವುದಕ್ಕೂ ಹೇಸುವುದಿಲ್ಲ. ಆದ್ದರಿಂದ ತನ್ನ ಆತ್ಮಸಾಕ್ಷಿ ಯಾವುದನ್ನು ಹೀನಕೃತ್ಯವೆಂದು ಖಂಡಿಸುತ್ತದೆಯೋ ಅದನ್ನು ಮಾಡಲೇಬೇಕೆಂದಿರುವವನು ಮತ್ತು ಬರಿಸಿಕೊಳ್ಳುತ್ತಾನೆ." ೨

ಈ ಮೇಲಿನ ಉದ್ಧರಣೆ ಕುವೆಂಪು ಕಥನಗಳ ಮದ್ಯಪಾನದ ಚಟಕ್ಕೆ ಬಲಿಯಾದವರು ನಡೆಸುವ ಕೃತ್ಯಗಳ ಹಿಂದಿನ ಮನೋಸ್ಥಿತಿಯನ್ನು ಅತ್ಯಂತ ಸೂಕ್ಷ್ಮವಾಗಿ ವಿಶದಪಡಿಸುವುದನ್ನು ಕಾಣುತ್ತೇವೆ. ತಂದೆಯ ವಿರುದ್ಧವಾಗಿ ವರ್ತಿಸಲು ಓಬಯ್ಯನು ಮದ್ಯಪಾನವನ್ನು ಮಾಡುವುದು, ಒಲ್ಲದ ಪುರುಷನ ಜೊತೆ ದೈಹಿಕ ಸಂಬಂಧವನ್ನು ಇರಿಸಿಕೊಳ್ಳಲಾರದ ನಾಗಕ್ಕನಿಗೆ ಮತ್ತು ಬರಿಸುವ ಕಳ್ಳುಹೆಂಡಗಳನ್ನು ಕುಡಿಸುವುದರ ಮೂಲಕ ಅನೈತಿಕ ಸಂಬಂಧಕ್ಕೆ ದೂಡುವಂಥ ಕೃತ್ಯಗಳು ಈ ಮೇಲಿನ ಟಾಲ್‌ಸ್ಟಾಯ್‌ಯವರ ಉದ್ಧರಣೆಯ ವಿಚಾರಧಾರೆಯನ್ನು ಗಟ್ಟಿಗೊಳಿಸುವ ಸನ್ನಿವೇಶಗಳಾಗಿವೆ. ಹಾಗೆಯೇ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪಿಜಣನು ಆತ್ಮಹತ್ಯೆ ಮಾಡಿಕೊಳ್ಳುವ ಕ್ರಿಯೆಯ ಹಿಂದೆಯೂ ಇಂಥ ಮನೋಭಾವವೇ ಕೆಲಸ ಮಾಡುವುದನ್ನು ಕಾಣುತ್ತೇವೆ. ಹಳೆಪೈಕದ ತಿಮ್ಮ ತಂದು ಕೊಟ್ಟ ನೊರೆ ನೊರೆ ಕಳ್ಳನ್ನು ಹೀರಿದ ಶಾಮಯ್ಯಗೌಡ ಮತ್ತು ಚಂದ್ರಯ್ಯಗೌಡರ ಪ್ರಸಂಗದ ಹಿಂದೆಯೂ ತಮ್ಮ ಆತ್ಮಸಾಕ್ಷಿಯನ್ನು ಬಾಧಿಸುವ ಬಲೀಂದ್ರನ ಬಲಿಯ ಅಕೃತ್ಯದ ಈಡೇರಿಕೆಗಾಗಿ ಚಂದ್ರಯ್ಯಗೌಡ ಭೂತ ಮೈ ಮೇಲೆ ಬಂದಿದೆ ಎಂಬಂತೆ ವರ್ತಿಸುವ ಪ್ರಕ್ರಿಯೆಯಲ್ಲಿ ಪ್ರಜ್ಞಾಪೂರ್ವಕವಾಗಿದ್ದಾಗ ಮಾಡಲಾರದ ಕೆಲಸಕ್ಕಾಗಿ ಕಳ್ಳನ್ನು ಕುಡಿದು ತನ್ನ ಉದ್ದೇಶ ಸಫಲತೆಗಾಗಿ ಮೃಗದಂತೆ ವರ್ತಿಸುವ ವರ್ತನೆಯಲ್ಲಿಯೂ ಇಂಥದ್ದೆ ಮನೋಧರ್ಮ ಕೆಲಸ ಮಾಡಿರುವುದನ್ನು ಕಾಣಬಹುದಾಗಿದೆ. ಹಾಗೆ ಕಾಣಿಸುವುದರ ಮುಖೇನ ಮದ್ಯಪಾನ ಮನುಷ್ಯನನ್ನು ಕ್ರೂರ ಮೃಗದಂತೆ ವರ್ತಿಸುವಂತೆ ಮಾಡುವುದರಿಂದ ಎದುರಾಗುವ ದುರಂತಗಳನ್ನು ಕುವೆಂಪು ಸಂವೇದನೆ ವಿಶ್ಲೇಷಣೆಗೆ ಗುರಿಪಡಿಸುತ್ತದೆ. ಜೊತೆಗೆ ಒಂದು ಬಗೆಯ ಎಚ್ಚರವನ್ನೂ ಕಾಣಿಸುತ್ತದೆ. 'ಸೋಮನ ಮೇಲೆ ಪ್ರಲೋಭನ ಪಿಶಾಚಿ' ಶೀರ್ಷಿಕೆಯಡಿಯಲ್ಲಿ ಕುಡಿತದ ಮೇಲಾಟವನ್ನು, ಅದರಿಂದ ಎದುರಾಗುವ ದುರಂತದ ಚಿತ್ರವನ್ನೇ ಕುವೆಂಪು ಕಥನ ಕಟ್ಟಿಕೊಡುತ್ತದೆ.

'ಶೂದ್ರ ಸಂಘದ ಮಹಾಸಭೆಯಲ್ಲಿ!' ಎಂಬ ಅಧ್ಯಾಯದಲ್ಲಿ ಕುಡಿತದ ಬಗೆಗಿನ ಕುವೆಂಪು ಅವರ ಧೋರಣೆ ಅತ್ಯಂತ ಸ್ಪಷ್ಟವಾಗಿ ವ್ಯಕ್ತಗೊಂಡಿದೆ. ಮಲೆನಾಡಿನ ಬದುಕಿನಲ್ಲಿ ಪಾರಂಪರಿಕವಾಗಿ ರೂಢಿಯಲ್ಲಿದ್ದ ಹೆಂಡ ಕಳ್ಳು ಮೊದಲಾದ ಮಾದಕ ಪದಾರ್ಥಗಳ ಸೇವನೆ ಮತ್ತು ಮದ್ಯಪಾನ ನಿಷೇಧದ ಬಗೆಗಿನ ಚಳವಳಿಯ ಸ್ಪಷ್ಟ ಚಿತ್ರಣವನ್ನು ಕುವೆಂಪು ಸಂವೇದನೆ ಈ ಭಾಗದಲ್ಲಿ ಕಟ್ಟಿಕೊಡುತ್ತದೆ. ಹಾಗೂ ಈ ಕೆಳಗಿನ ಉದ್ಧರಣೆಯ ಭಾಗವನ್ನು ಇಲ್ಲಿ ಉಲ್ಲೇಖಿಸುವುದರ ಮೂಲಕ ಮದ್ಯಪಾನದ ಕುರಿತ ಅವರ ಧೋರಣೆ ಯಾವ ಬಗೆಯದೆಂಬುದನ್ನು ತಿಳಿಯಲು ಸಹಾಯಕವಾಗುತ್ತದೆ.

"ಆ ನಾಡಿನ ಒಕ್ಕಲಿಗರಲ್ಲಿ ಬಹುಪುರಾತನದಿಂದಲೂ ಹೆಂಡ, ಕಳ್ಳು ಮೊದಲಾದ ಮಾದಕ ಪದಾರ್ಥಗಳನ್ನು ಸೇವಿಸುವುದು ಅತಿ ಸಾಮಾನ್ಯವಾದ ರೂಢಿಯಾಗಿತ್ತು.

ಈಗಲೂ ಅದು ಸಂಪೂರ್ಣವಾಗಿ ತೊಲಗಿಲ್ಲ. ಮೊದಲು ಎಲ್ಲೆಲ್ಲಿಯೂ ಬಹಿರಂಗವಾಗಿ ನಡೆಯುತ್ತಿದ್ದುದು ಈಗ ಅಲ್ಲಲ್ಲಿ ಅಂತರಂಗವಾಗಿ ಸಾಗುತ್ತಿದೆ. ಅಂತೂ ಮದ್ಯಪಾನ ಮಾಡುವುದು ನಾಚಿಗೆ ಗೇಡಿನ ಕೆಲಸವೆಂದೇನೊ ಎಲ್ಲರಿಗೂ ಗೊತ್ತಾಗಿದೆ. ಕಾರಣವೇನೆಂದರೆ, ಸುಮಾರು ಮೂವತ್ತು ಮೂವತ್ತೈದು ವರ್ಷಗಳ ಹಿಂದೆ ನಾಡಿನ ಒಕ್ಕಲಿಗ ಮುಖಂಡರಲ್ಲಿ ಒಂದು ಚಳವಳಿಯೆದ್ದಿತು. ಆ ಚಳವಳಿಗೆ ಕ್ರೈಸ್ತ ಪಾದ್ರಿಗಳ ಉಪದೇಶವೂ, ಮೈಸೂರು ಸರಕಾರದ 'ಮಲೆನಾಡು ಅಭಿವೃದ್ಧಿ ಇಲಾಖೆ'ಯ ಬೋಧನೆಯೂ, ಬ್ರಿಟಿಷ್ ಆಳ್ವಿಕೆಯಿಂದುಂಟಾದ ನಾಗರಿಕತೆಯ ಆಗಮನವೂ, ಕಾಫಿ, ವೈನು, ವಿಸ್ಕಿ ಇತ್ಯಾದಿಯಾದ ವಿದೇಶಿಯ ಪಾನೀಯಗಳ ಆಮದೂ, ಸನ್ನಿವೇಶ ಪ್ರಭಾವದಿಂದ ಜನರಲ್ಲಿ ಸ್ವಾಭಾವಿಕವಾಗಿಯೆ ಉತ್ಪನ್ನವಾದ ಜಾಗ್ರತಿಯೂ ಕಾರಣ ಗಳಾದುವೆಂದು ಊಹಿಸಬಹುದು.

ಆಗ ಮಲೆನಾಡಿನಲ್ಲಿ ನಂಟರ ಮನೆಗೆ ಹೋದರೆ ಮೊದಲು ಕಾಲು ತೊಳೆಯಲು ನೀರು ಕೊಡುತ್ತಿದ್ದರು. ಆಮೇಲೆ ತಾಂಬೂಲ ನಿವೇದನವಾಗುತ್ತಿತ್ತು. ತರುವಾಯ ಹುರಿಮಾಂಸ ಅಥವಾ ಉಪ್ಪು ಮೀನು ಅಥವಾ ಉಪ್ಪಿನಕಾಯಿ - ಇತ್ಯಾದಿ ಯಾವುದಾದರೊಂದು ವ್ಯಂಜನದ ಸಮೇತವಾಗಿ ಬಾಯಿ ಲೋಚಗುಟ್ಟುವಷ್ಟರ ಮಟ್ಟಿಗೆ ಹುಳಿ ಹುಳಿಯಾದ ಹೆಂಡ ಕಳ್ಳುಗಳನ್ನು ಆದರಪೂರ್ವಕವಾಗಿ ವಿನಿಯೋಗಿಸಿ ಅತಿಥಿಸತ್ಕಾರ ಮಾಡುತ್ತಿದ್ದರು. ಈಗಿನವರು ಕಾಫಿ ಕೊಡುವುದನ್ನೂ ಕುಡಿಯುವುದನ್ನೂ ಹೇಗೆ ಸುಧಾರಣೆಯ ಚಿಹ್ನೆಯೆಂದೂ ನಾಗರಿಕತೆಯ ಗೌರವವೆಂದೂ ಭಾವಿಸುತ್ತಿರುವರೊ ಹಾಗೆಯೆ ಆಗಿನವರು ಹೆಂಡ ಕಳ್ಳುಗಳನ್ನು ಸನ್ಮಾನಿಸುತ್ತಿದ್ದರು." [೩]

ಈ ಮೇಲಿನ ಉಲ್ಲೇಖ, ಮೊದಲೇ ಹೇಳಿದಂತೆ ಮಲೆನಾಡಿನ ಬದುಕಿನಲ್ಲಿ ಮಾದಕಪದಾರ್ಥಗಳು ಪುರಾತನ ಕಾಲದಿಂದಲೂ ಮನೆಮಾಡಿಕೊಂಡಿದ್ದ ಬಗೆಯನ್ನು ಕಾಣಿಸುತ್ತದೆ. ಸಿ.ಡಿ. ಗೋವಿಂದರಾವ್ ಅವರು ಈ ಪ್ರಸಂಗವನ್ನು ಕುರಿತು ವಿಶ್ಲೇಸುವ ಸಂಗತಿ ಅರ್ಥಪೂರ್ಣವಾಗಿದೆ:

" ಕಾದಂಬರಿಕಾರರು ಸಮಾಜದ ಲೋಪದೋಷಗಳನ್ನು ನಿರ್ಭಯವಾಗಿ ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಾರೆ. ಸಾಧಾರಣವಾಗಿ ಎಲ್ಲರಲ್ಲಿಯೂ ಇದ್ದ ಒಂದು ದುರಭ್ಯಾಸವೆಂದರೆ ಕಳ್ಳು ಕುಡಿಯುವುದು. ಕೆಲವರು ಕದ್ದು ಕುಡಿಯುತ್ತಿದ್ದರು. ಹಲವರು ಮುಚ್ಚುಮರೆಯಿಲ್ಲದೆ ಕುಡಿಯುತ್ತಿದ್ದರು. ಕುಡಿತದ ಕೆಟ್ಟ ಪರಿಣಾಮಗಳು ಅವರಿಗೆ ತಿಳಿಯದೆಂದಲ್ಲ. ಅದನ್ನು ನಿಲ್ಲಿಸಬೇಕೆಂದು ಶೂದ್ರ ಸಂಘದ ಮಹಾ ಸಭೆಯೇ ನಡೆದಿತ್ತು. ಅಲ್ಲಿ ಕುಡಿಯುವುದನ್ನು ಬಿಡಬೇಕೆಂದು ಭಾಷಣಗಳಾದವು, ಠರಾವು ಮಾಡಿಯಾಯಿತು, ಕುಡಿತವು ನಡದೇ ನಡೆಯಿತು, ಕಳ್ಳತನದಲ್ಲಿ. ಇದರಿಂದ

ಲಾಭವಾದುದೆಂದರೆ - ದೇವರಿಗೆ! ಪಾಪ ಮಾಡಿದ ಸಂಕಲ್ಪವನ್ನು ಮುರಿದುದಕ್ಕಾಗಿ, ದೇವರಿಗೆ ತಪ್ಪು ಕಾಣಿಕೆ ಹಾಕಿ ಕುಡಿಯುತ್ತಿದ್ದರಂತೆ. ಈ ದುರಭ್ಯಾಸದ ವಿಷಯ ಬರೆಯುವಾಗ ಕಾದಂಬರಿಕಾರರು ಎಷ್ಟೇ ವಾಸ್ತವಿಕವಾಗಿ ಚಿತ್ರಿಸಿದರೂ - ಕಲೆಯ ದೃಷ್ಟಿಯಿಂದ ಅದೊಂದು ಅತ್ಯುತ್ತಮ ಚಿತ್ರವೇ ಆದರೂ - ಅವರಿಗೆ ಕುಡಿತದ ವಿಷಯದಲ್ಲಿರುವ ಅಭಿಪ್ರಾಯವನ್ನು ಒಂದೇ ಒಂದು ಅರ್ಥಪೂರ್ಣವಾದ ವಾಕ್ಯದಲ್ಲಿ ಹೇಳಿದ್ದಾರೆ: 'ಇತ್ತ ಕಳ್ಳು ಹೆಂಡಗಳು ಖಾಲಿಯಾದಂತೆಲ್ಲ ಅತ್ತ ಮಾನವರು ಮೃಗಗಳಾಗುತ್ತ ಹೋದರು.' ಪ್ರಾಯಶ: ಇನ್ನಾರಾದರು ಈ ಸನ್ನಿವೇಶವನ್ನು ಚಿತ್ರಿಸುತ್ತಿದ್ದರೆ ಕುಡಿತದ ವಿಷಯವಾಗಿ ಒಂದು ದೊಡ್ಡ ಲೇಖನವನ್ನೇ ಬರೆದು ಬಿಡುತ್ತಿದ್ದರು. ಆದರದು ಕಲೆಗೆ ಅನಾವಶ್ಯಕ. ಕಲೆಯಲ್ಲಿ ಸೂಚ್ಯತೆ ಇದ್ದಷ್ಟು ಒಳ್ಳೆಯದು. ಸೂಚ್ಯತೆ ಎಂದ ಮಾತ್ರಕ್ಕೆ ಕುಡಿತದ ಪರಿಣಾಮವನ್ನು ಇವರು ಸಹಜವಾಗಿ ವರ್ಣಿಸಿಲ್ಲವೆಂದಲ್ಲ. ಅನೇಕರು ಈ ದುರಭ್ಯಾಸಕ್ಕೆ ಸಿಕ್ಕಿ ನರಳುತ್ತಿರುವ ಚಿತ್ರಗಳನ್ನು ಕೊಟ್ಟಿದ್ದಾರೆ. ಅದರಲ್ಲಿ ಓಬಯ್ಯನದು ಪ್ರಾಯಶ: ಅತ್ಯುತ್ತಮವಾದುದು. ಅವನು ತನ್ನ ಕುಡಿತವನ್ನು ಮರೆಮಾಡಲು ಭೂತರಾಯನ ಕಥೆಯೊಂದನ್ನೇ ಕಟ್ಟಿಹೇಳುತ್ತಿದ್ದನಂತೆ. ಕುಡಿತಕ್ಕಾಗಿ ಮನೆಯಲ್ಲಿದ್ದ ಒಡವೆ ಪಾತ್ರೆಗಳನ್ನೇ ಮಾರಿಕೊಳ್ಳುತ್ತಿದ್ದನಂತೆ. ಆದ್ದರಿಂದಲೇ ಅವನ ತಂದೆಯ ಮನೆಗೆ ಅಷ್ಟು ದಾರಿದ್ರ್ಯ ಬಂದದ್ದು." ᳵ

ಹೀಗೆ ಕುಡಿತದ ಪ್ರಭಾವದಿಂದ ಮಲೆನಾಡಿನ ಕೆಲವು ಸಂಸಾರಗಳು ಅವನತಿಯ ಹಾದಿಯನ್ನು ಹಿಡಿಯುತ್ತವೆ. ಇದಕ್ಕೆ ಸ್ಪಷ್ಟ ಉದಾಹರಣೆಯೆಂದರೆ ಓಬಯ್ಯ. ಆದರೆ ಮುಂದೆ ಹೂವಯ್ಯ ಇಂತಹ ಕ್ಷುದ್ರ ಪರಿಣಾಮಗಳನ್ನು ಬೀರುವ ದ್ರವ್ಯಗಳ ವಿರುದ್ಧ ಹೋರಾಡುತ್ತಾನೆ.

ಆದರೆ ಆಧುನಿಕತೆಯ ಪ್ರವೇಶದಿಂದಾಗಿ ಮದ್ಯಪಾನ ಸೇವನೆ ಅಥವಾ ಮಾದಕ ವಸ್ತುಗಳ ಸೇವನೆ ನಾಚಿಕೆಗೇಡಿನ ರೂಢಿಯೆಂಬ ಧೋರಣೆ ನಿರ್ಮಾಣವಾಯಿತು. ಅಂದರೆ ವಸಾಹತುಶಾಹಿ ಪ್ರವೇಶದಿಂದ, ಆ ಮೂಲಕ ಕ್ರೈಸ್ತ ಪಾದ್ರಿಗಳ ಉಪದೇಶಗಳಿಂದ, ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಒಕ್ಕಲಿಗ ಕುಟುಂಬಗಳಲ್ಲಿ ಕಾಣಿಸಿಕೊಂಡ ಒಂದು ಬಗೆಯ ನಾಗರೀಕ ಎಚ್ಚರದ ಫಲವಾಗಿ ಮಾದಕ ವಸ್ತುಗಳ ಸೇವನೆ ಹೀನ ಪದ್ಧತಿಯೆಂದು, ಅದು ವ್ಯಕ್ತಿ ಮತ್ತು ಕುಟುಂಬಗಳ ದುರಂತಕ್ಕೆ ಕಾರಣವಾಗುತ್ತದೆಯೆಂಬ ವಿಚಾರದಿಂದ, ಮದ್ಯಪಾನ ಸೇವನೆ ನಿಷಿದ್ಧಗೊಳಿಸಬೇಕೆಂಬ ಪರಿಸರ ಮಲೆನಾಡಿನಲ್ಲಿ ಆಗ ನಿರ್ಮಾಣವಾಯಿತು. ಅಂತೆಯೇ ಮೈಸೂರು ಸರ್ಕಾರದ 'ಮಲೆನಾಡು ಅಭಿವೃದ್ಧಿ ಇಲಾಖೆ'ಯು ಸುಧಾರಣೆಯ ಧೋರಣೆಗಳು ಇದಕ್ಕೆ ಕಾರಣವಾದವು. ಹಾಗೆಯೇ ಬ್ರಿಟಿಷ್ ಆಳ್ವಿಕೆಯಿಂದ ಅಥವಾ ವಸಾಹತುಶಾಹಿ ಆಗಮನದಿಂದ ಹೊಸದಾಗಿ ಮಲೆನಾಡನ್ನು ಪ್ರವೇಶಿಸಿದ ಕಾಫಿ, ವೈನು, ವಿಸ್ಕಿ ಮೊದಲಾದ ವಿದೇಶಿಯ ನಾಗರೀಕ ಪಾನೀಯಗಳ ಪ್ರಭಾವದ ಮುಂದೆ ಮಲೆನಾಡಿನ ಸ್ಥಳೀಯ ಹೆಂಡ ಕಳ್ಳು ಮೊದಲಾದ ಪಾನೀಯಗಳು

ಅಪಮೌಲ್ಯಗೊಂಡದ್ದು ಒಂದು ಕಾರಣ. ಆಧುನಿಕ ರೂಢಿಯಾದ ಕಾಫಿ ಕುಡಿಯುವುದು ಈಗಿನವರು ನಾಗರೀಕತೆಯ ಗೌರವವೆಂದು ಭಾವಿಸಿದಂತೆ, ಹಿಂದೆ ಮಲೆನಾಡಿನ ಜನಸಮುದಾಯ ಮನೆಗೆ ಬಂದ ನೆಂಟರಿಗೆ ಹೆಂಡ ಕಳ್ಳು ಮಾಂಸ ಮೊದಲಾದುವುಗಳನ್ನು ನೀಡುವುದರೊಂದಿಗೆ ಅತಿಥಿ ಸತ್ಕಾರ ಮಾಡಿ ಸನ್ಮಾನಿಸುತ್ತಿದ್ದ ಚಿತ್ರವನ್ನು ಕಾಣಬಹುದಾಗಿದೆ. ಇಂಥ ಅತಿಥಿ ಸೇವೆ ಮಾಡುವುದರೊಂದಿಗೆ ಹಿಂದೆ ಮಲೆನಾಡಿನ ಬದುಕಿನಲ್ಲಿ ಹೆಂಡ ಕಳ್ಳುಗಳ ಬಗೆಗಿದ್ದ ಗೌರವವನ್ನು, ಜನರ ನಂಬಿಕೆಯನ್ನು ಕುವೆಂಪು ಅವರು ತಮ್ಮ ಎರಡೂ ಕಥನಗಳಲ್ಲೂ ಕಾಣಿಸುತ್ತಾರೆ. ಹಾಗೆಯೇ ಮದ್ಯಪಾನದ ನಿಷೇದ, ನಿಷೇಧದ ಬಗೆಗೆ ಉಂಟಾದ ಚಳವಳಿಯು ಬಹುಮಟ್ಟಿಗೆ ಸೋತದ್ದರ ಬಗ್ಗೆ ಮತ್ತು ಮದ್ಯಪಾನ ನಿರೋಧದ ಮಸೂದೆಯ ಉಪನ್ಯಾಸ, ಮಾನಪತ್ರಕ್ಕೆ ಸಹಿ, ಅದರಿಂದ ಎದುರಾದ ಸಮಸ್ಯೆಗಳನ್ನು ಕುವೆಂಪು ಸಂವೇದನೆ ರೂಕ್ಷವಾಗಿ ವಿಡಂಬಿಸುತ್ತದೆ. ಈ ಚಳುವಳಿ ಸಂಪೂರ್ಣವಾಗಿ ವಿಫಲವಾಗಿದ್ದರೂ ಸ್ವಲ್ಪಮಟ್ಟಿಗೆ ಬದಲಾವಣೆಗೆ ಕಾರಣವಾದದ್ದನ್ನು ಕಾಣಿಸುತ್ತಾರೆ. ಬಹುಮಟ್ಟಿಗೆ ಎಲ್ಲೆಲ್ಲಿಯೂ ಬಹಿರಂಗವಾಗಿ ನಡೆಯುತ್ತಿದ್ದುದು, ಈಗ ಅಲ್ಲಲ್ಲಿ ಗೌಪ್ಯವಾಗಿ ಮತ್ತು ಅಂತರಂಗವಾಗಿ ಮದ್ಯಪಾನ ನಡೆಯುವುದನ್ನು ಚಂದ್ರಯ್ಯಗೌಡ ಮತ್ತು ಶಾಮಯ್ಯಗೌಡರ ರಹಸ್ಯ ಕುಡಿತದ ಚಿತ್ರದೊಂದಿಗೆ ಪರಿಚಯಿಸುತ್ತಾರೆ.

"…..ಕತ್ತಲಾದ ಮೇಲೆ ಪುಟ್ಟಣ್ಣ ಲ್ಯಾಂಪು ಹೊತ್ತಿಸಲು ಅಲ್ಲಿಗೆ ಬಂದನು. ಹೂವಯ್ಯ "ಪುಟ್ಟಣ್ಣಾ, ನಾ ನಿನಗೆ ಎಷ್ಟು ಸಾರಿ ಹೇಳಬೇಕು" ಎಂದು ಪ್ರಾರಂಭಿಸಿದರು.

"ನಾನೇನು ಮಾಡಿದ್ದು?….."

"ನಿನಗೆ ನಾಚಿಕೆಯಾಗೊದಿಲ್ಲೇನು? ಸೋಮನಂಥಾ ಬಾಡುಗಳ್ಳ ಕುಡುಕನೇ ಕುಡಿಯೋದನ್ನ ಬಿಟ್ಟಿದ್ದಾನೆ. ನಿನಗೆ…..?"

"ನಾನು ಕುಡಿದಿದ್ದರೆ…..ಕುಡಿದ್ಹಾಂಗ! ಆಣೆಹಾಕಿ ಬೇಕಾದರೂ ಹೇಳ್ತೀನಿ."

"ನೀನು ಕಂಬಳಿಯಲ್ಲಿ ತಂದೆಯಲ್ಲಾ ಅದೇನು?….."

"ನನಗಲ್ಲ! ನಾಗಮ್ಮೋರು ಹೇಳಿದ್ದರು ಅಂತಾ ಒಂದು ಶೀಸೆ….."

"ಕಳ್ಳೋ! ಹೆಂಡವೋ? ಸಾರಾಯಿಯೋ?"

"ಕಳ್ಳು!"

"ನಿನಗೆ ಕೆಟ್ಟದ್ದಾದರೆ ಅವ್ವಗೆ ಹೇಗೆ ಒಳ್ಳೆಯದಾಗ್ತದೆ ಹೇಳು?"

"ಅವರು ಸುಮಾರು ಸಾರಿ ಹೇಳಿದ್ದರು….."

ಹೂವಯ್ಯ ಮುಂದೆ ಮಾತಾಡಲಿಲ್ಲ. ಪುಟ್ಟಣ್ಣ ದೀಪ ಹೊತ್ತಿಸಿ ಹೋದ ಮೇಲೆ, ಅವನು ತನ್ನ ತಾಯಿಯ ದೌರ್ಬಲ್ಯವನ್ನು ಕುರಿತು ಯೋಚಿಸತೊಡಗಿದನು. ನಾಗಮ್ಮನವರು ಎಲ್ಲ ವಿಷಯಗಳಲ್ಲಿಯೂ ಆದರ್ಶ ಮಾತೆಯಾಗಿ ತೋರಿದರು. ಆದರೆ ಎರಡು ವಿಚಾರಗಳಲ್ಲಿ ಮಾತ್ರ ಅವರನ್ನು ತಿದ್ದುವುದು ಅಸಾಧ್ಯವಾಗಿತ್ತು. ಒಂದನೆಯದಾಗಿ ದೆವ್ವ ಮುಂತಾದ ಮೌಢ್ಯಗಳ ವಿಷಯದಲ್ಲಿ; ಎರಡನೆಯದಾಗಿ ಕಳ್ಳು

ಕುಡಿಯುವುದರಲ್ಲಿ! ಅವರು ಪದೇ ಪದೇ ದಿನವೂ ಕುಡಿಯುತ್ತಿರಲಿಲ್ಲ. ಆದಷ್ಟು ಪ್ರಯತ್ನದಿಂದ ಮಗನ ಮನಸ್ಸಿಗೆ ಮೆಚ್ಚುಗೆಯಾಗುವಂತೆ ನಡೆದುಕೊಳ್ಳಲು ಪ್ರಯತ್ನಿಸಿ, ಹದಿನೈದು ದಿನಗಳಿಗೊಮ್ಮೆ ತಿಂಗಳಿಗೊಮ್ಮೆ ಕುಡಿಯುವಷ್ಟು ಸಂಯಮವನ್ನು ಸಂಪಾದಿಸಿದ್ದರು. ಆದರೆ ಬಾಲ್ಯದಿಂದಲೂ ರಕ್ತಗತವಾಗಿ ಬಂದಿದ್ದ ಆ ಚಾಳಿ ಸಂಪೂರ್ಣವಾಗಿ ಹೋಗಬೇಕಾದರೆ 'ಅತ್ತಕಡೆ ಹೋದ ಮೇಲೆಯೇ' ಎಂದು ಅವರೇ ಹೇಳತ್ತಿದ್ದರು. ಹೂವಯ್ಯ ಆಲೋಚಿಸುತ್ತಾ ಆಲೋಚಿಸುತ್ತಾ, ತಾನು ನಶ್ಯ ಹಾಕುವುದನ್ನು ಬಿಡಲು ಪ್ರಯತ್ನಿಸಿದ್ದಾಗ ತನಗಾಗಿದ್ದ ಸೋಲುಗಳನ್ನು ಸಂಕಟಗಳನ್ನು ನೆನೆದು, ತನ್ನ ತಾಯಿಯ ಅಪ್ಪರಮಟ್ಟಿನ ಸೋಲು ಮಹಾ ಜಯವೆಂದೇ ಭಾವಿಸಿ ಸಹಾನುಭೂತಿಯಿಂದ ಹಿಗ್ಗಿದನು." *

ಹೂವಯ್ಯ ತಾನು ನಶ್ಯ ಹಾಕುತ್ತಿದ್ದುದನ್ನು ಬಿಡಲು ಯತ್ನಿಸಿದಾಗ ಅನೇಕ ಸೋಲುಗಳನ್ನು ಅನುಭವಿಸಿ ಕೊನೆಗೆ ಬಿಡಬೇಕಾಯಿತು. ಅವನು ಎಷ್ಟೇ ಸುಶಿಕ್ಷಿತ ಮನಸ್ಸಿನವನಾದರೂ ತನಗೆ ಅಂಟಿದ್ದ ಚಟವನ್ನು ಬಿಡಬೇಕಾದರೆ ಅನೇಕ ಮಾನಸಿಕ ಗೊಂದಲಗಳನ್ನು ಅನುಭವಿಸಬೇಕಾಯಿತು. ಆದರೆ ಹೆಚ್ಚು ವಿದ್ಯಾವಂತೆ ಅಲ್ಲದ ತನ್ನ ತಾಯಿ ನಾಗಮ್ಮನಂತಹವರು ಕುಡಿತವನ್ನು ತಮ್ಮ ಆಹಾರದ, ಆಚರಣೆಯ ಒಂದು ಭಾಗವನ್ನಾಗಿ ತನ್ನ ಪೂರ್ವಜರ ಕಾಲದಿಂದ ಒಪ್ಪಿಕೊಂಡು ಬಂದಿರುವಾಗ ಅದನ್ನು ಬಿಡುವುದು ಅವಳಿಗೆ ಅಷ್ಟು ಸುಲಭದ ಸಂಗತಿಯಲ್ಲ. ಹಾಗಾಗಿ ಹೂವಯ್ಯ ತನ್ನ ತಾಯಿಯ ಕುಡಿತದ ಹವ್ಯಾಸವನ್ನು ತುಂಬಾ ಸಹಾನುಭೂತಿಯಿಂದ ನೋಡುತ್ತಾನೆ. ಈ ಪ್ರಸಂಗದ ಬಗ್ಗೆ ವಿಮರ್ಶಕರೊಬ್ಬರು ಈ ರೀತಿ ಅಭಿಪ್ರಾಯಪಡುತ್ತಾರೆ.

"ಶ್ರೀ ಕುವೆಂಪು ತಾವು ಚಿತ್ರಿಸುವ ಸಮಾಜದ ಬಗೆಗೆ ಯಾವ ಬಗೆಯ ಮೋಹವನ್ನು ಇಟ್ಟುಕೊಳ್ಳದೆ, ತೆರೆದ ಮನಸ್ಸಿನಿಂದ ಚಿತ್ರಿಸುತ್ತಾರೆ ಎನ್ನುವುದಕ್ಕೆ ಪಾನನಿರೋಧ ಬಗ್ಗೆ ಒಕ್ಕಲಿಗ ಕಳೆಯಾಳುಗಳು ನಡೆದುಕೊಳ್ಳುವ ಒಂದು ಸಂದರ್ಭವೇ ಸಾಕ್ಷಿ. "ಶೂದ್ರ ಸಂಘದ ಮಹಾಸಭೆಯಲ್ಲಿ!" ಎನ್ನುವ ಆ ಇಡೀ ಅಧ್ಯಾಯವನ್ನು ಓದಿ, ಲೇಖಕರ ಹರಿತ ವ್ಯಂಗ್ಯವನ್ನು ನಾವು ಸವಿಯಬಹುದು. ಆದರೆ ಇಲ್ಲಿನ ದುರಂತವೆಂದರೆ, "ಅಂತೂ ಮಧ್ಯಪಾನ ಮಾಡವುದು ನಾಚಿಕೆಗೇಡಿನ ಕೆಲಸವೆಂದೇನೋ ಎಲ್ಲರಿಗೂ ಗೊತ್ತಾಗಿದೆ" ಎಂಬ ತೀರ್ಮಾನ ಸತ್ಯವಾಗದೆಯೇ ಹೋಗಿರುವಂತದ್ದು. ಅಂದರೆ ಮಧ್ಯಪಾನದಂತಹ ಒಂದು ಅಪಾಯಕಾರೀ ಪ್ರವೃತ್ತಿ, ಯಾವುದೇ ಕಾರಣಕ್ಕೆ ಕಡಿಮೆಯಾಗದೇ ಇರುವುದು. ಹೂವಯ್ಯನಂತಹ ಸಾತ್ವಿಕ ವ್ಯಕ್ತಿಯ ತಾಯಿಯಾದ ನಾಗಮ್ಮ ಕೂಡ ಈ ವ್ಯಸನಕ್ಕೆ ಪಕ್ಕಾಗಿದ್ದ ಸಂಗತಿ ನಿಜಕ್ಕೂ ಖೇದಕರವಾದದ್ದು. ಚಂದ್ರಯ್ಯಗೌಡರು ಮತ್ತಿತರರ ಮಧ್ಯ ವ್ಯಸನಕ್ಕೆ ಕಾನುಬೈಲಿನಲ್ಲಿ ಒಂದು ಕಡೆ ಕದ್ದು ಮಾರುವ ಕಳ್ಳಂಗಡಿಯೇ ಹುಟ್ಟಿಕೊಂಡಿದ್ದುದು ಆಶ್ಚರ್ಯವಲ್ಲ. ಆದರೆ ತನ್ನ ತೆಕ್ಕೆಯಲ್ಲಿ ಚಿಕ್ಕ ವಯಸ್ಸಿನವರು

ತೆಗೆದುಕೊಂಡಿದ್ದ ಈ ವ್ಯಸನ ಅವರಲ್ಲಿ ಕಳ್ಳತನ ಮಾಡುವುದಕ್ಕೆ ಪ್ರೇರಣೆ ಒದಗಿಸಿದುದು ಹೀನಾಯಕಾರೀ ಪ್ರಸಂಗ." [೬]

ಚಂದ್ರಯ್ಯಗೌಡರ ರೋಗವನ್ನು ಯಾವುದೇ ಔಷಧಿ ನಿವಾರಣೆ ಮಾಡದಿದ್ದಾಗ ಆತ ಮಾನಸಿಕವಾಗಿ ಮತ್ತು ದೈಹಿಕವಾಗಿ ಕುಜ್ಜನಾಗುತ್ತಾ ಹೋಗುತ್ತಾನೆ. ಅವನಿಗೆ ರೋಗ ದಿನೇದಿನೇ ಹೆಚ್ಚುತ್ತಾ ಹೋದಂತೆ ಸುಬ್ಬಮ್ಮ ಹತ್ತಿರದವಳಾಗಿ ಕಾಣತೊಡಗಿದಳು. ವಯಸ್ಸಿನಲ್ಲಿ ಅವಳನ್ನು ಆತ ಹಿಂಸೆಗೆ ಗುರಿಪಡಿಸಿದ ಘಟನೆಗಳೇ ಇಲ್ಲ. ಆದರೆ ಆತನ ಅಸಹಾಯಕ ಸ್ಥಿತಿಯಲ್ಲಿ ಸುಬ್ಬಮ್ಮ ಅವನ ಬಳಿಯೇ ಇರಬೇಕಾಗಿ ಬಂತು. ಮಗ ರಾಮಯ್ಯ ಇದಾವುದನ್ನೂ ತನ್ನ ಗಮನಕ್ಕೆ ತೆಗೆದುಕೊಳ್ಳದೆ ತನ್ನದೆಯಾದ ವೈಯಕ್ತಿಕ ಸಮಸ್ಯೆಯನ್ನು ಎದುರಿಸುವ ಗೊಂದಲದಲ್ಲಿ ಮುಳುಗಿರುತ್ತಾನೆ. ಆದರೆ ಸುಬ್ಬಮ್ಮ ಕೈಹಿಡಿದ ಗಂಡನಿಗೆ ತನಗೆ ಆತ ಕೊಟ್ಟ ಎಲ್ಲಾ ಹಿಂಸೆಗಳನ್ನು ಮರೆತು ಸುಶ್ರೂಷೆ ಮಾಡತೊಡಗುತ್ತಾಳೆ. ಆಕೆ ಒಂದುಕ್ಷಣ ಅವನಿಂದ ಮರೆಯಾದರೆ ಸಾಕು ಆತ ಚೀರಿಕೊಳ್ಳುತ್ತಾನೆ. ಇದರಿಂದ ಚಂದ್ರಯ್ಯಗೌಡನ ದೇಹ ದಿನದಿಂದ ದಿನಕ್ಕೆ ಕ್ಷೀಣಿಸುತ್ತಾ ಹೋಗುತ್ತದೆ. ಸಾಯುವ ಹಾದಿಯಲ್ಲಿರುವ ಅವನಿಗೆ ಯಾವುದೇ ಆಹಾರ ರುಚಿಸದು. ಅದರಿಂದಾಗಿ ಆತ ಆ ಘಳಿಗೆಯಲ್ಲಿಯೂ ತಾನು ಕಲಿತಿರುವ ಅಥವಾ ಅನೂಚಾನವಾಗಿ ನಡೆದುಕೊಂಡಿಬಂದಿದ್ದ ಮದ್ಯಪಾನದ ಚಟವನ್ನು ಬಿಡಲಾರ. ಈ ಸಂದರ್ಭವನ್ನು ಕಾದಂಬರಿಕಾರರು ಸುಬ್ಬಮ್ಮನ ಅಸಹಾಯಕತೆ ಮತ್ತು ಅರ್ಪಣಾ ಮನೋಭಾವ ಹೃದಯ ಕರಗುವಂತೆ ಚಿತ್ರಿಸಿರುವುದನ್ನು ಕಾಣಬಹುದು.

"…..ನಡೂ ಮಳೆಗಾಲದಲ್ಲಿ ಚಂದ್ರಯ್ಯಗೌಡರ ಮೈಗೆ ಬಾಕು ಬಂದಿತು. ಸುಬ್ಬಮ್ಮ ಗಂಡನನ್ನು ಕುರಿತು, ತಾಯಿ ಕಂದಗೆ ಹೇಳುವಂತೆ, ಕಳ್ಳುಕುಡಿಯುವುದು ಬೇಡವೆಂದು ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಕಡೆಗೆ ಸುಬ್ಬಮ್ಮ ಹಳೆಪೈಕದ ತಿಮ್ಮನಿಗೂ ಸೇರೆಗಾರರಿಗೂ ಕಳ್ಳು ತರಬಾರದೆಂದೂ ಹೇಳಿಬಿಟ್ಟಳು. ಗೌಡರು ರೇಗಿಕೊಂಡು ಆಹಾರವನ್ನೂ ಹೆಂಡಿತಿಯೊಡನೆ ಮಾತನ್ನು ಬಿಟ್ಟರು. ಸುಬ್ಬಮ್ಮ ಕಣ್ಣೀರು ಕರೆಯುತ್ತಾ ಎಷ್ಟು ದಮ್ಮಯ್ಯ ಹೇಳಿದರೂ ಸಫಲವಾಗಲಿಲ್ಲ. ಕಡೆಗೆ ಏನಾದರಾಗಲಿ ದೇವರೇ ಗತಿಯೆಂದು, ಎಂದಿನಂತೆ ಕಳ್ಳು ತರಿಸಿಕೊಡಲಾರಂಭಿಸಿದಳು. ಗೌಡರು ಕಳ್ಳನ್ನೂ ಕುಡಿಯುತ್ತಿದ್ದರು. ಆಹಾರವನ್ನು ಕೊಂಚಮಟ್ಟಿಗೆ ಸ್ವೀಕರಿಸುತ್ತಿದ್ದರು. ಆದರೆ ಹೆಂಡತಿಯೊಡನೆಗಾಗಲಿ ಇನ್ನಾರೊಡನೆಯಾಗಲಿ ಮಾತಾಡುತ್ತಿರಲಿಲ್ಲ."

"ಕಾನೂರು ಚಂದ್ಯಯ್ಯಗೌಡರಿಗೆ ಕಾಯಿಲೆ ಜೋರಾಗಿದೆ ಎಂದು ಸುದ್ದಿ ಹಬ್ಬಿತು. ಅನೇಕರು ಬಂದು ಬಂದು ಕಡೆಯಸಾರಿ ನೋಡಿಕೊಂಡು ಹೋಗತೊಡಗಿದರು. ಆದರೂ ಚಂದ್ರಯ್ಯಗೌಡರು ಸಾಯಲಿಲ್ಲ. ಇಂದೊ ನಾಳೆ ನಾಡಿದ್ದು ಆಚೆನಾಡಿದ್ದು ಅದರಾಚೆನಾಡಿದ್ದು ಎಂದು ಕಾಲವನ್ನು ಮುಂದು ಮುಂದಕ್ಕೆ ತಳ್ಳುತ್ತಿದ್ದರು. ಒಂದು ಸಂಜೆ; ಕಾನೂರು ಮನೆಯಲ್ಲಿ ಕೋಣೆಯೊಳಗೆ ಹಾಸಗೆಯ ಮೇಲೆ ಶವ ಸದೃಶ್ಯವಾಗಿ ಮೂಕವಾಗಿ ಮಲಗಿದ್ದ ಚಂದ್ರೇಗೌಡರ ಪಕ್ಕದಲ್ಲಿ, ತಲೆಯ ಬಳಿ ದೀರ್ಘಚಿಂತಾ

ಮಗ್ನಳಾಗಿ ಕುಳಿತಿದ್ದ ಸುಬ್ಬಮ್ಮನ ಹೊರತೊ ಬೇರೆಯಾರು ಇರಲಿಲ್ಲ. ಅಷ್ಟು ದೊಡ್ಡಮನೆ ನಿರ್ಜನವಾಗಿ ನಿ:ಶಬ್ದವಾಗಿ ಪಾಳಾಗಿಗಾಳಾಗಿತ್ತು." ೬

ಕಾದಂಬರಿಯ ಕೊನೆಯ ಅಧ್ಯಾಯದಲ್ಲಿ ಹೂವಯ್ಯ ಕೆಳ ಕಾನೂರಿನಿಂದ ಮುತ್ತಳ್ಳಿಗೆ ಹೊರಟ ಸಂದರ್ಭದಲ್ಲಿ ಚಿನ್ನಯ್ಯನಿಂದ ನಂಜ ಪತ್ರ ತಂದಿರುತ್ತಾನೆ. ನಾಳೆ ದಿವಸ ಚಿನ್ನಯ್ಯ ಮತ್ತು ಪುಟ್ಟಮ್ಮಳಿಗೆ ಹುಟ್ಟಿರುವ ಬಾಲೆಯನ್ನು ತೊಟ್ಟಿಲಿಗೆ ಹಾಕುವ ಸುದ್ದಿ, ಆ ಪತ್ರದ ಒಕ್ಕಣೆಯಾಗಿರುತ್ತದೆ. ಆಗ ಹೂವಯ್ಯ ಮತ್ತು ನಂಜ ಮುತ್ತಳ್ಳಿಗೆ ಹೊರಟ ಸಂದರ್ಭದಲ್ಲಿ ಕಳ್ಳಂಗಡಿ ನಂಜನ ಕಣ್ಣಿಗೆ ಬಿದ್ದು ಆತ ಹೂವಯ್ಯನಿಗೆ ನೀರು ಕುಡಿದು ಬರುವುದಾಗಿ ಸುಳ್ಳು ಹೇಳಿ ಹೋಗಿ ಕಳ್ಳು ಕುಡಿದು ಬರುತ್ತಾನೆ. ಆತನ ವರ್ಣನೆಯನ್ನು ಹೂವಯ್ಯ ಕಂಡ ಬಗೆಯನ್ನು ಕಾದಂಬರಿಯು ಈ ರೀತಿ ಕಥನವಾಗಿಸುವುದನ್ನು ಈ ಕೆಳಗಿನ ಉದ್ಧರಣೆಯಲ್ಲಿ ಕಾಣಬಹುದು.

"ದಾರಿಯಲ್ಲಿ ನಂಜ ಕಳ್ಳಂಗಡಿ ಹತ್ತಿರವಾಗಲು" ಅಯ್ಯಾ, ಬಹಳ ಆಕರ ಆಗ್ತದೆ. ಒಂದೀಟು ನೀರು ಕುಡಕೊಂಡು ಬತ್ತೀನಿ" ಎಂದನು.

ಹೂವಯ್ಯನಿಗೆ ಬಾಯಾರಿಕೆಯ ಒಳಗುಟ್ಟು ಗೊತ್ತಾಗಿ, ಸುಮ್ಮತಿಸಿ, 'ಹೊತ್ತು ಮಾಡಬೇಡ, ಬೇಗ ಬಾ' ಎಂದು ಮೆಲ್ಲಗೆ ಹೆಜ್ಜೆ ಹಾಕಿದನು. ಸ್ವಲ್ಪ ಹೊತ್ತಿನಲ್ಲಿಯೆ ನಂಜನೂ ನೀರಡಿಕೆ ಮದ್ದು ಹೊಯ್ದುಕೊಂಡು ತೃಪ್ತವಾಗಿ ಹಿಂದುಗಡೆಯಿಂದ ಬಂದು ಸೇರಿದನು.

ಹೂವಯ್ಯ ಹೆಂಡದ ವಾಸನೆಯದೆಸೆಯಿಂದ ಆದಷ್ಟು ಮಟ್ಟಿಗೆ ನಂಜನಿಗೆ ದೂರವಾಗಿಯೆ ಅವನನ್ನು ಮಾತಾಡಿಸದೆ ನಡೆಯತೊಡಗಿದನು. ನಸುಗತ್ತಲೆ ಕವಿಯತೊಡಗಿತ್ತು. ಆದರೆ ಹಾದಿ ಚೆನ್ನಾಗಿಯೆ ಕಾಣಿಸುತ್ತಿತ್ತು.

ಸ್ವಲ್ಪದೂರ ಹೋಗುವುದರಲ್ಲಿಯೆ ಹಿಂದುಗಡೆ ದೊಪ್ಪನೆ ಸದ್ದಾಗಿ ಹೂವಯ್ಯ ತಿರುಗಿ ನೋಡಿದಾಗ, ನಂಜ ನೆಲದಿಂದ ಮೇಲೇಳುತ್ತಾ ಬೀದಿಯ ದೂಳನ್ನು ಕೊಡವಿಕೊಳ್ಳು ತ್ತಿದ್ದನು, ಅವನ ನಿಲುವೂ ಅಸ್ಥಿರವಾಗಿತ್ತು.

ಹೂವ್ಯಯ್ಯ ಸ್ವಲ್ಪ ಹಾಸ್ಯವಾಗಿ "ಏನೋ?" ಎಂದನು.

"ಥೂಯ್ ಇದರ ಹೊಟ್ಟೆ ಹಾಳಾಗಿಹೋಯಿತಲ್ರೋ! ಅಲ್ಲಾ.....ದಾರಿ ಸುಮ್ಮಸುಮ್ಮನೆ ನನ್ನ ಕಾಲು ಹಿಡಿದು ಎತ್ತಿಬಿಡೋದೆ!" ಎನ್ನುತ್ತಾ ತೂರಾಡುತ್ತಾ ನಂಜ ಮುಂದುವರಿದನು. ಕುಡಿದಿದ್ದ ಕಳ್ಳು ನಂಜನ ತಲೆಗೇರುತ್ತಿರುವುದನ್ನು ಅರಿತು, ಹೂವಯ್ಯ ತನ್ನಷ್ಟಕ್ಕೆ ತಾನೆ ನಗುತ್ತಾ ಹಿಂತಿರುಗಿ ನೋಡದೆ ನಡೆಯತೊಡಗಿದನು. ಆದರೆ ಸ್ವಲ್ಪ ದೂರ ಹೋಗುವುದರಲ್ಲಿ ನಂಜ ಮತ್ತೆ ಬಿದ್ದನು. ಬಿದ್ದವನು ಎದ್ದು ನಿಲ್ಲುವುದಕ್ಕೆ ಬದಲಾಗಿ ಹಾಗೆಯೆ ಬಿದ್ದುಕೊಂಡು "ಥೂಯ್ ! ಇದರ ಹೊಟ್ಟೆ ಹಾಳಾಗಿ ಹೋಯಿತ್ತಲ್ರೋ! ಅದು ಯಾಕ್ರೋ ಹಿಂಗೆ ಮಾಡ್ತದೆ ಈರಸ್ತೆ ? ಹೆಜ್ಜೆ ಹಾಕೋಕೇ ಬಿಡೋದಿಲ್ಲ! ಥೂಯ್ " ಎಂದು ಉಗುಳಿದನು.

"ಇದೇ ಏನೋ, ನೀನು ಆಕರ ಆಗ್ತದೆ, ನೀರು ಕುಡುಕೊಂಡು ಬರ್ತೀನಿ ಅಂತಾ ಹೇಳಿದ್ದು? ಏಳು ಏಳು! ಎಂದನು ಹೂವಯ್ಯ."

"ಎಂಥಾ ಏಳೋದ್ರಪ್ಪಾ! ಥೂಯ್ ! ಇದರ ಮನೆ ಹಾಳಾಯ್ತಲ್ರೋ! ಮೇಲೆ ಏಳೋಕೆ ಬಿಡೋದಿಲ್ಲ.....ಹಾಕಿ ಅಮುಕ್ತದೆ!" ಎಂದು ಎದ್ದು ನಡೆಯುವುದಕ್ಕೆ ಬದಲಾಗಿ ಮಕ್ಕಳಂತೆ ಕೈಯೂರಿಕೊಂಡು ಅಂಬೆಗಾಲಿಡುತ್ತಾ ಮುಂದುವರಿಯತೊಡಗಿದನು. ಹೂವಯ್ಯನಿಗೆ ನಗು ತಡೆಯಲಾಗಲಿಲ್ಲ.

ಅಂತೂ ಹೂವಯ್ಯ ಹಿಡಿದುಕೊಂಡನಲ್ಲದೆ ನಂಜನಿಂದ ನಡೆಯಲಾಗಲಿಲ್ಲ. ಅವನನ್ನು ಕಷ್ಟದಿಂದ ನಡಸಿಕೊಂಡು ಹೋಗಿ, ಅವನ ಬಿಡಾರದ ಬಾಗಿಲಲ್ಲಿ ಬಿಟ್ಟು ಮುತ್ತಳ್ಳಿಯ ಮನೆಗೆ ಚೆನ್ನಾಗಿ ಕತ್ತಲಾದ ಮೇಲೆಯೆ ಹೋದನು. ಹೂವಯ್ಯನಿಗಾಗಿ ಎದುರುನೋಡುತ್ತಿದ್ದ ಚಿನ್ನಯ್ಯ ಅಷ್ಟು ಹೊತ್ತಾದುದೇಕೆಂದು ಪ್ರಶ್ನಿಸಲು, ಹೂವಯ್ಯ ಸೀತೆ ತಂದುಕೊಟ್ಟ ಬಿಸಿನೀರಿನಿಂದ ಕಾಲು ತೊಳೆದುಕೊಳ್ಳುತ್ತಾ ನಡೆದ 'ಕಥೆಯ'ನ್ನೆಲ್ಲಾ ಹೇಳಿದನು. ಅದನ್ನು ಕೇಳಿ ಎಲ್ಲರೂ ನಕ್ಕುನಕ್ಕು ಸಾಕಾದರು." ೮

ಒಟ್ಟಿನಲ್ಲಿ ವಸಾಹತುಶಾಹಿಯ ಆಗಮನದಿಂದಲೂ, ಆ ಸಂಸ್ಕೃತಿಯಿಂದ ಪರಿಚಿತವಾದ ಆಧುನಿಕ ಶಿಕ್ಷಣದ ಫಲವಾಗಿಯೂ, ಭಾರತೀಯ ಸಂವೇದನೆಯಲ್ಲಿ ಉಂಟಾದ ಸ್ಥಿತ್ಯಂತರಗಳಿಂದ ನಮ್ಮ ಸಾಂಸ್ಕೃತಿಕ ಬದುಕು ಅನೇಕ ನೆಲೆಗಳಲ್ಲಿ ಬದಲಾವಣೆಗೆ ಗುರಿಯಾಯಿತು. ಹಾಗೆಯೇ ಇಂಥ ಬದಲಾವಣೆಗಳಿಂದ ಎಚ್ಚರಗೊಂಡ ರಾಷ್ಟ್ರೀಯ ಪ್ರಜ್ಞೆಯ ಫಲವಾಗಿ ರಾಷ್ಟ್ರ ಮಟ್ಟದಲ್ಲಿ ಎಂತೂ ಅಂತೆಯೇ ಪ್ರಾದೇಶಿಕ ಮಟ್ಟದಲ್ಲಿಯೂ ನವಜೀವನ ಆರಂಭವಾಯಿತು. ಇಂಥ ಪ್ರಾದೇಶಿಕ ಪರಿಸರದ ಬದಲಾವಣೆಗೆ ಹೂವಯ್ಯನಂಥ ಆಧುನಿಕ ಸಂವೇದನೆಯ ಪ್ರಜ್ಞೆಯ ಪ್ರಭಾವದಿಂದಾಗಿ ಮಲೆನಾಡಿನಲ್ಲಿ ಪಾರಂಪರಿಕವಾಗಿದ್ದ ಅನೇಕ ರೂಢಿಗತ ಮೌಢ್ಯಗಳು, ಆಚರಣೆಗಳು, ಗೊಡ್ಡು ಸಂಪ್ರದಾಯಗಳು ಹಿಂದೆ ಸರಿದವು. ಅಂತೆಯೇ ಹೊಸನಾಗರೀಕತೆಯ ಪ್ರವೇಶದಿಂದಾಗಿ ಸ್ಕೂಲು, ಆಸ್ಪತ್ರೆ, ಪೋಸ್ಟಾಫೀಸು, ಅಂಗಡಿ ಮೊದಲಾದ ನಾಗರೀಕ ಸೌಲಭ್ಯಗಳ ಪರಿಚಿತವಾದವು. ಹೊಸ ವೈಚಾರಿಕತೆಯ ಪರಿಚಯದಿಂದ ಅಮಾನವೀಯ, ಅರ್ಥಹೀನ ಮೌಢ್ಯಗಳಿಗೆ ಬದಲಾಗಿ ಮಾನವೀಯ ಆಚಾರ ವಿಚಾರಗಳು ಜನರನ್ನು ಆಕರ್ಷಿಸಿದವು. ಹಾಗೆಯೇ ಅನೇಕ ಆಗರಗಳ ಕೇಂದ್ರವಾಗಿದ್ದ ಕಳ್ಳಂಗಡಿ ಕುಸಿದುಬಿದ್ದು ನಾಲ್ಕಾರು ಜನಕ್ಕೆ ಅನುಕೂಲವಾಗುವ ಕೇಂದ್ರವಾಗಿ ಪರಿಣಮಿಸಿದ್ದು, ಆಧುನಿಕ ಬದುಕಿನ ಪ್ರವೇಶ ಹೊಸ ಬದುಕಿಗೆ ಕಾರಣವಾದದ್ದನ್ನು ಈ ಕಥನ ಮಾರ್ಮಿಕವಾಗಿ ಚಿತ್ರಿಸುತ್ತದೆ.

"ತನ್ನನ್ನು ಕಾಡುತನದಿಂದ ಈ ನಾಗರೀಕ ಸ್ಥಿತಿಗೆ ತಂದು ಪೊರೆದ ಸ್ವಾಮಿಗೆ, ಯಾರಿಗೂ ಕೇಡೆಣಿಸದೆ ಎಲ್ಲರನ್ನೂ ಉದ್ಧಾರ ಮಾಡಬೇಕೆಂದು ಯತ್ನಿಸುತ್ತಿರುವ ಸ್ವಾಮಿಗೆ, ಕೀಳುಜಾತಿಯ ಬಡಬಗ್ಗರ ಮುರಕಲು ಹರಕಲು ಗುಡಿಸಲುಗಳಿಗೆ ಔಷಧಿ ಪಥ್ಯಗಳನ್ನು ಕೊಂಡೊಯ್ದು ನೀಡಿ, ಕಾಪಾಡಿ, ದೇವರಂತಿರುವ ಸ್ವಾಮಿಗೆ ದ್ರೋಹವೆಸಗಿದಂತಾಗುತ್ತದಲ್ಲವೆ?" ೯

ಎಂಬ ಸೋಮನ ಆಲೋಚನೆಯ ಹಿಂದೆ ಹೂವಯ್ಯನ, ಅಂದರೆ ಆಧುನಿಕ ಬದುಕಿನ ಪ್ರಭಾವ ನಿಚ್ಚಳವಾಗಿ ಪ್ರಕಟವಾಗುವುದರೊಂದಿಗೆ, ಕುವೆಂಪು ಕಥನಗಳು ಮಾದಕವಸ್ತುಗಳಿಂದ ಮಲೆನಾಡಿನ ಜೀವನದಲ್ಲಿ ಆಗುತ್ತಿದ್ದ ದುಷ್ಪರಿಣಾಮಗಳನ್ನು, ಅದರಿಂದ ಹೊರಬರಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತದೆ. ಒಟ್ಟಿನಲ್ಲಿ ಮಾನಹಾನಿ, ಆರೋಗ್ಯಹಾನಿ, ಆರ್ಥಿಕಹಾನಿಗಳಿಗೆ ಕಾರಣವಾಗುವ ಮದ್ಯಪಾನದ ಸೇವನೆಯನ್ನು ಮಲೆನಾಡಿನ ಸಮಷ್ಟಿ ಕ್ಷೇಮಾಭಿವೃದ್ಧಿಯ ದೃಷ್ಟಿಯಿಂದ ಹಾಗೂ ಅವುಗಳಿಂದಾಗುವ ಅನಾಹುತಗಳಿಂದ ಅಂಥ ದುಶ್ಚಟಗಳನ್ನು ನಿಷೇಧಿಸಬೇಕೆಂಬ ಕಾಣ್ಕೆಯು ಕುವೆಂಪು ಕಥನಗಳ ಬಹುಮುಖ್ಯ ಆಶಯಗಳಲ್ಲಿ ಒಂದಾಗಿದೆ.



# ಅಡಿಟಿಪ್ಪಣಿ

೧. ಕುವೆಂಪು, ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ, ಉದಯರವಿ ಪ್ರಕಾಶನ, ಮೈಸೂರು, ೧೯೯೫, ಪು : ೧೬ - ೧೭

೨. ಟಾಲ್‌ಸ್ಟಾಯ್ ವಿಚಾರಧಾರೆ : ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಶಿವರುದ್ರಪ್ಪ ಜಿ.ಎಸ್ (ಸಂ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೩, ಪು : ೨೦೩ - ೨೦೪

೩. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೧೯೧ - ೧೯೨

೪. ಗೋವಿಂದರಾವ್ ಸಿ.ಡಿ, ಸಾಹಿತ್ಯರಾಧನೆ, (ಸಂ) ದೇಜಗೌ, ಸಿ.ಪಿ.ಕೆ, ಮೋಹನ ಪ್ರಕಾಶನ, ಮೈಸೂರು, ೧೯೭೦, ಪು : ೮೪

೫. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೪೨೭ - ೪೨೮

೬. ವೇಣುಗೋಪಾಲ ಸೊರಬ, ಕನ್ನಡದ ಕೆಲವು ಪ್ರಮುಖ ಕಾದಂಬರಿಗಳು, (ಸಂ) ಶಿವರುದ್ರಪ್ಪ ಜಿ.ಎಸ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦ ಪುಟ : ೭೨ - ೭೩

೭. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೫೪೨ - ೫೪೩

೮. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು : ೫೭೪ - ೫೭೫

೯. ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೪೮೦



೭

# ಕುವೆಂಪು ಸಣ್ಣಕಥೆಗಳು : ವಿಶ್ಲೇಷಣೆ ಮತ್ತು ಪ್ರತಿಕ್ರಿಯೆ

## ಅ. ವಿಶ್ಲೇಷಣೆ

ನವೋದಯ ಕಾಲದ ಸಣ್ಣ ಕಥಾಸಾಹಿತ್ಯ ಪರಂಪರೆಯಲ್ಲಿ ಕುವೆಂಪು ಅವರ ಸ್ಥಾನವು ವಿಶಿಷ್ಟವಾದುದು. ಬಯಲುಸೀಮೆಯ ಬದುಕಿನ ವಾಸ್ತವ ಚಿತ್ರಗಳನ್ನು ಸಾಂಪ್ರದಾಯಿಕ ನೆಲೆಯಲ್ಲಿ ಮಾಸ್ತಿಯವರು ಅನಾವರಣಗೊಳಿಸಿದರೆ, ಕುವೆಂಪು ಅವರು ಮಲೆನಾಡಿನ ಸ್ಥಳೀಯ ಸಂಸ್ಕೃತಿಗಳ ವಿವರಗಳನ್ನು ವಾಸ್ತವಿಕ ನೆಲೆಯಲ್ಲಿ ಕಲಾತ್ಮಕವಾಗಿ ಕಟ್ಟಿಕೊಟ್ಟ ಯಶಸ್ಸಿಗೆ ಕಾರಣರಾಗಿದ್ದಾರೆ. ೧೯೩೬ ರಲ್ಲಿ ಪ್ರಕಟವಾದ ಇವರ 'ಸಂನ್ಯಾಸಿ ಮತ್ತು ಇತರೆ ಕಥೆಗಳು' ಮತ್ತು ೧೯೪೦ ರಲ್ಲಿ ಪ್ರಕಟವಾದ 'ನನ್ನ ದೇವರು ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನಗಳು ಕನ್ನಡ ಕಥಾ ಸಾಹಿತ್ಯ ಪರಂಪರೆಯಲ್ಲಿ ಪ್ರಮುಖವಾದ ಕೃತಿಗಳಾಗಿವೆ.

ಕುವೆಂಪು ಅವರ ಪ್ರಥಮ ಕಥಾ ಸಂಕಲನ 'ಸಂನ್ಯಾಸಿ ಮತ್ತು ಇತರ ಕಥೆಗಳು'. ಇದರಲ್ಲಿ ಸಂನ್ಯಾಸಿ, ಕ್ರಿಸ್ತನಲ್ಲ, ಪಾದ್ರಿಯ ಮಗಳು, ಈಶ್ವರನೂ ನಕ್ಕಿರಬೇಕು, ಆರಾಣೆ ಮೂರುಕಾಸು, ಯಾರೂ ಅರಿಯದ ವೀರ, ಹೋಳಿಗೆ ಪ್ರತಿಜ್ಞೆ, ಮಾಯದಮನೆ, ದೆವ್ವದಕಾಟ, ಶ್ರೀ ಮನ್ಮೂಕವಾಗಿತ್ತು ಎಂಬ ಒಂಬತ್ತು ಕಥೆಗಳಿವೆ. ನಾಲ್ಕು ವರ್ಷಗಳ ಅವಧಿಯ ನಂತರ ಪ್ರಕಟವಾದ ದ್ವಿತೀಯ ಕಥಾ ಸಂಕಲನ 'ನನ್ನ ದೇವರು ಮತ್ತು ಇತರ ಕಥೆಗಳು'. ಇದರಲ್ಲಿ ನನ್ನದೇವರು, ಸಾಲದಮಗು, ಆದರ್ಶಸಾಧನೆ, ಔದಾರ್ಯ, 'ಗಂಟು' ಅಥವಾ ಗುಪ್ತಧನ, ಮೀನಾಕ್ಷಿಯ ಮೇಷ್ಟರು, ಧನ್ವಂತರಿಯ ಚಿಕಿತ್ಸೆ, ವೈರಾಗ್ಯದ ಮಹಿಮೆ ಎಂಬ ಎಂಟು ಕಥೆಗಳಿವೆ. ಒಟ್ಟಾರೆ ಈ ಹದಿನೇಳು ಕಥೆಗಳಲ್ಲಿ ಪ್ರಧಾನವಾಗಿ ಮಲೆನಾಡಿನ ಪ್ರಾದೇಶಿಕ ಬದುಕು ವೈವಿಧ್ಯಮಯವಾಗಿ ಚಿತ್ರಿತವಾಗಿದೆ. ಇದಲ್ಲದೆ ಕುವೆಂಪು ಅವರು ಈ ಕಥಾ ಸಂಕಲನಗಳಿಂತ ಮೊದಲೇ ಭಾಷಾಂತರ, ಸ್ವತಂತ್ರ ಮುಂತಾದ ಪ್ರಾಯೋಗಿಕ ನೆಲೆಯಲ್ಲಿ 'ಕುವೆಂಪು ಅವರ ಮೊದಲ ಕಥೆಗಳು' ಎಂಬ ಸಂಗ್ರಹ ಕಥೆಗಳಲ್ಲಿ ಎಂಟು ಕಥೆಗಳನ್ನು ೧೯೨೬ ಮತ್ತು ೧೯೨೭ ನೇ ವರ್ಷಗಳಲ್ಲಿ ರಚಿಸಿರುವುದು ತಿಳಿದು ಬರುತ್ತದೆ. ಈ ಅವಧಿ, ಕುವೆಂಪು ಅವರು ಆಗತಾನೆ ಕನ್ನಡ ಸ್ನಾತಕೋತ್ತರ ತರಗತಿಯಲ್ಲಿ ಒದುತ್ತಿದ್ದ

ಸಂದರ್ಭ. ಅದಕ್ಕಿಂತಲೂ ಪೂರ್ವದಿಂದಲೇ ಸಾಹಿತ್ಯ ರಚನೆಯಲ್ಲಿ ತೊಡಗಿದ್ದುದು ಚಾರಿತ್ರಿಕವಾಗಿ ಸತ್ಯ. ಈ ಭಾಷಾಂತರ ಅಥವಾ ಪ್ರಾಯೋಗಿಕ ನೆಲೆಗಳ ಕಥಾ ಸಂಕಲನವಾದ 'ಕುವೆಂಪು ಅವರ ಮೊದಲ ಕಥೆಗಳು'. ಈ ಸಂಗ್ರಹದಲ್ಲಿ ಎಂಟು ಕತೆಗಳಿವೆ ಇವುಗಳಲ್ಲಿ ಮೂರು ಟಾಲ್‌ಸ್ಟಾಯ್ ಕಥೆಗಳ ಭಾಷಾಂತರ. ಅವುಗಳೆಂದರೆ 'ಅವಶ್ಯವಿದ್ದುದು ಆರಡಿ ಆಸೆ ಪಟ್ಟಿದ್ದು ಊರಿಡಿ', (How much land does a man need? ) 'ಧರ್ಮಪುತ್ರ', (The godson) ಫ್ರೆಂಚ್ ಕತೆಯೊಂದರ ಆಧಾರದ ಮೇಲೆ ರಚಿತವಾದ 'The coffee house of Suret'. ಇದರ ಭಾಷಾಂತರ 'ಸೂರತ್ತನ ಛತ್ರ'. ರವೀಂದ್ರನಾಥ ಠಾಕೂರರ 'ಕಾಬೂಲಿವಾಲ' ಈ ಕಥೆಯನ್ನು ಕುವೆಂಪು ಅವರು ಅದೇ ಹೆಸರಿನಲ್ಲಿ ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ', 'ಅಂದಿನರಾತ್ರಿ', 'ಕನಸಿನ ಕನಸು', 'ಮಾತಾ ಪಿತೃ ಭಕ್ತಿ', 'ತಿಮ್ಮಾ ಬೋಯಿಯ ಕತ್ತೆ' ಇವೆಲ್ಲವು ರಾತ್ರಿ ಮಲಗುವ ಮೊದಲು ಬೇಸರ ಕಳೆಯುವ ಸಲುವಾಗಿ ಮಕ್ಕಳು ಆಳು ಲಿಂಗನ ಸುತ್ತ ಸೇರಿಕೊಂಡು ಅವನ ಬಾಯಿಂದ ಹೇಳಿಸಿದ ಕಥೆಗಳು. ಇವು ಕುವೆಂಪು ಅವರ ಸ್ವತಂತ್ರ ಕಥೆಗಳು. ಈ ಕಥೆಗಳ ಬಗ್ಗೆ ದೇ. ಜವರೇಗೌಡ ಅವರು 'ಕುವೆಂಪು ಅವರ ಮೊದಲ ಕಥೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ತಮ್ಮ 'ಕುವೆಂಪು ಸಾಹಿತ್ಯ: ಕೆಲವು ಅಧ್ಯಯನಗಳು - ಸಂಪುಟ - ೨' ರಲ್ಲಿ ಉಲ್ಲೇಖಿಸುತ್ತಾರೆ. ಕುವೆಂಪು ಅವರಿಗೆ ಟಾಲ್‌ಸ್ಟಾಯ್, ಠಾಗೂರ್ ರವರು ತುಂಬ ಇಷ್ಟವಾದ ಲೇಖಕರು ಅವರ ಸಾಹಿತ್ಯದ ಓದಿನ ಪ್ರಭಾವವನ್ನು ಈ ಕಥೆಗಳ ಸೃಷ್ಟಿಯ ಹಿಂದೆ ಕಾಣಬಹುದು. ಆದರೆ ಈ ಮಹತ್ವದ ಲೇಖಕರ ಪ್ರಭಾವದಿಂದಾಗಿ ಮಲೆನಾಡಿನ ಹಿನ್ನೆಲೆಯಲ್ಲಿ ಈ ಕಥೆಗಳನ್ನು ಕಟ್ಟುವಲ್ಲಿ ಕುವೆಂಪು ಅವರು ಮರೆಯುವುದಿಲ್ಲ.

ಕುವೆಂಪು ಅವರು ಕಥೆ ಕಾದಂಬರಿ ಮತ್ತು ಮಲೆನಾಡಿನ ಚಿತ್ರಗಳು ಈ ಮೂರರಲ್ಲಿಯೂ ಮಲೆನಾಡಿನ ಸಕಲ ಜೀವ ಸಂಕುಲಗಳನ್ನು, ಪ್ರಾಕೃತಿಕ ಸಂಪತ್ತುಗಳನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಅವರ ಸಣ್ಣಕಥೆಗಳಲ್ಲಿ ಮತ್ತು ಮಲೆನಾಡಿನ ಚಿತ್ರಗಳಲ್ಲಿ ಬರುವ ಅನೇಕ ಸಂಗತಿಗಳು, ಪಾತ್ರಗಳು, ಘಟನೆಗಳು, ಸನ್ನಿವೇಶಗಳೂ ಅವರ ಕಾದಂಬರಿಗಳಲ್ಲಿಯೂ ಮುಂದುವರಿಯುತ್ತವೆ. ಅವರ 'ಮಲೆನಾಡಿನ ಚಿತ್ರಗಳು' ಅನುಭವದ ಕಥಾನಕಗಳು, ಅವರ ದೈನಂದಿನ ಬದುಕಿನಲ್ಲಿ ಕಾಣಿಸಿಕೊಳ್ಳುವ ನೆನಪಿನ ಬುತ್ತಿಗಳು ಇಲ್ಲಿ ಹರಳುಗಟ್ಟುತ್ತವೆ. ಈ ನೆನಪಿನ ಬುತ್ತಿಯಲ್ಲಿ ಸುಖದು:ಖಗಳು, ಸರಸ ವಿರಸಗಳು, ಹಾಸ್ಯಗಳು, ಬೇಟೆಗಳು ಚಿತ್ರಗಳ ರೂಪದಲ್ಲಿ ನಿರೂಪಿತವಾಗಿವೆ. ಮಲೆನಾಡಿನ ಪ್ರಾದೇಶಿಕ ವೈಶಿಷ್ಟ್ಯತೆಗಳು, ಸ್ಥಳಗಳು, ವ್ಯಕ್ತಿಗಳು ಅಸಾಧಾರಣವಾಗಿ ಬಣ್ಣಿತವಾಗಿವೆ. ಸೂರ್ಯೋದಯ, ಚಂದ್ರೋದಯ, ಕದ್ದಿಂಗಳು, ಬೆಳದಿಂಗಳು, ಕವಿಶೈಲ, ನವಿಲುಕಲ್ಲು, ಸಹ್ಯಾದ್ರಿಯ ಶ್ರೇಣಿಗಳು, ಪರ್ವತಗಳು, ದಟ್ಟಾರಣ್ಯಗಳು, ಪಕ್ಷಿಸಂಕುಲಗಳು, ಪ್ರಬಂಧಕಾರರ ಸಿಬ್ಬಲುಗುಡ್ಡೆ ಇವು ಕವಿಯ ಹೃದಯವನ್ನು ಆಕರ್ಷಿಸುತ್ತವೆ. ಹನ್ನೆರಡು ಪ್ರಬಂಧಗಳ ಈ ಸಂಕಲನ ಕನ್ನಡ ಕಥಾ ಸಾಹಿತ್ಯಕ್ಕೆ ಒಂದು ಮಹತ್ವದ ಕೊಡುಗೆಯಾಗಿದೆ. ಇವುಗಳನ್ನು ಪ್ರಬಂಧಗಳನ್ನಾಗಿಯೂ ಓದಬಹುದು, ಹರಟೆಗಳನ್ನಾಗಿಯು ಓದಬಹುದು, ಕಥೆಗಳನ್ನಾಗಿಯು ಓದುಬಹುದು. ಇವು ಒಂದು ರೀತಿಯಲ್ಲಿ ಕಥನಾತ್ಮಕ ಪ್ರಬಂಧಗಳಾಗಿವೆ.

ಇವುಗಳಲ್ಲಿ ಮುಖ್ಯವಾಗಿ 'ಅಜ್ಜಯ್ಯನ ಅಭ್ಯಂಜನ', 'ಪುಟ್ಟಾಚಾರಿಯ ಕಾಡುಕೋಳಿ', 'ಕತೆಗಾರ ಮಂಜಣ್ಣ', 'ಜೇನುಬೇಟೆ', 'ಬಂದನಾ ಹುಲಿರಾಯನು' ಮುಂತಾದ ಚಿತ್ರಗಳು ಮಲೆನಾಡಿನ ಸ್ವರೂಪವನ್ನು ವಿವರಿಸುತ್ತವೆ.

ಪ್ರಬಂಧಕಾರರು ಈ ಕೃತಿಯ ಮುನ್ನುಡಿಯಲ್ಲಿ "ನೆನಪು ಬಾಳಿನ ಬುತ್ತಿ : ಅನುಭವಗಳ ಅಕ್ಷಯ ನಿಧಿ" ಎಂದು ಹೇಳುತ್ತಾರೆ. ಮತ್ತೆ ಮುಂದುವರಿದು "ಇವು ಕಾಡು ಹರಟೆಗಳಲ್ಲ ಕಾಡಿನ ಹರಟೆಗಳೆಂದು ಸೂಚಿಸುತ್ತಾರೆ. ಕಾಡು ಬೆಟ್ಟಗಳೇ ಇಲ್ಲಿ ಪ್ರಮುಖ ಪಾತ್ರಗಳು, ವ್ಯಕ್ತಿ ಚಿತ್ರಗಳು ಬಂದರೂ ಅವು ಪ್ರಕೃತಿಯ ವೈಚಿತ್ರಕ್ಕೆ, ರೌದ್ರತೆಗೆ, ಪ್ರಶಾಂತತೆಗೆ ಪೂರಕವಾಗಿಯೇ ಬರುತ್ತವೆ. ಮಲೆನಾಡಿನ ಚಿತ್ರಗಳಲ್ಲಿ ಕುವೆಂಪು ಮುಖ್ಯವಾಗಿ ತಮ್ಮ ಕವಿ ಸಹಜ ಪ್ರತಿಭೆ ಪ್ರವೃತ್ತಿಯೊಡನೆ ಕಾಣಿಸಿಕೊಳ್ಳುತ್ತಾರೆ. ಬೇಟೆಗಾಗಿ ಕಾಡಿಗೆ ಹೋದವನು ಕವಿಯಾಗಿ ಪ್ರಕೃತಿಯ ಸೊಬಗನ್ನು ಅನುಭವಿಸುವುದು, ಬೇಟೆಗಾರನಾಗಿ ಕಾಡಿಗೆ ಹೋದವನು ಕವಿಯಾಗಿ ಮನೆಗೆ ಹಿಂತಿರುಗುವುದು ಇವೆಲ್ಲ ಇಲ್ಲಿ ಸಹಜವಾಗಿಯೇ ಚಿತ್ರಿತವಾಗಿವೆ. ಪ್ರಕೃತಿಯ ರಮಣೀಯತೆಯೇ ಪ್ರಮುಖ ಆರಾಧನೆ. ಪ್ರಕೃತಿಯ ಸಾನಿಧ್ಯದಲ್ಲಿ ಮುಕ್ತಿಯ ಸಾಧನೆ ಎಂದು ನಂಬುವ ಅನೇಕ ದುಷ್ಟಾಂತಗಳು ಇಲ್ಲಿವೆ ಇವೆಲ್ಲ ಲೇಖಕರ ವ್ಯಕ್ತಿನಿಷ್ಠ ಅನುಭವಗಳನ್ನಬಹುದು. ಹಾಗಾಗಿ ಮಲೆನಾಡಿನ ಚಿತ್ರಗಳ ಪ್ರಪಂಚದಲ್ಲಿ ಲೇಖಕರ ಅನುಭವದ ಸಮೃದ್ಧಿ ಸಂಕೀರ್ಣತೆಗಳೆರಡು ಮಡುಗಟ್ಟಿವೆ. ಇದಕ್ಕೆ ಹೆಚ್ಚಿನ ಸಾಕ್ಷಿ ಬೇಕಾದರೆ ಈ ಕೃತಿಗೆ ಕುವೆಂಪು ಬರೆದಿರುವ ಮುನ್ನುಡಿಯಲ್ಲಿ ಕವಿಕಂಡ ಕವಿಶೈಲ, ನವಿಲುಕಲ್ಲು, ಸಿಬ್ಬಲಗುಡ್ಡಗಳ ಅದ್ಭುತ ರಮ್ಯ ಬಣ್ಣನೆಯ ನೋಟವಿದೆ.

ಪ್ರಕೃತಿಯ ಅದ್ಭುತತೆಯಲ್ಲಿ ವ್ಯಕ್ತಿಗಳು ಲೀನವಾಗುವುದು ತತ್ಪರರಾಗುವುದು ಕುವೆಂಪುಗೆ ಎಂದೂ ಅಸಹಜವಲ್ಲ. ವಸ್ತು ಎಷ್ಟೇ ಸಣ್ಣದಿದ್ದರೂ ಅದನ್ನು ಅಖಂಡ ದೃಷ್ಟಿಯಿಂದ ನೋಡುವುದು ಕುವೆಂಪುರವರ ವೈಶಿಷ್ಟ್ಯ. ಕಾಡಿನಲ್ಲಿ ಬೇಟೆಯ ಪ್ರಸಂಗದಲ್ಲಿ ಹಾವು ಮತ್ತು ನಾಯಿಯ ಹೋರಾಟದ ರುದ್ರ ಮನೋಹರವಾದ ಚಿತ್ರವೊಂದನ್ನು 'ಹಾಸ್ಯದ ಚಟಾಕಿ' ಪ್ರಬಂಧದಲ್ಲಿ ವರ್ಣಿಸಲಾಗಿದೆ. ಹಾವು ಮಿಂಚಿನ ವೇಗದಿಂದ ನಾಯಿಯ ಬಾಯಿಯಿಂದ ತಪ್ಪಿಸಿಕೊಳ್ಳುವುದು ಪ್ರಬಂಧದಲ್ಲಿ ಅಮೋಘವಾಗಿ ವರ್ಣಿತವಾಗಿದೆ. 'ಬಂದನಾ ಹುಲಿರಾಯನು' ಮತ್ತು 'ಪುಟ್ಟಾಚಾರಿಯ ಕಾಡುಕೋಳಿ' ಪ್ರಬಂಧದಲ್ಲಿ ಬರುವ ನಾಯಕರಾದ ರಂಗಯ್ಯ ಮತ್ತು ಪುಟ್ಟಾಚಾರಿ ಕಾಡಿಗೆ ಬೇಟೆಗೆ ಹೋಗಿ ಅನಿರೀಕ್ಷಿತವಾಗಿ ಹುಲಿಯನ್ನು ಎದುರಿಸಿ ಅದರಿಂದ ಪಾರಾಗಿ ಬರುವ ಪ್ರಸಂಗವು ಓದುಗರನ್ನು ಉಸಿರು ಕಟ್ಟಿಸುವಂತೆ ಮಾಡುತ್ತದೆ. ರಂಗಯ್ಯ ಮತ್ತು ಪುಟ್ಟಾಚಾರಿಯ ಜೀವನವನ್ನು ಅವರ ಕುಟುಂಬದ ವಿವರಗಳನ್ನು ಲೇಖಕರು ವರ್ಣಿಸುವುದನ್ನು ಮರೆಯುವುದಿಲ್ಲ. ಪುಟ್ಟಾಚಾರಿಯ ಕಾಡುಕೋಳಿ ಬರೀ ಬೇಟೆಯ ಚಿತ್ರ ಮಾತ್ರವಲ್ಲ ಅವನ ಜೀವನದ ಕತೆಯೂ ಹಾಗಿದೆ. ಕಬ್ಬಿಣದಷ್ಟು ಗಟ್ಟಿಯಾದ ಮನುಷ್ಯ ಕೊನೆಗೆ ಅಣಬೆಯಂತಹ ಹುಳು ತಿಂದು ಕೊಳೆತು ಸಾಯುವ ಚಿತ್ರ ಸೋಚನೀಯವಾಗಿದೆ. ಕಥೆಗಾರ ಮಂಜಣ್ಣ ಮಲೆನಾಡಿನ ಒಬ್ಬ ಅದ್ಭುತ ಕತೆಗಾರ. ಅವನ ಕತೆಗಳು ಮಕ್ಕಳಿಗೆ ಒಂದು ಆಕರ್ಷಣೀಯ ಗಣಿಯಾಗಿದೆ. ಹಾಸ್ಯ, ವಿನೋದ, ವಿಡಂಬನೆ, ಉಕ್ತಿ ವಿಡಂಬನೆಗಳನ್ನು ಬೆರೆಸಿ ಕತೆ ಹೇಳುವುದರಲ್ಲಿ ಕುವೆಂಪು ಅವರು ಅಗ್ರಗಣ್ಯರು ಅವರ ಗದ್ಯ ಕಾವ್ಯಾತ್ಮಕವಾದುದು ಮತ್ತು ಭಾವಪೂರ್ಣವಾದುದು.

ಇಲ್ಲಿನ 'ಚಿತ್ರಗಳು' ಪ್ರಧಾನವಾಗಿ ಬೇಟೆಯನ್ನು ಕುರಿತವುಗಳಾಗಿವೆ. ಈ ಮಲೆನಾಡಿನ ಬೇಟೆಯ ವಿಧಾನಗಳನ್ನು, ಸನ್ನಿವೇಶಗಳನ್ನು ವರ್ಣಿಸುವಾಗ ಕುವೆಂಪು ಅವರು ತೋರ್ಪಡಿಸುವ ಕಲೆಯ ಸೂಕ್ಷ್ಮತೆ ತುಂಬಾ ಗಮನಾರ್ಹವಾದುದು. ಪ್ರಬಂಧದ ಉದ್ದಕ್ಕೂ ಕುತೂಹಲವನ್ನು ಕಾಯ್ದುಕೊಂಡು ಓದುಗನನ್ನು ಸೆರೆ ಹಿಡಿಯುವ ಈ ಕಥನ ತಂತ್ರ ವಿಶಿಷ್ಟವಾದುದು. 'ಅಜ್ಜಯ್ಯನ ಅಭ್ಯಂಜನ', 'ರಾಮಾರಾವಣರ ಯುದ್ಧ', 'ಅಣ್ಣಪ್ಪನ ರೇಷ್ಮೆ ಕಾಯಿಲೆ' ಇವೆಲ್ಲ

ಈ ಸೂಕ್ಷ್ಮತೆಗಳನ್ನು ದಟ್ಟವಾಗಿ ಪ್ರಕಟಪಡಿಸುತ್ತವೆ. ಅಜ್ಜಯ್ಯ, ಮಂಜಣ್ಣ, ವಾಸು, ಮಾನು ಈ ವ್ಯಕ್ತಿಗಳ ಸ್ವಭಾವ ಮಲೆನಾಡಿನ ಪರಿಸರಕ್ಕೆ ಬದ್ಧವಾಗಿವೆ. ಈ ಮಲೆನಾಡಿನ ಚಿತ್ರಗಳ ಜೊತೆ ಗೊರೂರ 'ಹಳ್ಳಿಯ ಚಿತ್ರಗಳು', ಕಾರಂತರ 'ಹಳ್ಳಿಯ ಹತ್ತು ಸಮಸ್ತರು' ಕೃತಿಗಳನ್ನು ನೆನೆಯಬಹುದು. ಇಲ್ಲಿಯ ಪ್ರಬಂಧಗಳಲ್ಲಿನ ಅತ್ಯಂತ ರೋಚಕವಾದ, ಹಾಸ್ಯಭರಿತವಾದ ಆಕರ್ಷಕವಾದ ಯಶಸ್ವಿ ಪ್ರಬಂಧವೆಂದರೆ 'ಅಜ್ಜಯ್ಯನ ಅಭ್ಯಂಜನ' ಈ ಪ್ರಬಂಧದ ಉದ್ದಕ್ಕೂ ಹರಿಯುವ ಹಾಸ್ಯ ಈ ಪ್ರಬಂಧದ ವಿನ್ಯಾಸವನ್ನು ವಿಶಿಷ್ಟವಾಗಿ ರೂಪಿಸಿದೆ.

ಕುವೆಂಪು ಅವರು 'ಸಂನ್ಯಾಸಿ ಮತ್ತು ಇತರ ಕಥೆಗಳು' ಕಥಾ ಸಂಕಲನದಲ್ಲಿನ ಬಹುಪಾಲು ಕಥೆಗಳ ವಸ್ತು ಮಾನವೀಯತೆ, ಜೀತಪದ್ಧತಿ, ಮೌಢ್ಯ, ಮೂಢನಂಬಿಕೆ, ಕುತೂಹಲ, ರಹಸ್ಯ, ಹಾಸ್ಯವಿಡಂಬನೆ, ಮಲೆನಾಡಿನ ಪ್ರಕೃತಿ ವರ್ಣನೆ ಮುಂತಾದ ಸಂಗತಿಗಳನ್ನು ಕುರಿತು ವಿವರಿಸುತ್ತವೆ. ಇವು ಸಮಕಾಲೀನ ಮಲೆನಾಡಿನ ಜೀವನ ಕ್ರಮವನ್ನು ಶೋಧನೆಗೆ ಒಳಗು ಮಾಡುತ್ತವೆ. ಇವರ 'ಯಾರು ಅರಿಯದ ವೀರ' ಎಂಬ ಕಥೆಯು ಈ ಶತಮಾನದಲ್ಲಿ ಬಂದ ಅತ್ಯುತ್ತಮ ಕಲಾತ್ಮಕ ಕಥೆಗಳಲ್ಲಿ ಒಂದಾಗಿದೆ. ಇದರ ಕಥಾ ನಾಯಕ ಸಾಮಾನ್ಯ ವ್ಯಕ್ತಿ ಲಿಂಗ. ಈತ ನಿಷ್ಕಪಟದ, ತ್ಯಾಗದ, ಸ್ವಾಮಿಭಕ್ತಿಯ ಒಬ್ಬ ಮನೆಯ ಆಳು. ಈತನ ಪಾತ್ರ ತ್ಯಾಗಕ್ಕೆ, ನಿಷ್ಠೆಗೆ ಅತ್ಯುತ್ತಮ ನಿದರ್ಶನ. ಸಾಮಾನ್ಯನಲ್ಲಿ ಅಸಾಮಾನ್ಯ ವ್ಯಕ್ತಿತ್ವದ ಅಭಿವ್ಯಕ್ತಿಯನ್ನು ಕಾಣಬಹುದು. ಲಿಂಗ ಮಲೆನಾಡಿನ ಶ್ರೀಮಂತ ಸುಬ್ಬಣ್ಣಗೌಡರ ಮನೆಯ ಆಳು, ನಿಷ್ಠಾವಂತ ವ್ಯಕ್ತಿ. ಈತ ಒಮ್ಮೆ ಕುಡಿದು ಬೈದು ಮಾತನಾಡಿದ್ದಕ್ಕೆ ತನ್ನ ಹಿಂದಿನ ಒಡೆಯರು ಆತನನ್ನು ಜೈಲಿಗೆ ಕಳಿಸಿದ್ದರು. ಆದರೆ ಆತ ಜೈಲಿನಿಂದ ಬಿಡುಗಡೆಯಾಗಿ ಬರುವ ಹೊತ್ತಿಗೆ ತನ್ನ ಪತ್ನಿ ತೀರಿಕೊಂಡಿದ್ದಳು. ಲಿಂಗನ ಸತ್ವ ಪರೀಕ್ಷೆಗೆ ಎದುರಾಗಿ ತುಂಗಾನದಿಯ ಪ್ರವಾಹ ಬರುತ್ತದೆ. ಅವನ ತ್ಯಾಗವನ್ನು ಅದು ಪರೀಕ್ಷೆಗೆ ಒಡ್ಡುತ್ತದೆ. ಆಗ ಅವನ ಸಾಹಸ ಪ್ರಕಟವಾಗುತ್ತದೆ. ತುಂಗಾನದಿ ಉಕ್ಕಿ ರಾತ್ರೋರಾತ್ರಿ ಹರಿದು ಸುಬ್ಬೇಗೌಡರ ಆಸ್ತಿ, ಮನೆ, ಮಕ್ಕಳನ್ನೆಲ್ಲಾ ಬಲಿತೆಗೆದುಕೊಳ್ಳುವ ಸಂದರ್ಭ ಒದಗಿ ಬರುತ್ತದೆ. ಆಗ ಲಿಂಗ ಮಳೆ ಗಾಳಿ ಸಿಡಿಲು ಪ್ರವಾಹ ಕತ್ತಲು ಯಾವುದನ್ನು ಲೆಕ್ಕಿಸದೆ ತನ್ನ ಧಣಿಯ ಸಂಸಾರವನ್ನು ಆ ತುಂಗಾ ನದಿಯ ಪ್ರವಾಹದಿಂದ ಪಾರುಮಾಡುತ್ತಾನೆ. ಆದರೆ ಲಿಂಗ ಕೊನೆಗೆ ನೀರ ಪಾಲಾದದ್ದು ಕಂಡು ಸುಬ್ಬೇಗೌಡರು, ತಿಮ್ಮ, ಸೀತೆ ಅವನ ಮಗ ಕಣ್ಣೀರ ಹೊಳೆ ಹರಿಸುತ್ತಾರೆ. ಸುಬ್ಬೇಗೌಡರು, ತಮ್ಮನ್ನು ರಕ್ಷಿಸಿದ ನಮ್ಮ ಮನೆಯ ಬೆಳಕೇ ಹೋಯಿತು ಎಂದು ಪರಿತಪಿಸುವ ಯಾತನೆಗೆ ಗುರಿಯಾಗುತ್ತಾರೆ. ಲಿಂಗನ ಸಾವು ದುರಂತದಲ್ಲಿ ಮುಳುಗಿತು ಎಂದು ಆತನ ಅನಿರೀಕ್ಷಿತ ಮರಣಕ್ಕಾಗಿ ಎಲ್ಲರೂ ಶೋಕಿಸಿದರು. ಆದರೆ ಆತನ ಸಾವು ನಿಗೂಢವಾಗಿದ್ದರಿಂದ ಎಲ್ಲಾ ಕಡೆ ಹುಡುಕಾಡಲು ಅವನು ನಾಪತ್ತೆಯಾದ ವಿಚಾರವನ್ನೇ ಪ್ರಸ್ತಾಪಿಸಿ ವಿಸ್ಮಯ ಪಡುತ್ತಿರುವ ಸ್ವಲ್ಪ ಹೊತ್ತಿನಲ್ಲಿಯೇ ಬಟ್ಟೆಬರೆಯಲ್ಲಾ ಅರಿದು ಒದ್ದೆಯಾಗಿದ್ದು, ಮೈಯೆಲ್ಲ ಕೆಸರಾಗಿದ್ದ, ಬಹಳ ಬಳಲಿ ಕೆಂಗೆಟ್ಟು ನಡುಗುತ್ತಿದ್ದ ಲಿಂಗನ ದರ್ಶನವಾಗುತ್ತದೆ. ತನ್ನ ಜೀವನ ಹಂಗು ತೊರೆದು ತನಗೆ ಅನ್ನ ಹಾಕಿದ ಧಣಿಯನ್ನು; ಧಣಿಯ ಕುಟುಂಬವನ್ನು ಉಳಿಸಿದ ಯಾರು ಅರಿಯದ ರೀತಿಯಲ್ಲಿ ತನ್ನ ಸಾಹಸವನ್ನು ಲಿಂಗ ಗುರುತಾಗಿಸಿ ಕೊಳ್ಳುತ್ತಾನೆ.

ಈ ಕಥೆಯಲ್ಲಿ ಸೀತೆ ತಿಮ್ಮು ನಾಗ ಈ ಮಕ್ಕಳ ಮುಗ್ಧ ಪ್ರೇಮದ ಶುದ್ಧ ಮನಸ್ಸಿನ ಅನಾವರಣ ಸಹಜವಾಗಿದೆ. ತಮ್ಮ ಜೀತದಾಳಾದ ಲಿಂಗನ ಬಗ್ಗೆ ಸುಬ್ಬಣ್ಣನವರು ತೋರಿದ ಅನುಕಂಪ, ಅವನು ಕಾಣದಿದ್ದಾಗ ಅವನಿಗೋಸ್ಕರ

ಸುರಿಸುವ ಕಣ್ಣೀರು, ಪಡುವ ಸಂಕಟ. ಲಿಂಗ ಬದುಕಿ ಬಂದದ್ದನ್ನು ಕಂಡಾಗ ಸತ್ತಮಗ ಮತ್ತೆ ಬದುಕಿ ಬಂದನೆಂದು ಅವರು ಪಡುವ ಸಂತಸ ಇವೆಲ್ಲ ಗೌಡರ ಹೃದಯ ವೈಶಾಲ್ಯಕ್ಕೆ ಸಾಕ್ಷಿ. ಈ ಕಥೆಯ ಜೀವನಾಡಿ ಲಿಂಗ. ಈ ಸಾಮಾನ್ಯ ವ್ಯಕ್ತಿಯ ತ್ಯಾಗದ ಮಹಾಕಾರ್ಯವು ಲೋಕದ ಕಣ್ಣಿಗೆ ಅಜ್ಞಾತವಾಗಿಯೇ ಉಳಿದು ಬಿಡುತ್ತದೆ. ಅನ್ಯಾಯವಾಗಿ ಸೆರೆಮನೆ ವಾಸ ಅನುಭವಿಸಿ ಬಂದು ಮಡದಿಯನ್ನು ಕಳೆದುಕೊಂಡು ಜನ ನಿಂದನೆಗೆ ತುತ್ತಾದ ಈತ ಕೊನೆಗೆ ಒಂದು ಕುಟುಂಬದ ಉಳಿವಿಗೆ ಮತ್ತು ಉನ್ನತಿಗೆ ಕಾರಣನಾಗುತ್ತಾನೆ. ಇಂಥ ಒಂದು ಅಪರೂಪದ ಪಾತ್ರ ಸೃಷ್ಟಿಯಲ್ಲಿ ಕುವೆಂಪು ಅವರು ತಮ್ಮ ಉಜ್ವಲವಾದ ದಾರ್ಶನಿಕತೆಯನ್ನು ಕಾಣಿಸಿದ್ದಾರೆ.

"ನುಗ್ಗೆಹಳ್ಳಿಯ ರಾಮೇಗೌಡರೂ ಸಿದ್ದೇಗೌಡರೂ ಓಡಿಬಂದು ಹೆಂಗಸರು ಮಕ್ಕಳನ್ನೆಲ್ಲಾ ಎಚ್ಚರಿಕೆಯಿಂದ ದೋಣಿಯಿಂದ ಇಳಿಸಿದರು. ಸುಬ್ಬಣ್ಣಗೌಡರು ಉಸ್ಸೆಂದು ಇಳಿದರು. ಎಲ್ಲರೂ ದಡ ಸೇರಿದೆವಲ್ಲಾ ಬದುಕಿದೆವಲ್ಲಾ ಎಂಬುದೊಂದೇ ಯೋಚನೆ. ಆ ಆನಂದದ ಸಡಗರದಲ್ಲಿ ಲಿಂಗನ ನೆನಪು ಆಗದಿದ್ದುದು ಏನೂ ಅತಿಶಯವಲ್ಲ. ಆದರೆ ನಾಗ ಮಾತ್ರ ಅಳುತ್ತಿದ್ದ. ಅದನ್ನು ನೋಡಿ ನುಗ್ಗೇಹಳ್ಳಿಯ ಸಿದ್ದೇಗೌಡರು

"ಯಾಕಪ್ಪಾ ಅಳ್ತೀಯ? ಏನಾಯ್ತೊ? ಎಂದು ಕೇಳಿದರು.

ಅವನು ಬಿಕ್ಕಿ ಬಿಕ್ಕಿ ಅಳುತ್ತ "ಅಪ್ಪ!" ಎಂದ

ಸುಬ್ಬಣ್ಣಗೌಡರು "ಏನದು ಸಿದ್ದೇಗೌಡ್ರೆ?" ಎಂದರು

"ಈ ಹುಡುಗ ಅಪ್ಪಾ ಎಂದು ಅಳ್ತಾನೆ!"

ಸುಬ್ಬಣ್ಣಗೌಡರ ಮುಖ ಬೆಳ್ಳಗಾಗಿ ತಟಕ್ಕನೆ ಎಂದು ನಿಂತು "ಲಿಂಗಾ! ಲಿಂಗಾ!" ಎಂದು ಕರೆದರು. ಕಾಡಿನಿಂದ "ಲಿಂಗಾ! ಲಿಂಗಾ!" ಎಂದು ಮರು ದನಿಯಾಯಿತು. ಲಿಂಗ ಎಲ್ಲಿಯೂ ಕಾಣಲಿಲ್ಲ. ದೋಣಿಗೆ ಓಡಿದರು. ಅಲ್ಲಿಯು ಇರಲಿಲ್ಲ. ಘೋರವಾದ ಕಗ್ಗತ್ತಲನ್ನು ಹೊದೆದುಕೊಂಡು ಗಂಭೀರವಾಗಿಯೂ ವಿಶಾಲವಾಗಿಯೂ ಹರಿಯುವ ಕ್ರೂರ ನದಿಯನ್ನು ದಿಟ್ಟಿಸಿ ನೋಡಿದರು. ಅವರ ಎದೆ ನಡುಗಿತು. ಕಣ್ಣೀರು ಸುರಿಯಿತು." ಲಿಂಗಾ! ಲಿಂಗಾ!" ಎಂದು ರೋದಿಸಿದರು. ನಾಗನೂ ಬಿದ್ದು ಬಿದ್ದು ಅಳುತ್ತಿದ್ದನು. ತಿಮ್ಮು ಸೀತೆ ಇಬ್ಬರು ಅಳಲಾರಂಭಿಸಿದರು.

"ನಮ್ಮ ಮನೆಯ ಒಂದು ಬೆಳಕೇ ಹೋಯಿತು" ಎಂದು ಸುಬ್ಬಣ್ಣಗೌಡರು ಅಲ್ಲಿದ್ದವರೊಡನೆ ಹೇಳಿಕೊಂಡು ಗೋಳಿಟ್ಟರು. ಲಿಂಗನ ಆಕಸ್ಮಿಕವಾದ ಅನಿರೀಕ್ಷಿತ ಮರಣಕ್ಕಾಗಿ ಎಲ್ಲರೂ ಶೋಕಿಸಿದರು. ಗೌಡರು ನಾಗನನ್ನು ಬಹಳವಾಗಿ ಸಂತೈಸಿದರೂ ಅವನು ಅಳುವುದನ್ನೂ "ಅಪ್ಪಾ! ಅಪ್ಪಾ!" ಎಂದು ಕರೆಯುವುದನ್ನು ಬಿಡಲೇ ಇಲ್ಲ. ಲಿಂಗ ಹೊಳೆಯ ಪಾಲಾದುದು ಹೇಗೆ ಎಂಬುದು ಮಾತ್ರ ಒಬ್ಬರಿಗೂ ಬಗೆಹರಿಯಲಿಲ್ಲ."[೧]

ಮಲೆನಾಡಿನ ಪರಿಸರದಲ್ಲಿ, ನಿಸರ್ಗದ ದಟ್ಟ ರೌದ್ರತೆಯಲ್ಲಿ ಅರಳುವ ಈ ಕಥೆ ಕಲಾತ್ಮಕತೆಗೆ ಹೆಸರುವಾಸಿಯಾಗಿದೆ. ಕನ್ನಡದ ಪ್ರಮುಖ ವಿಮರ್ಶಕರಾದ ಕೀರ್ತಿನಾಥ ಕುರ್ತುಕೋಟಿ, ಜಿ.ಎಚ್. ನಾಯಕರು ಮೊದಲಾಗಿ ಅನೇಕ ವಿಮರ್ಶಕರು ಈ ಕಥೆಯ ಕಥನ ಕಲೆಯ ಗುಣವನ್ನು ಮೆಚ್ಚಿ ಬರೆದಿದ್ದಾರೆ.

'ಸಂನ್ಯಾಸಿ' ಕಥೆಯ ನಾಯಕ ಒಬ್ಬ ಚಿರಯುವಕ. ಅವನಿಗೆ ಮದುವೆ ಬಗ್ಗೆ ಅಸಹನೆ. ಬದುಕಿನ ಅರ್ಥಪೂರ್ಣತೆಗೆ ವಿರಕ್ತ ಮಾರ್ಗವೇ ಪರಮ ಧ್ಯೇಯ ಎಂದು ನಂಬಿದವನು. ಆದರೆ ಅವನ ತಂದೆ ತಾಯಿಗಳು ಅವನ ಗುರಿಗೆ ಅಡ್ಡವಾಗಿ ನಿಲ್ಲುತ್ತಾರೆ. ಅವರು ಬಲತ್ಕಾರವಾಗಿ ಮಗನಿಗೆ ಇಂದಿರೆ ಎಂಬ ಹುಡುಗಿಯನ್ನು ಮದುವೆ ಮಾಡುತ್ತಾನೆ ಊರೂರು ಅಲೆದು ಗುರುವನ್ನು ಹುಡುಕಿ ಕೊಳ್ಳುವನು. ಸ್ವಾಮಿ ಪ್ರೇಮಾನಂದರ ಶಿಷ್ಯನಾಗಿ ಸಂನ್ಯಾಸಿತನವನ್ನು ಸ್ವೀಕರಿಸಿ 'ಚೈತನ್ಯ' ಎಂಬ ಹೆಸರಿನಿಂದ ಸಾಧುವಾಗುವನು. ಇತ್ತ ಹೆಂಡತಿ ಇಂದಿರೆಯ ಬಾಳು ಬೆಂಗಾಡಾಗುವುದು ಆಕೆಯ ಅತ್ತೆ ಮಾವ ಇಬ್ಬರು ತೀರಿಕೊಳ್ಳುವರು ಬೇರೆ ದಾರಿ ಕಾಣದೆ ಕೊನೆಗೆ ಇಂದಿರೆಯು ಮನೆ ಬಿಟ್ಟು ಬಂದು ಸಂನ್ಯಾಸಿ ವೇಷಧರಿಸಿ ಅದೇ ಪ್ರೇಮಾನಂದರ ಶಿಷ್ಯಳಾಗಿ ಹೆಂಗಸಿನ ವೇಷವನ್ನು ಮರೆಸಿ 'ಮುಕುಂದ' ಎಂಬ ಗಂಡಸಿನ ಹೆಸರನ್ನು ಧರಿಸುವಳು.

ಈ ಮುಕುಂದ ಮತ್ತು ಚೈತನ್ಯ ಇಬ್ಬರು ಪ್ರೇಮಾನಂದರ ಬಳಿ ಜೀವದ ಗೆಳೆಯರಾಗುವರು. ಚೈತನ್ಯನಿಗೆ ಮುಕುಂದನಲ್ಲಿ ಅನಿರ್ವಚನೀಯ ಪ್ರೇಮ ಉಂಟಾಗುತ್ತದೆ. ಮುಕುಂದನಿಗೂ ಚೈತನ್ಯನಲ್ಲಿ ಅಷ್ಟೇ ಅಪೂರ್ವ ಗೌರವ ಆದರ. ಈ ಆಪ್ತ ಸಂಬಂಧಗಳು ಬೆಳೆದು ಇಬ್ಬರಲ್ಲಿಯು ಸಲಿಗೆಯುಂಟಾಗಿ ಒಂದು ದಿನ ಅವರಿಬ್ಬರ ನಿಜ ಸ್ವರೂಪ ಬಯಲಾಗುವುದು. ಇಂದಿರೆಯು ಗುರುವಿನ ಮುಂದೆ ತನ್ನ ಪತಿಭಿಕ್ಷೆ ಬೇಡುವಳು. ಗುರು ಅದಕ್ಕೆ ಆಶೀರ್ವದಿಸುವನು. ಕೊನೆಗೆ ರಮೇಶನನ್ನು ಆಕೆ ಒಲಿಸಿ ತನ್ನವನನ್ನಾಗಿ ಮಾಡಿಕೊಳ್ಳುವಳು.

ಈ ಮೂರ್ನಾಲ್ಕು ಪಾತ್ರಗಳ ಮುಖಾಂತರ ಸಂಭಾಷಣೆಯ ಮೂಲಕವೇ ಬೆಳೆಯುವ ಈ ಕಥೆಯ ವಸ್ತು ಹಿಂದಿನ ಪ್ರಾಚೀನ ಕಥಾ ಪರಂಪರೆಯನ್ನು ನೆನಪಿಗೆ ತರುತ್ತದೆ. ಠಾಗೂರ್ ಕಥೆಗಳಲ್ಲಿ ಮತ್ತು ಷೇಕ್ಸ್‌ಪಿಯರ್ ನಾಟಕಗಳಲ್ಲಿ ಇಂಥ ಘಟನೆಗಳು ಸಾಮಾನ್ಯ. ಕುವೆಂಪು ಅವರು ಈ ಕಥೆಯಲ್ಲಿ ಸಂನ್ಯಾಸಿಯ ಸೋಗನ್ನು ಮುರಿದು ಬದುಕಿನ ಮಹತ್ವವನ್ನು ಎತ್ತಿ ಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ. ಮೂರು ಘಟ್ಟಗಳಲ್ಲಿ ಬೆಳೆಯುವ ಈ ಕಥೆಯ ಸಂವಿಧಾನ ನಾಟ್ಯ ಗುಣದಿಂದ ಕೂಡಿದೆ. ಬದುಕಿನ ಜವಾಬ್ದಾರಿಯಿಂದ ಸರಿದು ಸಂನ್ಯಾಸತ್ವ ಸ್ವೀಕರಿಸುವುದು ಪಾರಂಪರಿಕ ನಂಬಿಕೆ. ಈ ನಂಬಿಕೆಯನ್ನು ಈ ಕಥೆಯು ಪ್ರತ್ಯಕ್ಷವಾಗಿ ಪ್ರಶ್ನಿಸುವುದರ ಮೂಲಕ ಮತ್ತೆ ರಮೇಶ ಮತ್ತು ಇಂದಿರೆ ಬದುಕನ್ನು ಒಪ್ಪಿಕೊಳ್ಳುವುದತ್ತ ಕಥೆಗಾರರು ತುಡಿಯುವುದು ಕಥೆಯ ವಿಶೇಷವಾಗಿದೆ.

ವಸಾಹತುಶಾಹಿ ಸಂದರ್ಭದಲ್ಲಿ ಎದುರಾದ ಮತಾಂತರ ಪ್ರಕ್ರಿಯೆಯ ಪರಿಣಾಮದಿಂದ ವ್ಯಕ್ತಿ ವ್ಯಕ್ತಿಗಳ ನಡುವೆ ಉಂಟಾದ ವಿಘಟನೆಯ ಸ್ವರೂಪವನ್ನು 'ಕ್ರಿಸ್ತನಲ್ಲ, ಪಾದ್ರಿಯಮಗಳು' ಕಥೆ ನಿರೂಪಿಸುತ್ತದೆ. ಕಥೆಗಾರ ಚಂದ್ರೂ ಮತ್ತು ಯೋಗಿನ್ ಸಹಪಾಠಿಗಳು. ಮಹಾರಾಜ ಕಾಲೇಜಿನಲ್ಲಿ ಒಟ್ಟಿಗೆ ಓದುತ್ತಿರುವಾಗ ವಿದ್ಯಾರ್ಥಿ ದೆಸೆಯಿಂದಲೇ ಯೋಗಿನ್ ತನ್ನ ನಡೆ ನುಡಿ ಬುದ್ಧಿವಂತಿಕೆಯಿಂದ ಅಧ್ಯಾಪಕರ ಮತ್ತು ಸಹಪಾಠಿಗಳ ಮೆಚ್ಚಿಗೆಗೆ ಪಾತ್ರನಾದವನು. ಅವನ ಶೀಲ, ಘನತೆ, ಪ್ರತಿಭೆ ಇವು ಎಲ್ಲರ ಗೌರವಕ್ಕೂ ಪಾತ್ರವಾಗಿದ್ದವು. ತಾನು ಬ್ರಹ್ಮಚಾರಿಯಾಗಿದ್ದು ದೇಶ ಸೇವೆಗೆ ತನ್ನ ಜನ್ಮವನ್ನು ಮುಡುಪಾಗಿಡುತ್ತೇನೆ ಎಂದು ಹೇಳಿಕೊಂಡವನು ಆತ.

ಈ ಇಬ್ಬರು ಗೆಳೆಯರು ವಿದ್ಯಾಭ್ಯಾಸ ಮುಗಿದ ಮೇಲೆ ಬೇರೆಯಾಗುತ್ತಾರೆ ಅನಂತರ ಎಂಟು ವರ್ಷಗಳ ನಂತರ ಆ ಇಬ್ಬರೂ ಸ್ನೇಹಿತರು ಆಗುಂಬೆಯಲ್ಲಿ ಸಂಧಿಸುತ್ತಾರೆ. ಮಲೆನಾಡಿನ ಸೌಂದರ್ಯವನ್ನು ಆಸ್ವಾಧಿಸಲು ಚಂದೂ ಮೈಸೂರಿನಿಂದ ಆಗುಂಬೆಗೆ ಬಂದಿರುತ್ತಾನೆ. ಆಗ ಆಗುಂಬೆಯಲ್ಲಿ ಸಂಧಿಸುವ ವ್ಯಕ್ತಿ ತನ್ನ ಸ್ನೇಹಿತ ಯೋಗಿನ್ ಎಂಬ ಅರಿವು ಅವನಿಗಾಗುತ್ತದೆ. ನಂತರ ಚಂದೂಗೆ ಊರಿಗೆ ಮರಳುತ್ತಾನೆ. ಯೋಗಿನ್ ತನ್ನ ಆತ್ಮ ವೃತ್ತಾಂತವನ್ನು ಪತ್ರದಲ್ಲಿ ಬರೆದುಕೊಂಡು ಚಂದೂ ಅಂಚೆಯಲ್ಲಿ ಕಳುಹಿಸುತ್ತಾನೆ. ತಾನೂ ಕೆಲಸಕ್ಕೂ ಸೇರದೆ, ದೇಶ ಸೇವೆಗೂ ತೊಡಗಿಸಿಕೊಳ್ಳದೆ, ಕ್ರೈಸ್ತಮತ ಪ್ರಚಾರಕ್ಕೆ ಇಳಿದದ್ದು, ಆ ಸಂದರ್ಭದಲ್ಲಿ ಪಾದ್ರಿಯ ಮಗಳಿಗೆ ಮೋಹಗೊಂಡಿದ್ದು, ಅದರಿಂದ ತಾನು ಕ್ರೈಸ್ತ ಮತಾವಲಂಬಿಯಾದದ್ದು, ತನ್ನಲ್ಲಿದ್ದ ಪ್ರತಿಭೆ, ಸಂಪತ್ತು, ಯೌವ್ವನವೆಲ್ಲವೂ ಕರಗಿದ ಮೇಲೆ ಆ ಕ್ರೈಸ್ತ ಪಾದ್ರಿಯಮಗಳು ಬೇರೊಬ್ಬನ ಜೊತೆ ಪಲಾಯನ ಮಾಡಿದ್ದು ಇವೆಲ್ಲವೂ ತನ್ನನ್ನು ಅವನತಿಯ ಕಡೆಗೆ ನೂಕಿತ್ತೆಂದು ಮುಂತಾದ ವಿವರಗಳನ್ನು ಆತ ಬರೆದು ಕಳುಹಿಸಿರುವ ಪತ್ರದಲ್ಲಿ ಚಂದೂ ಓದಿ ಗೆಳೆಯನ ಆತ್ಮವಿನಾಶದ ನೆನಪಿನಿಂದ ದುಗುಡಗೊಳ್ಳುತ್ತಾನೆ. ಅದರಿಂದ ಮನಸ್ಸು ಭಾರವಾಗುತ್ತದೆ. ಯೋಗಿನ್‌ನ ಬದುಕನ್ನು ಕ್ರೈಸ್ತ ಮತವು ದುರಂತಕ್ಕೆ ಕೊಂಡೊಯ್ಯುತ್ತದೆ. ಈ ಚಿತ್ರ ಕುವೆಂಪುರವರ ಶ್ರೇಷ್ಠ ಕಾದಂಬರಿ 'ಮಲೆಗಳಲ್ಲಿ ಮದುಮಗಳ'ಲ್ಲಿ ಬರುವ ದೇವಯ್ಯನ ಚಿತ್ರವನ್ನು ನೆನಪಿಗೆ ತರುತ್ತದೆ. ತನ್ನ ಗೆಳೆಯನಿಗಾದ ದುರಂತವನ್ನು ಕೇಳಿ ಚಂದೂ ಮರುಗುತ್ತಾನೆ. ಅವನ ದು:ಸ್ಥಿತಿಗೆ ಕಾರಣ 'ಕ್ರಿಸ್ತನಲ್ಲ, ಪಾದ್ರಿಯಮಗಳು' ಎಂದು ಸ್ಪಷ್ಟವಾದಾಗ ಕ್ರೈಸ್ತಮತ ಪ್ರಚಾರ ಆ ಸಂದರ್ಭದಲ್ಲಿ ಹೇಗೆ ಪ್ರಭಾವ ಬೀರಿತ್ತೆನ್ನುವುದು ಈ ಕಥೆಯಿಂದ ವ್ಯಕ್ತವಾಗುತ್ತದೆ. ಆಗಿನ ಕಾಲದಲ್ಲಿ ಕ್ರೈಸ್ತ ಪಾದ್ರಿಗಳು ಮತಾಂತರಕ್ಕಾಗಿ ಎಂಥೆಂಥ ಕುಟಿಲ ನೀತಿಗಳನ್ನು ಅನುಸರಿಸುತ್ತಿದ್ದರೆಂಬುದನ್ನು ಈ ಕಥೆ ನಿರೂಪಿಸುತ್ತದೆ. ಕುವೆಂಪು ಅವರ ಕ್ರೈಸ್ತ ಮತಾಂತರದ ಪ್ರತಿಕ್ರಿಯೆಯ ಬಗೆಗೆ ಕಥೆಗಾರರಿಗೆ ಇರುವ ಪ್ರತಿರೋಧ ಈ ಕಥೆಯಲ್ಲಿ ತೀವ್ರವಾಗಿ ಪ್ರಕಟವಾಗಿರುವುದನ್ನು ಕಾಣಬಹುದು.

ಕುವೆಂಪು ಅವರು ಹಾಸ್ಯ ಮತ್ತು ವಿನೋದವನ್ನು ತಮ್ಮ ಕಥನ ಸಾಹಿತ್ಯದಲ್ಲಿ ಸಹಜವಾಗಿ ಚಿತ್ರಿಸಿದ್ದಾರೆ. ಇದಕ್ಕೆ 'ಈಶ್ವರನು ನಕ್ಕಿರಬೇಕು' ಮತ್ತು 'ಹೋಳಿಗೆ ಪ್ರತಿಜ್ಞೆ' ಕಥೆಗಳು ಒಂದು ಉತ್ತಮ ಉದಾಹರಣೆ. ನಾಗರಾಜ ಮತ್ತು ಲಲಿತೆ ಇಬ್ಬರು ವಯಸ್ಸಾದ ಅಂಗವಿಕಲರು. ಮದುವೆಯಾಗಲು ಅವರಿಬ್ಬರಿಗೂ ಅಂಗವಿಕಲತೆಗಳು ಅಡ್ಡಬರುತ್ತಿದ್ದವು. ಒಂದು ದಿನ ನಾಗರಾಜ 'ಹಿಂದೂ' ಪತ್ರಿಕೆಯಲ್ಲಿ 'ಸತ್ಕುಲ ಪ್ರಸೂತೆಯಾದ ಒಬ್ಬ ಹನ್ನೆರಡು ವರುಷದ ಬ್ರಾಹ್ಮಣ ಕನ್ಯೆಗೆ ತಿಂಗಳಿಗೆ ೫೦ ರೂಪಾಯಿಗೆ ಕಡಿಮೆಯಿಲ್ಲದ ವರ ಬೇಕಾಗಿದೆ' ಎಂದು ಬರೆದಿತ್ತು. ಇದನ್ನು ಓದಿದ ನಾಗರಾಜ ಅವರಿಗೆ ತನ್ನ ಬಾವಚಿತ್ರದ ಮುಖಾಂತರ ಪತ್ರ ವ್ಯವಹಾರ ಮಾಡಿ ಮದುವೆಯಾಗುತ್ತಾನೆ. ಒಂದು ದಿನ ವಸಂತ ಮಾಸದ ಬೆಳದಿಂಗಳ ರಾತ್ರಿಯಲ್ಲಿ ಮಲಗುವ ಕೋಣೆಯಲ್ಲಿ ಅವರಿಬ್ಬರ ಅಂಗವಿಕಲತೆ ಮತ್ತು ಒಬ್ಬರಿಗೊಬ್ಬರು ಮಾಡಿಕೊಂಡ ಮೋಸ ಅರಿವಾಗುವುದು ನಿಜ ಸ್ಥಿತಿಯನ್ನು ತಿಳಿದು ಪರಿಸ್ಪರ ಹೊಂದಾಗುವರು ಕೊನೆಗೆ ನಾಗರಾಜ ನಕ್ಕನೂ, ಲಲಿತಮ್ಮನೂ ನಕ್ಕಳು. ಚಂದ್ರ ತಾಳೆಗಳು ನಕ್ಕವು. ಅವರ ಈ ಸ್ಥಿತಿಯನ್ನು ನೋಡಿ ಈಶ್ವರನು ನಕ್ಕಿರಬೇಕು ಎಂದು ಕಥೆಗಾರರು ಹೇಳುವುದರ ಮುಖಾಂತರ ತಮ್ಮ ಹಾಸ್ಯ ಪೂರ್ಣವಾದ ಶೈಲಿಯಲ್ಲಿ ಅವರ ಬದುಕನ್ನು ಚಿತ್ರಿಸುತ್ತಾರೆ.

ಹೀಗೆಯೇ ನಡೆದ ಘಟನೆಯೊಂದರ ನಿರೂಪಣೆಯನ್ನು 'ಹೋಳಿಗೆ ಪ್ರತಿಜ್ಞೆ' ಕಥೆಯಲ್ಲಿ ಕಾಣಬಹುದು. ಹೋಳಿಗೆ ತಿನ್ನುವುದಿಲ್ಲವೆಂದು ಪ್ರತಿಜ್ಞೆ ಮಾಡಿದ ಇಬ್ಬರು ಗೆಳೆಯರು ಬಾಲ್ಯದಲ್ಲಿ ವಿದ್ಯಾರ್ಥಿಗಳಾಗಿದ್ದಾಗ ಹೋಳಿಗೆ ದೆಸೆಯಿಂದ ನಡೆದ ಆಕಸ್ಮಿಕ ಘಟನೆಗಳಿಂದ, ಗುಂಡಪ್ಪ ಮೇಷ್ಟರು ಮಾಡಿದ ಫರಂಗಿಮಣಿ ಅಥವಾ ಕುರ್ಚಿ ಹಾಗೂ ದ್ವಾದಶಪೂಜೆ (ಹನ್ನೆರಡು ಏಟು ಬೀಳುವುದು) ಯಂತಹ ಶಿಕ್ಷೆ ಅನುಭವಿಸಿ, ಇನ್ನು ಮೇಲೆ ಹೋಳಿಗೆಯನ್ನು ತಿನ್ನುವುದೇ ಇಲ್ಲವೆಂದು ಪ್ರತಿಜ್ಞೆಯನ್ನು ಮಾಡಿದ ಇಬ್ಬರು ಗೆಳೆಯರು ಕೊನೆಯವರೆಗೂ ನಡೆದುಕೊಳ್ಳುವುದರಲ್ಲಿ ಅವರ ಧೃಡ ಮನೋವೃತ್ತಿ ವ್ಯಕ್ತವಾಗುತ್ತದೆ. ಬಾಲ್ಯ ಸಹಜವಾದ ತಿಂಡಿ ಮೋಹ ಮತ್ತು ತುಂಟತನಗಳು ಹಾಸ್ಯ ಗರ್ಭಿತ ಶೈಲಿಯಲ್ಲಿ ಸೊಗಸಾಗಿ ವ್ಯಕ್ತವಾಗಿದೆ. ಈ ಎರಡು ಕಥೆಗಳು ಒಂದು ರೀತಿಯಲ್ಲಿ ಪ್ರಬಂಧದ ಮಾದರಿಯಲ್ಲಿವೆ.

ಅತಿ ಶ್ರೀಮಂತಿಕೆಯಿಂದ ಮೆರೆದ ನವಾಬನೊಬ್ಬ ಕಾಲಗತಿಯಲ್ಲಿ ಭಿಕ್ಷುಕನಾಗುವುದು ಮತ್ತೆ ಕಾಲಚಕ್ರ ಉರುಳಿದಾಗ ಲಕ್ಷಾಧಿಪತಿಯಾಗುವುದರ ವಸ್ತುವಾಗಿ ಒಳಗೊಂಡಿರುವುದನ್ನು 'ಅರಾಣೆ ಮೂರುಕಾಸು' ಕಥೆಯಲ್ಲಿ ಕಾಣಬಹುದು. ಈ ಕಥೆಯ ವಸ್ತು ಐತಿಹಾಸಿಕವಾಗಿ ಸಿಪಾಯಿದಂಗೆಯ ಕಾಲಕ್ಕೆ ಸೇರಿದ್ದು. ಹೈದರಾಬಾದ್ ಪ್ರಾಂತ್ಯದಲ್ಲಿ ಈ ಕಥೆ ಘಟಿಸುತ್ತದೆ. ಭೋಗ ವೈಭವಗಳಲ್ಲಿ ಬಾಳುತ್ತಿದ್ದ ನವಾಬ ಅನಿರೀಕ್ಷಿತವಾಗಿ ದುಃಸ್ಥಿತಿಗೆ ಇಳಿದಾಗ ತಾಳ್ಮೆಯಿಂದ ಪೂರ್ವ ವೈಭವವನ್ನು ಪಡೆಯುವ, ಆ ತಾಳ್ಮೆಯಿಂದ, ಸ್ಥಿರ ಚಿತ್ತದಿಂದ ಎದುರಿಸಿ ಹೋರಾಡಿದಾಗ ಬದುಕಿಗೆ ಬೆಲೆ, ನೆಲೆ ಎಂಬ ತತ್ವ ಈ ಕಥೆಯಲ್ಲಿ ಧ್ವನಿತವಾಗಿದೆ. ಮನುಷ್ಯನಿಗೆ ಜೀವನದಲ್ಲಿ ಹಣದ ಪ್ರಾಮುಖ್ಯತೆ ಎಷ್ಟು ನಿರ್ಣಾಯಕ ಎಂಬುದು ಇಲ್ಲಿ ನಿರೂಪಿತವಾಗಿದೆ. ಈ ಕಥೆಯ ಕೇಂದ್ರ ಪಾತ್ರವಾದ ಮಾಧವರಾಯ ಮತ್ತು ನವಾಬರ ನಡುವಿನ ಭಾವ ಸಂಬಂಧಗಳನ್ನು, ನಂಬಿಕೆಗಳನ್ನು ಶೋಧಿಸುತ್ತದೆ.

'ಮಾಯದ ಮನೆ' ಮತ್ತು 'ದೆವ್ವದ ಕಾಟ' ಕಥೆಗಳಲ್ಲಿ ಕಂಡುಬರುವ ಕಲ್ಪನೆಯು ಕುತೂಹಲಕಾರಿಯಾಗಿದೆ. ಧನಪಿಶಾಚಿ ವೈದ್ಯನೊಬ್ಬನು ಹಣದಾಸೆಯಿಂದ ಭೂತದಮನೆ ಹೊಕ್ಕಿ ತನ್ನ ಪಾಪಕ್ಕೆ ತಾನೇ ಪ್ರಾಯಶ್ಚಿತ್ತವನ್ನು ಅನುಭವಿಸುವ ಚಿತ್ರ ಮಾಯದ ಮನೆ' ಕಥೆಯಲ್ಲಿ ಭಯಾನಕವಾಗಿ ಮೂಡಿಬಂದಿದೆ. ಅಮಾವಾಸ್ಯೆಯ ಕಗ್ಗತ್ತಲು, ಮನೆಯ ಶ್ಮಸಾನ ಭೀಕರ ಮೌನ ಇವೆಲ್ಲವು ಆ ವ್ಯಕ್ತಿಯ ಸ್ವಾರ್ಥ ಲಾಲಸೆಯನ್ನು ಕರಿಗಿಸುತ್ತವೆ. ಜನೋಪಕಾರವನ್ನು ಮರೆತು ಸ್ವಾರ್ಥ ಶೃಂಗದಲ್ಲಿ ಮುಳುಗಿದ ವ್ಯಕ್ತಿಗೆ ಕತ್ತಲೆಯ ಸಂದರ್ಭದಲ್ಲಿ ಮನಃಪರಿವರ್ತನೆಯಾಗುವುದು ಅದ್ಭುತ ಸಂದರ್ಭವಾಗಿದೆ. ಅತೀವ ಆಸೆಯಿಂದಾಗಿ ಮಾಡಬಾರದ ಸಾಹಸಕ್ಕೆ ಕೈಯಾಕಿ ಹೇಗೆ ತನ್ನ ವ್ಯಕ್ತಿತ್ವವನ್ನು ನಾಶಮಾಡಿಕೊಳ್ಳುತ್ತಾನೆ ಎಂಬುದಕ್ಕೆ ಈ ಕಥೆ ಒಂದು ಸಾಂಕೇತವಾಗಿದೆ. ಕುವೆಂಪು ಅವರ ಈ ಕತೆಯಲ್ಲಿ ಬಂಗಾಳದ ವಾತಾವರಣ ಎದ್ದು ಕಾಣುತ್ತದೆ. ಮುಖ್ಯವಾಗಿ ಇದು ಆವರಣ ಪ್ರಧಾನವಾದ ಕಥೆಯಾಗಿದೆ. ಮುತ್ತಣ್ಣನಂಥ ಆಳು ಭೂತ ಪಿಶಾಚಿಗಳ ಕಾಟವನ್ನು ಕೃತ್ರಿಮವಾಗಿ ಸೃಷ್ಟಿಸಿ ಅನ್ನ ಹಾಕುವ ಧಣಿಗೆ, ನಂಬಿದವರಿಗೆ ದ್ರೋಹ ಬಗೆಯುವ ಕುತಂತ್ರ 'ದೆವ್ವದ ಕಾಟ' ಕಥೆಯಲ್ಲಿ ಚಿತ್ರಿತವಾಗಿದೆ. ಕುವೆಂಪು ಅವರು ಹಳ್ಳಿಗಳ ಮುಗ್ಧ ಜನ, ಭೂತ - ಪ್ರೇತ ಕಾಟದಿಂದ ಮುಕ್ತವಾಗಲು ಅನುಸರಿಸುವ ಮಾರ್ಗಗಳನ್ನು ರೋಮಾಂಚನಕಾರಿಯಾದ ಉತ್ತಮ ಸನ್ನಿವೇಶಗಳನ್ನು ಈ ಕಥೆಯಲ್ಲಿ ಚಿತ್ರಿಸಿದ್ದಾರೆ. ಮಲೆನಾಡಿನಲ್ಲಿ ಭೂತದ ಬಗೆಗಿರುವ ಅಗಾಧವಾದ ನಂಬಿಕೆಯನ್ನು ಈ ಕಥೆ ಪೋಷಿಸುತ್ತದೆ. ಇಂಥ ಮೂಢನಂಬಿಕೆಗಳನ್ನು ಪೋಷಿಸಿ ನಿಷ್ಕಪಟ ಮುಗ್ಧ ಜನರ ಮನಸ್ಸನ್ನು ತಮ್ಮ ಸ್ವಾರ್ಥ ಸಾಧನೆಗಾಗಿ

ಉಪಯೋಗಿಸಿಕೊಳ್ಳುವ ಜೋಯಿಸರಂತವರ ಬೂಟಾಟಿಕೆ ಹಾಗೂ ಮೋಸಗಳು ಇಲ್ಲಿ ಅನಾವರಣಗೊಂಡಿವೆ. ತನ್ನ ಸ್ವಾತಂತ್ರಕ್ಕೆ ದಕ್ಕೆ ಬರುತ್ತದೆ ಎಂಬ ಕಾರಣದಿಂದ ಮುತ್ತಣ್ಣ ತನ್ನ ಧಣಿಗೆ ಕೊಡುವ 'ದೆವ್ವದ ಕಾಟದ' ಸನ್ನಿವೇಶವೊಂದನ್ನು ಕಥೆಗಾರರು ತಮ್ಮ ಕಥನ ಕಲಾ ಸೌಂದರ್ಯದ ಶ್ರೇಷ್ಠತೆಗೆ ಸಾಕ್ಷಿ ಎಂಬಂತೆ ವರ್ಣಿಸಿದ್ದಾರೆ. ಈ ಕಥೆಯಲ್ಲೂ ಕೂಡ ಮಾಯದ ಮನೆಯಲ್ಲಿ ಬರುವ ಕತ್ತಲಿನ ವರ್ಣನೆಯೂ ಒಂದು ಪಾತ್ರವೆಂಬಂತೆ ವರ್ಣಿತವಾಗಿ ಆವರಣಕ್ಕೆ ಪುಷ್ಟಿಕೊಟ್ಟಿದೆ.

ಮನುಷ್ಯ ಮತ್ತು ಪ್ರಾಣಿಯ ಆಪ್ತ ಸಂಬಂಧವನ್ನು ಕುವೆಂಪು ಅವರು 'ಶ್ರೀ ಮನ್ಮೂಕವಾಗಿತ್ತು' ಕಥೆಯಲ್ಲಿ ಹಿಡಿಯಲು ಯತ್ನಿಸುತ್ತಾರೆ. ಹಳೇಪೈಕದ ರಂಗನ ಸಂಸಾರ ಒಂದು ಸಾಮಾನ್ಯ ಕುಟುಂಬ. ಹೊರಗೆ ಮೇಯಲು ಹೋದ ಎಮ್ಮೆ ರಾತ್ರಿ ಬಾರದಿರಲು ಆತಂಕ ಪಡುತ್ತಾನೆ. ಎಮ್ಮೆಕರು ಹಾಲಿಲ್ಲದೆ ಹಸಿವಿನ ಯಾತನೆಯಲ್ಲಿ ನಿಂತಿರುವ ಸ್ಥಿತಿಯನ್ನು ನೋಡಿ, ಮನೆಗೆ ಹಿಂತಿರುಗಿ ಬಾರದಿರುವ ಎಮ್ಮೆಯನ್ನು ಹುಡುಕುತ್ತಾ ರಂಗ ಹೊರಡುತ್ತಾನೆ. ಮಲೆನಾಡಿನ ದಟ್ಟ ಅರಣ್ಯದಲ್ಲಿ ತನ್ನ ಎಮ್ಮೆಯನ್ನು ಹುಲಿ ತಿಂದಿರಬೇಕೆಂದು ಊಹಿಸುತ್ತಾನೆ. ಕೊನೆಗೆ ಆತ ಅದನ್ನು ಹುಡುಕುತ್ತಾ ಕತ್ತಲೆ ಮಳೆ ಗಾಳಿ ಯಾವುದನ್ನು ಲೆಕ್ಕಿಸದೆ ಕಾಡು ಮೇಡುಗಳಲ್ಲಿ ಹುಡುಕುತ್ತಾನೆ. ರಾತ್ರಿಯೆಲ್ಲ ಚೌಕೀಮನೆ ಮುಂತಾದ ಸ್ಥಳಗಳಲ್ಲಿ ಹುಡುಕಿ ಬೆಳಗಾಗುವೊತ್ತಿಗೆ ಕೀರನಕೇರಿಯನ್ನು ಹುಡುಕಿ ಎಲ್ಲೂ ಕಾಣದೆ ಶಂಕರ ಶಾಸ್ತ್ರಿಯಲ್ಲಿ ಶಾಸ್ತ್ರ ಕೇಳುತ್ತಾನೆ. ಕೊನೆಗೆ ನಾಲೂರು ನಾಗಣ್ಣ ಗೌಡರ ಜಮೀನಿಗೆ ಅದು ಹೋಗಿದ್ದರಿಂದ ಎಮ್ಮೆಯನ್ನು ಅವರು ಹಿಡಿದು ತಮ್ಮ ಕೊಟ್ಟಿಗೆಯಲ್ಲಿ ಕಟ್ಟಿದ್ದಾರೆಂದು ಗೌಡರ ಮನೆಯ ಆಳು ಸುಬ್ಬನಿಂದ ವಿಷಯ ತಿಳಿದು ರಂಗ ಗೌಡರನ್ನು ನೋಡಲು ಹೋಗುತ್ತಾನೆ. ಆದರೆ ಗೌಡರ ಮನೆಯಲ್ಲಿ ಮಗ ವಾಸು ಕಾಯಿಲೆಯಲ್ಲಿ ಮಲಗಿದ್ದರಿಂದ ಪ್ರಕ್ಷುಬ್ಧ ವಾತಾವರಣವಿರುತ್ತದೆ. ಆತ ತನ್ನ ಸತ್ತ ತಾಯಿಯನ್ನು ನೆನೆಯುತ್ತಾ ಪರಿತಪಿಸುತ್ತಿರುತ್ತಾನೆ. ಆಗ ರಂಗನಿಗೆ ತನ್ನ ಕೊಟ್ಟಿಗೆಯಲ್ಲಿ ತಾಯಿಯಿಲ್ಲದೆ ಅನಾಥವಾಗಿರುವ ಕರುವಿನ ಚಿತ್ರ ನೆನಪಾಗಿ, ತನ್ನ ಎಳೆಗರುವಿಗಾಗಿ ಮರುಗಿದ ಹಾಗೆಯೇ ಆತ ನಾಗಣ್ಣಗೌಡರ ಮಗ ವಾಸುವಿಗೂ ಮರುಗುತ್ತಾನೆ. ಆಗ ರಂಗ ಗೌಡರ ಹಿರಿಮಗನನ್ನು ಕೇಳುತ್ತಾನೆ. ಆತ ಒಪ್ಪುವುದಿಲ್ಲ. ಕೊನೆಗೆ ಗೌಡರು ಎಮ್ಮೆ ಕರುವಿನ ಸ್ಥಿತಿಯನ್ನು ಕೇಳಿ ಕಾಯಿಲೆ ಬಿದ್ದು ಮಲಗಿರುವ ಮಗನ ಸ್ಥಿತಿಗೆ ಹೋಲಿಸುತ್ತಾ ಕಂಬನಿಗರೆಯುತ್ತಾರೆ. ಆಗ ವಾಸು ಈ ಸಂಗತಿಯನ್ನು ಕೇಳಿಸಿಕೊಂಡು ಇದ್ದಕ್ಕಿದ್ದ ಹಾಗೆ "ಪಾಪ, ಎಳೆಗರು! ಎಮ್ಮೆ ಹೊಡಕೊಂಡು ಹೋಗೋ ನೀನು, ರಂಗಾ" ಎಂದು ಹೇಳಿದ. ಆಗ ರಂಗ ವಾಸುವನ್ನು ಕುರಿತು "ದೇವರೇ ಇವರನ್ನು ಉಳಿಸು!" ಎಂದು ಪ್ರಾರ್ಥಿಸಿ ಎಮ್ಮೆಯೊಡನೆ ತನ್ನ ಊರಿಗೆ ಹಿಂತಿರುಗುತ್ತಾನೆ. ಅದೇ ವೇಳೆಗೆ ಜೋಯಿಸರು ಮಂತ್ರಿಸಿಕೊಟ್ಟ ವಿಭೂತಿಯನ್ನು ನಾಗಣ್ಣಗೌಡರು ವಾಸುವಿನ ಹಣೆಗೆ ಹಚ್ಚುತ್ತಾರೆ. ರಂಗ ಎಮ್ಮೆಯೊಡನೆ ತನ್ನ ಕೊಟ್ಟಿಗೆಗೆ ಬಂದಾಗ ಕರು ಕೊಟ್ಟಿಗೆಯ ಮೂಲೆಯಲ್ಲಿ ಬಿದ್ದಿರುತ್ತದೆ. ಅದನ್ನು ಎತ್ತಿಕೊಂಡು ಎಮ್ಮೆಯ ಕೆಚ್ಚಲ ಉಣಿಸುತ್ತಾನೆ. ಇದು ಸ್ಥೂಲವಾದ ಕಥೆ. ರಂಗನ ನಿಷ್ಕಲ್ಮಷವಾದ ಹೃದಯ ಕಥೆಯ ಶ್ರೀಮಂತಿಕೆಯನ್ನು ಇಮ್ಮಡಿಸಿದೆ, ರಂಗನ ಹರಕೆ ಸಾಮಾನ್ಯವೇನಲ್ಲ, ಸಾಮಾನ್ಯತೆಯಲ್ಲಿಯೇ ಭವ್ಯತೆಯನ್ನು ಕಾಣುವುದು ಈ ಕಥೆಯ ವೈಶಿಷ್ಟ್ಯ. ಮಲೆನಾಡಿನ ಪರಿಸರದಲ್ಲಿ ಘಟಿಸುವ ಈ ಕಥೆಯು ಮೂಕ ಜೀವಿಗಳ ಹೃದಯ ಭಾವಗಳಿಗೆ ಅನನ್ಯ ಅಭಿವ್ಯಕ್ತಿ. ಸರಳವಾಗಿ ನಿರೂಪಿತವಾಗಿರುವ ಈ ಕಥೆಯು ಕರುಣೆ ಹಾಗು ಮನೋಜ್ಞತೆಯನ್ನು ಕಲಾತ್ಮಕವಾಗಿ ಸೃಷ್ಟಿಸುತ್ತದೆ.

ಕುವೆಂಪು ಅವರು ಮನೋವೈಜ್ಞಾನಿಕ ಭಾವಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸಬಲ್ಲರೆಂಬುದಕ್ಕೆ 'ನನ್ನ ದೇವರು' ಕಥೆ ಸಾಕ್ಷಿಯಾಗಿದೆ. ಈ ಕಥೆಯ ನಿರೂಪಣೆ ಸ್ವಗತದಲ್ಲಿ ಇದೆ. ಮದುವೆಯಾದ ಹೊಸದರಲ್ಲಿಯೇ ಗಂಡನ ಅನಿರೀಕ್ಷಿತ ಮರಣ, ಚಿಕ್ಕವಯಸ್ಸಿನಲ್ಲಿಯೇ ವಿಧವೆಯ ಪಟ್ಟ. ಅವಳ ಮೇಲೆ ತನ್ನ ಬಾವನವರ ಉದಾರ ಮನಸ್ಸಿದೆ, ಬಾವನ ಗಹನವಾದ ತತ್ವವಿಚಾರಗಳು ಆಕೆಯನ್ನು ಆಕರ್ಷಿಸಿವೆ. ಆ ಆಕರ್ಷಣೆಯಿಂದ ಆಕೆ ತನ್ನ ಬಾವನನ್ನೇ ಗಂಡನನ್ನಾಗಿ ಕಾಣಲು ಯತ್ನಿಸುತ್ತಾಳೆ. ಕೊನೆಗೆ ನಿಜಸ್ಥಿತಿ ಅರಿವಾಗಿ ಬೆಚ್ಚುತ್ತಾಳೆ. ತನ್ನ ತಪ್ಪನ್ನು ಮಾನಸಿಕವಾಗಿ ಒಪ್ಪಿಕೊಳ್ಳುತ್ತಾಳೆ. ಅದರಿಂದ ಅವಳಲ್ಲಿದ್ದ ಅರಿವು ವಿಸ್ತಾರವಾಗುತ್ತದೆ. ಕೊನೆಗೆ ಆಕೆ ತನ್ನ ಬಾವನನ್ನೇ ದೇವರೆಂದು ಒಪ್ಪಿಕೊಳ್ಳುವ ಮಾನಸಿಕ ತೊಳಲಾಟಕ್ಕೆ ಒಳಗಾಗುತ್ತಾಳೆ. ಅವಳ ಮನಸ್ಸಿನಲ್ಲಿ ಕಾಮ ಮತ್ತು ನೈತಿಕತೆಯ ಸಂಘರ್ಷ ನಡೆಯುತ್ತದೆ. ಆತ್ಮ, ದೇವರು, ಕರ್ಮ ಮುಂತಾದ ಗಹನವಾದ ವಿಚಾರಗಳು ಅವಳ ತಿಳುವಳಿಕೆಗೆ ಮೀರಿದ ವಿಚಾರಗಳ ಚರ್ಚೆಯು ಅವಳ ಮನಸ್ಸಿನಲ್ಲಿ ನಡೆದು, ಕೊನೆಗೆ ಆಕೆ ತನ್ನ ಭಯಕೆಗಳನ್ನು ನಿಗ್ರಹಿಸಿಕೊಳ್ಳುತ್ತಾಳೆ. ತೀರಿಕೊಂಡ ತನ್ನ ಗಂಡನ ನೆನಪಿನಲ್ಲಿ ಆಕೆ 'ನನ್ನ ದೇವರೇ', ಸಹಸ್ರ ನಮಸ್ಕಾರ! ಎಂದು ಮನಸ್ಸಿನಲ್ಲಿಯೇ ಸಾಂತ್ವನಗೊಳಿಸಿಕೊಳ್ಳುತ್ತಾಳೆ.

ಮೇಲಿನ ಕಥೆಯ ಹಾಗೆಯೇ ಸ್ವಗತದಲ್ಲಿ ಸಾಗುವ 'ಆದರ್ಶ ಸಾಧನೆ'ಯ ಕಥಾ ನಾಯಕನ ಬ್ರಹ್ಮಚರ್ಯ ವ್ರತದ ವಿಫಲತೆಯನ್ನು ಚಿತ್ರಿಸಲಾಗಿದೆ. "ನಾನು ಮೊದಲು ಆದರ್ಶ ಸಂನ್ಯಾಸಿಯಾಗಬೇಕೆಂದಿದ್ದೆ, ಸಂನ್ಯಾಸತ್ವವೇ ಎಲ್ಲ ಆದರ್ಶಗಳಲ್ಲಿ ಉತ್ತಮವಾದುದೆಂದು ಭಾವಿಸಿದ್ದೆ." ಎಂಬ ಕಥೆಯ ವಾಕ್ಯಗಳಲ್ಲಿಯೇ ಈ ಕಥಾನಾಯಕನ ವಿಫಲತೆಯ ಧ್ವನಿ ಇದೆ. ಇವನಿಗೆ ಹಳ್ಳಿಗಳನ್ನು ಉದ್ಧಾರ ಮಾಡಬೇಕೆಂಬ 'ಗ್ರಾಮ ಪುನರುಜ್ಜೀವ ಸಂಜೀವಿನಿ' ಎಂಬ ಗ್ರಂಥವನ್ನು ಬರೆಯಬೇಕೆಂಬ ಅಭಿಲಾಷೆ. ಅಧ್ಯಯನಕ್ಕೆ ಹಳ್ಳಿಗಳೇ ಉತ್ತಮ ಎಂಬುದು ಅವನ ತಿಳುವಳಿಕೆ. ನಗರಗಳು ನೂರಾರು ಪ್ರಲೋಭನೆಗಳಿಗೆ ಕಾರಣಗಳೆಂದು ನಂಬಿದವನು. ಸಂನ್ಯಾಸಿ ಆಗಬೇಕೆಂದು ಎಂದುಕೊಂಡವನು ಕೊನೆಗೆ ಕುಟುಂಬದವರ ಒತ್ತಾಯಕ್ಕೆ ಹೆಣ್ಣು ನೋಡಲು ಹೋದವನು. ವಧು ರೋಹಿಣಿಯನ್ನು ಕಂಡ ಮೊದಲ ನೋಟದಲ್ಲಿಯೇ ಮನ್ಮಥನ ಬಾಣಕ್ಕೆ ಸಿಕ್ಕಿ, ಅಜೀವ ಬ್ರಹ್ಮಚರ್ಯ ಪ್ರಕೃತಿ ಸಮ್ಮತವಲ್ಲ ಎಂದು ತಿಳಿದು ಹಿಂದಿನ ಆದರ್ಶ ವಾದಗಳನ್ನು ಮರೆತು ಕೊನೆಗೆ ಮದುವೆಯಾಗುತ್ತಾನೆ. ಹೆಂಡತಿ ತೀರಿಕೊಂಡ ಬಳಿಕ ಆದರ್ಶ ಪತಿಯಾಗಿರುವೆನೆಂದು ಹೇಳಿ ಕೊನೆಗೆ ಮರು ಮದುವೆಯಾಗುತ್ತಾನೆ. ಆದರ್ಶ ಮತ್ತು ವಾಸ್ತವತೆಗಳ ನಡುವೆ ಇರುವ ದ್ವಂದ್ವವನ್ನು ಈ ಕಥೆಯು ಶೋಧಿಸುತ್ತದೆ. ಕಥಾನಾಯಕ ಬರಿ ಭಾವೋದ್ವೇಗದ ಜೀವಿ ಅವನ ವ್ಯಕ್ತಿತ್ವವನ್ನು ಕಥೆಗಾರರು ವಿಡಂಬನೆಗೆ ಗುರಿಮಾಡುತ್ತಾರೆ. ಬ್ರಹ್ಮಚರ್ಯ ಮತ್ತು ದಾಂಪತ್ಯದ ನಡುವಿನ ಜಿಜ್ಞಾಸೆಯನ್ನು ಕಥೆಗಾರರು ಬಿಡಿಸಲು ಯತ್ನಿಸಿರುವುದನ್ನು ಇಲ್ಲಿ ಕಾಣಬಹುದು.

ಇದೇ ರೀತಿ ಸ್ವಗತದಲ್ಲಿ ಸಾಗುವ ಮತ್ತೊಂದು ಕಥೆ 'ಔದಾರ್ಯ'. ಮಂಡ್ಯದಿಂದ ವರ್ಗವಾಗಿ ತೀರ್ಥಹಳ್ಳಿಗೆ ಹೋಗುವ ಅಮಲ್ದಾರನ ಬದುಕನ್ನು ಈ ಕಥೆ ಚಿತ್ರಿಸುತ್ತದೆ. ಆತ ಮೊದಲಬಾರಿ ಮಲೆನಾಡಿಗೆಗೆ ಹೋದಾಗ ತೀರ್ಥಹಳ್ಳಿಯ ರಾಮತೀರ್ಥದ ಸೌಂದರ್ಯ, ಶೃಂಗೇರಿಯ ಸ್ನಾನ ಘಟ್ಟ, ತುಂಗಾನದಿಯ ನಡುವೆ ಇರುವ ಕಲ್ಲು ಮಂಟಪ ಮುಂತಾದ ಪ್ರಾಕೃತಿಕ ಪರಿಸರವನ್ನು ಕಂಡು ಆತ ಮೋಹಗೊಳ್ಳುತ್ತಾನೆ. ಮಂಡ್ಯದ ಜನ ತನ್ನನ್ನು ಬೀಳ್ಕೊಡುವಾಗ ಮಲೆನಾಡಿನ ಮಲೇರಿಯಾ ರೋಗದ ಬಗ್ಗೆ ನರಕ ವರ್ಣನೆ ಮಾಡಿದ್ದನ್ನು, ಎಚ್ಚರಿಸಿದ್ದನ್ನು ಆತ ಈ

ನಿಸರ್ಗದ ಚೆಲುವಿನ ನಡುವೆ ಮರೆಯುತ್ತಾನೆ. ಪ್ರಕೃತಿಯ ನಡುವೆ ಆತ ಎತ್ತರದ ಜಾಗದಲ್ಲಿ ಕೂತು ಸೂರ್ಯೋದಯ, ಚಂದ್ರೋದಯ ದುಮುಕುವ ನೀರು, ಮಿಣುಕು ಹುಳುಗಳ ದೀಪ, ಗಿರಿಕಂದರಗಳು, ಆನೆಗಳಂಥ ಕಲ್ಲು ಬಂಡೆಗಳು ಇವುಗಳನ್ನೆಲ್ಲ ಕಂಡು ಆತ ಸಂತೋಷಪಡುತ್ತಾನೆ. ಒಂದು ದಿನ ನಿಸರ್ಗದ ನಡುವೆ ಕೂತು ಪ್ರಕೃತಿಯ ಆರಾಧನೆ ಮಾಡುತ್ತಿರುವಾಗ ವ್ಯಕ್ತಿಯೊಬ್ಬ ಎದುರಾಗಿ, ತಮಗೆ ನನ್ನ ಗುರುತು ಸಿಗಲಿಲ್ಲವೆ ಎಂದು ಪ್ರಶ್ನಿಸುತ್ತಾನೆ. ಆಗ ಆತ ಅವರನ್ನು ಡೇವಿಡ್ ಮಾಸ್ತರ್ ಎಂದು ಗುರುತಿಸುತ್ತಾನೆ. ಈ ಡೇವಿಡ್ ಮಾಸ್ತರು ತಾನು ಓದುತ್ತಿದ್ದಾಗ ತನ್ನ ಊರಿನಲ್ಲಿ ಮಾಸ್ತರಾಗಿದ್ದವರು. ಡೇವಿಡ್ ಮಾಸ್ತರು ಎಂದರೆ ಆ ಊರಿನ ಹುಡುಗರಿಗೆಲ್ಲ ಭಯವಿತ್ತು. ಈಗ ಮಾಸ್ತರು ಅವನ ಕಣ್ಣಿಗೆ ತುಂಬಾ ಕೃಶವಾದ ಮೂರ್ತಿಯಂತೆ ಕಾಣಿಸುತ್ತಾರೆ. ಡೇವಿಡ್ ಮಾಸ್ತರಿಗೆ ತನ್ನ ಹೆಂಡತಿ ತೀರಿಕೊಂಡಿದ್ದು, ತನ್ನ ಮಗುವನ್ನು ಸಾಕಲು ಇನ್ನೊಬ್ಬಳನ್ನು ಮದುವೆಯಾದದ್ದು, ಕೊನೆಗೆ ಆಕೆಯೂ ಮತ್ತೊಬ್ಬನ ಜೊತೆ ಓಡಿಹೋದದ್ದು ಹೀಗೆ ತನ್ನ ಆತ್ಮಕಥೆಯನ್ನು ವಿವರಿಸುತ್ತಾರೆ. ಡೇವಿಡ್ ಮಾಸ್ತರರು ತಮ್ಮ ಬದುಕಿನ ಎಲ್ಲ ಸಂದರ್ಭದಲ್ಲೂ ತಾವು ತೋರಿದ ಔದಾರ್ಯವನ್ನು ಬಿಚ್ಚಿಡುತ್ತಾರೆ. ಯಾರ ಮೇಲೂ ಯಾವಾಗಲೂ ಯಾವ ಆರೋಪವನ್ನು ಮಾಡದೆ ತಮ್ಮ ಬದುಕಿನ ದುರಂತಕ್ಕೆ ತಾವೇ ಹೊಣೆಯಾಗಿ ಅನುಭವಿಸುವ ಈ ಚಿತ್ರವು ಕರುಣಾಜನಕವಾಗಿದೆ. ಕುವೆಂಪು ಅವರು ಡೇವಿಡ್ ಮಾಸ್ತರರ ಘನತೆ ಮತ್ತು ಉದಾರತೆಯನ್ನು ಈ ಕಥೆಯಲ್ಲಿ ಎತ್ತಿ ಹಿಡಿದದ್ದಲ್ಲದೆ, ಔದಾರ್ಯದಿಂದ ಬದುಕು ಹಸನುಗೊಳ್ಳುವುದರ ಬದಲು ನಾಶವಾಗುತ್ತದೆಂಬುದನ್ನು ಸೂಚ್ಯವಾಗಿ ತಿಳಿಸಿದ್ದಾರೆ.

ದುರಾಸೆ ಹೊಂದಿದ್ದ ವ್ಯಕ್ತಿ ಮಾಡಬಾರದ ಅಕೃತ್ಯಗಳನ್ನೆಲ್ಲ ಮಾಡಿ ಕೊನೆಗೆ ಅದರಿಂದಲೇ ತನ್ನ ಅವನತಿಯನ್ನು ಕಟ್ಟಿಕೊಳ್ಳಬಲ್ಲ ಎಂಬುದಕ್ಕೆ 'ಗಂಟು' ಅಥವಾ ಗುಪ್ತಧನ ಕಥೆ ಸಾಕ್ಷಿಯಾಗಿದೆ. ಶ್ರೀಮಂತನಾಗಲು ಈ ಕಥೆಯ ನಾಯಕ ಮಂಜಣ್ಣ ಮಾಡದಿದ್ದ ಕೆಲಸವಿಲ್ಲ ಪೈಸೆಗೆಪೈಸೆ ಸೇರಿಸುತ್ತಾ ಶ್ರೀಮಂತನಾದವನು. ಕೊನೆಗೆ ಮೂಢ ನಂಬಿಕೆಗಳ ಮೊರೆ ಹೊಕ್ಕುತ್ತಾನೆ. ಬೈರಾಗಿಯೊಬ್ಬನ ಮೋಸಕ್ಕೆ ಬಲಿಯಾಗುತ್ತಾನೆ. ಅತಿಯಾಸೆ ಗತಿಕೆಡಿಸಿತು ಎಂಬ ನಾಣ್ಣುಡಿಯಂತಾಗುತ್ತದೆ ಅವನ ಬದುಕು. ಈ ಕಥೆಯ ಘಟನೆಗಳು ತೀರ ಸಹಜವಾಗಿದ್ದು ಪ್ರಾದೇಶಿಕ ಪ್ರಜ್ಞೆಯ ಅಗಾಧತೆಗೆ ದ್ಯೋತಕವಾಗಿದೆ. ಭೂಮಿಯಲ್ಲಿ ಅವಿತಿಟ್ಟ ನಿಧಿಯನ್ನು ಪಡೆಯುವಲ್ಲಿ ಮಂಜಣ್ಣ ವಿಫಲನಾಗುತ್ತಾನೆ. ರಾತ್ರೋರಾತ್ರಿ ಬೈರಾಗಿ ತನ್ನಲ್ಲಿದ್ದ ಒಡವೆ, ಹಣ ಎಲ್ಲವನ್ನು ದೋಚಿಕೊಂಡು ಓಡಿಹೋಗುತ್ತಾನೆ. ಹಳ್ಳಿಯ ಮುಗ್ಧ ಜನತೆ ಮೌಢ್ಯತೆಯ ಹೆಸರಿನಲ್ಲಿ ಮೋಸಕ್ಕೆ ಒಳಗಾಗುವ ಸಹಜವಾದ ಚಿತ್ರಣ ಈ ಕಥೆಯಲ್ಲಿ ಸಹಜತೆಯಿಂದ ಮೂಡಿ ಬಂದಿದೆ.

ಕುವೆಂಪು ಅವರ ಉತ್ತಮ ಕಥನ ಕೌಶಲಕ್ಕೆ ಕಾರಣವಾದ ಕಥೆಗಳಲ್ಲಿ 'ಮೀನಾಕ್ಷಿಯ ಮನೇ ಮೇಷ್ಟರು' ಕಥೆಯೂ ಒಂದು. ಹಿಂದಿನ ಆದರ್ಶ ಸಾಧನೆಯಲ್ಲಿ ಕಾಣಿಸಿಕೊಂಡಿದ್ದ ಹಾಸ್ಯವು ಇಲ್ಲಿ ಬದುಕಿನ ಗಹನತೆ ಮತ್ತು ವಾಸ್ತವವನ್ನು ಅರಿಯಲು ಮತ್ತೊಮ್ಮೆ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಮನೇ ಮೇಷ್ಟರು ಕಲ್ಪನಾ ಲೋಕದಲ್ಲಿ ವಿಹರಿಸುವ ವ್ಯಕ್ತಿ. ಇದೊಂದು ಕುವೆಂಪು ಅವರ ಅದ್ಭುತ ಪಾತ್ರ ಸೃಷ್ಟಿ. ಇಪ್ಪತ್ತಕ್ಕೆ ಮೀರದ ಹರೆಯದ ವ್ಯಕ್ತಿ. ಹುಟ್ಟಿನಿಂದಲೇ ಬಡತನ ಬೇಗೆಯಲ್ಲಿ ಬೆಂದ ಮೇಷ್ಟರು ಯೌವ್ವನದ ಸಹಜ ಆಸೆ ಆಕಾಂಕ್ಷೆಗಳನ್ನು ತನ್ನ ಸುತ್ತ ಮನದಲ್ಲಿಯೆ ಅದುಮಿಟ್ಟುಕೊಂಡದ್ದು ಸ್ವಾಭಾವಿಕವಾಗಿಯೇ ಇದೆ. ಈ ಬಯಕೆಗಳು ಅವಕಾಶ ಅನುಕೂಲ ಸಿಕ್ಕಾಗ

ಅನಾವರಣಗೊಳ್ಳುವುದು ಸಹಜವಾದರೂ ಅವುಗಳನ್ನು ನಿಯಂತ್ರಿಸುವ ಶಕ್ತಿ ವ್ಯಕ್ತಿಯ ಸಾಮಾಜಿಕ, ನೈತಿಕ ಹಂತದ ಮೇಲೆ ನಿಂತಿರುತ್ತದೆ. ಆದರೆ ಮೀನಾಕ್ಷಿ ಮನೇ ಮೇಷ್ಟರಿಗೆ ಇವುಗಳನ್ನು ನಿಯಂತ್ರಿಸಿಕೊಳ್ಳುವ ಶಕ್ತಿಯಿಲ್ಲ. ಆದರೆ ಅದೆಲ್ಲ ಅಶ್ಲೀಲಗೊಳ್ಳದೆ ಇರುವುದು ಕಥೆಯ ವಿಶಿಷ್ಟ ಅಂಶವಾಗಿದೆ.

ಮೀನಾಕ್ಷಿ ಸಹಜವಾದ ಲಜ್ಜೆ, ಸಿಡುಕು, ಚಂಚಲತೆ ಮತ್ತು ರಾಗಭಾವಗಳ ಸ್ತ್ರೀಯಾಗಿದ್ದಾಳೆ. ಈ ಇಬ್ಬರ ನಡುವಿನ ಪ್ರೇಮ ಏಕಮುಖವಾದದ್ದು. ಕೊನೆಗೆ ಮೀನಾಕ್ಷಿಯನ್ನು ಆಕೆಯ ತಂದೆ ತಾಯಿಯರು ವಯಸ್ಸಾದವನಿಗೆ ಎರಡನೇ ಹೆಂಡತಿಯಾಗಿ ಮದುವೆ ಮಾಡಿಕೊಡುತ್ತಾರೆ. ಆಗ ಮೇಷ್ಟರು ಮಾನಸಿಕ ಗೊಂದಲಕ್ಕೆ ಒಳಗಾಗುತ್ತಾರೆ. ಕೊನೆಗೆ ಮೀನಾಕ್ಷಿಯ ಪತಿಯನ್ನು ಕೊಂದು ಅವಳನ್ನು ಪಡೆಯಬೇಕೆಂಬ ಹುಚ್ಚು ಸಾಹಸಕ್ಕೆ ಕೈ ಹಾಕುತ್ತಾರೆ. ಆದರೆ ಮೀನಾಕ್ಷಿ ಮತ್ತು ಅವಳ ಪತಿ ಅನ್ಯೋನ್ಯವಾಗಿರುವುದನ್ನು ಕಂಡು ಮೇಷ್ಟರು ತನ್ನ ದುರುದ್ದೇಶಪೂರಿತ ಯೋಜನೆಯನ್ನು ಕೈ ಬಿಡುತ್ತಾರೆ. ಅವಳ ಪತಿಯನ್ನು ಕೊಲ್ಲಬೇಕೆಂದು ಚಾಕು ಖರೀದಿಸಿ ಬಂದ ಮೇಷ್ಟರು, ಆ ಮನೆಯ ವಾತಾವರಣ, ನಾಗರೀಕತೆ, ಸಂಸ್ಕೃತಿ, ಸಭ್ಯತೆ, ರಸಿಕತೆಗಳನ್ನು ಕಂಡು ಬೆರಗಾಗಿ ದಂಪತಿಗಳನ್ನು ಆಶೀರ್ವದಿಸಿ ತಂದಿದ್ದ ಚಾಕುವನ್ನು ಮೀನಾಕ್ಷಿಗೇ ಕೊಟ್ಟು ಹೊರಡುತ್ತಾರೆ.

ಕುವೆಂಪು ಅವರ ಪ್ರಧಾನ ವಸ್ತುಗಳಲ್ಲಿ ವಿಡಂಬನೆಯೂ ಒಂದು. ಈ ವಿಡಂಬನೆಯು ಅವರ ಮತ್ತೊಂದು ಕಥೆಯಾದ 'ವೈರಾಗ್ಯದ ಮಹಿಮೆ'ಯಲ್ಲಿ ಕುತೂಹಲಭರಿತವಾಗಿ ನಿರೂಪಿತವಾಗಿದೆ. ಈ ಕಥೆಯ ನಾಯಕ ಸ್ವಭಾವತ: ಸೋಮಾರಿ, ಬೇಜವಾಬ್ದಾರಿ ವ್ಯಕ್ತಿ, ಪರಾವಲಂಬಿ ಜೀವಿ. ಪರರನ್ನು ಆಶ್ರಯಿಸಿ ಬದುಕುವುದು ತನ್ನ ಹಕ್ಕು ಎಂದು ತಿಳಿದವನು. ಅವನಲ್ಲಿ ಯಾವುದೇ ಆದರ್ಶಗಳಿಲ್ಲ. ಆದರೆ ಅವನಲ್ಲಿ ಕೆಲವು ಚಾಂಚಲ್ಯಗಳಿವೆ. ವೈಷ್ಣವ ಪಂಥದ ಮಧುರ ಭಕ್ತಿಯ ಹಂದರದ ಮೇಲೆ ಈ ಕಥೆ ನಿಂತಿದೆ. ಕೊನೆಗೆ ಅವನಿಗೆ ಹೃದಯದಲ್ಲಿ ಒಮ್ಮೆ ಮನ್ಮಥ ಸಂಚಾರವಾಗುತ್ತದೆ. ತಾನಿರುವ ಗ್ರಾಮ ಸ್ವರ್ಗವಾಗುತ್ತದೆ, ಅವನಿಗಿರುವ ತೋಟವೆ ನಂದನವನವಾಗಿರುತ್ತದೆ. ಅದಕ್ಕೆ ಇವನೇ ಇಂದ್ರನಾಗಿರುತ್ತಾನೆ. ಶೃಂಗಾರ ಮಯವಾದ ಬದುಕನ್ನು ಅಲ್ಲಿ ತುಂಬಿಸುತ್ತಾನೆ. ಆ ಭೋಗ ಸಾಮ್ರಾಜ್ಯದಲ್ಲಿ ಗುರು, ಶಿಷ್ಯೆಯರು, ತರುಣ ವಿಧವೆಯರು, ಚಪಲೆಯರು ಸಹಬಾಗಿಗಳಾಗುತ್ತಾರೆ. ಮಾನವ ಸ್ವಭಾವದಲ್ಲಿ ಹುದುಗಿದ್ದ ಲಾಲಸೆ ಇಲ್ಲಿ ರಮ್ಯವಾಗಿ ನಿರೂಪಿತವಾಗಿದೆ. ವ್ಯಕ್ತಿಗಳ ಸುಪ್ತ ಬಯಕೆಗಳನ್ನು ವಿಚಿಕಿತ್ಸಕ ದೃಷ್ಟಿಯಿಂದ ಕಥೆಗಾರರು ತಮ್ಮ ಕಾವ್ಯಮಯವಾದ ವರ್ಣನೆಗಳ ಮೂಲಕ ಈ ಕಥೆಯಲ್ಲಿ ಹಿಡಿದಿಟ್ಟಿದ್ದಾರೆ.

ಕುವೆಂಪು ಅವರ ಮಹತ್ವದ ಸೃಷ್ಟಿಗಳಲ್ಲಿ 'ಧನ್ವಂತರಿಯ ಚಿಕಿತ್ಸೆ' ಮತ್ತು 'ಸಾಲದ ಮಗು' ಕಥೆಗಳು ಸೇರಿವೆ. ಅಲೌಕಿಕ ಪ್ರತಿಮೆಯ ಮೂಲಕ ಲೌಕಿಕ ಘಟನೆಗಳನ್ನು ಸಮೀಕರಿಸಿ ಹೇಳಿರುವ 'ಧನ್ವಂತರಿಯ ಚಿಕಿತ್ಸೆ'ಯ ಶೈಲಿ ಶ್ರೇಷ್ಠ ಮಟ್ಟದ್ದಾಗಿದೆ. ಸಮಾಜದ ಭಯಂಕರ ಅಸಮಾನತೆಯ ಸ್ಥಿತಿಯನ್ನು ಕಂಡು ದೇವರ್ಷಿಗಳಾದ ವಿಶ್ವಾಮಿತ್ರ ಮತ್ತು ಪರುಶುರಾಮ ಆತಂಕಗೊಳ್ಳುತ್ತಾರೆ. ಸಮಾಜದ ಜನತೆಯ ಆರ್ತನಾದವನ್ನು ಕೇಳಿ ನಾರದನ ಮಾತಿನಂತೆ ಭೂಲೋಕಕ್ಕೆ ಬರುತ್ತಾರೆ. ಇಲ್ಲಿಗೆ ಬಂದು ದೊಡ್ಡ ದೊಡ್ಡ ಸೌಧಗಳು, ಸಿನಿಮಾ, ಹೋಟೆಲ್ , ರೈಲು, ಕಾರ್ಖಾನೆಗಳು, ದೇವಾಲಯಗಳನ್ನು ನೋಡಿ, ಅದರ ನಡುವೆ ಸಾಮಾನ್ಯ ರೈತನ ಬದುಕು ಸಿಕ್ಕಿ ಭಯಂಕರ ನೋವಿನಿಂದ ನರಳುತ್ತಿರುವುದನ್ನು ಗುರುತಿಸುತ್ತಾರೆ. ಸಮಾಜವಾದಿ ಪರಿಪಕ್ವ ನಾಯಕರ ತರ ಕಾಣುವ ವಿಶ್ವಾಮಿತ್ರ ಮತ್ತು

ಪರಶುರಾಮರು ನಾಗರೀಕತೆ, ಸಂಸ್ಕೃತಿ ಸೃಷ್ಟಿಯ ಬೆನ್ನೆಲುಬಾದ ರೈತನ ದಾರುಣ ಸ್ಥಿತಿಗೆ ಚಿಕಿತ್ಸೆಯಾಗಬೇಕೆಂದು ಮರುಗುತ್ತಾರೆ. ಕಥೆಯಲ್ಲಿ ಬರುವ ಶ್ರೀಮಂತ ಚಿತ್ರಣ ಇಂದಿನ ಸಮಾಜದ ಗತಿಬಿಂಬವಾಗಿದೆ. ಹಾಗೆಯೇ ಕಥೆಯಲ್ಲಿ ಬರುವ ಜೋಪಡಿಯಲ್ಲಿರುವ ರೈತನೊಬ್ಬನ ಗೋಳು ಇಡೀ ಸಮಾಜದ ರೈತ ಸಮುದಾಯದ ಗೋಳಾಗಿದೆ. ಒಂದು ಕಡೆ ಹಣಕ್ಕಾಗಿ ಬಾಯ್ದೆರೆದು ಸುಲಿಗೆಗಾಗಿ ನಿಂತ ಪುರೋಹಿತವರ್ಗ, ಮತ್ತೊಂದೆಡೆ ನಗರದ ಆಡಂಬರ ಜೀವನ ಇವುಗಳ ನಡುವೆ ಗುಡಿಸಿಲ ರೈತನ ದೈನ್ಯ ಸ್ಥಿತಿ - ಇವೆಲ್ಲವೂ ಈ ಕಥೆಯಲ್ಲಿ ಪರಿಶೋಧನೆಗೆ ಒಳಗಾಗುತ್ತವೆ. ಈ ಬಾರಗಳೆಲ್ಲ ರೈತನ ಎದೆಯ ಮೇಲೆ ಹೇರಿ ನಾಗರೀಕತೆ ಎಂಬ ಹೆಸರಿನಲ್ಲಿ, ಸಂಸ್ಕೃತಿ ಎಂಬ ಪ್ರಸಾರದಲ್ಲಿ ಸಮಾಜ ಮುಂದುವರಿಯುತ್ತದೆ. ಹೀಗೆ, ಒದಗಿರುವ ರೈತನ ಸಂಕಷ್ಟಗಳ ನಿವಾರಣೆಗೆ ವಿಶ್ವಾಮಿತ್ರ ಧನ್ವಂತರಿಯನ್ನು ಕರೆಸಬೇಕೆಂದು ಕಥೆ ತಾಳುವ ದರ್ಶನ ಅರ್ಥಪೂರ್ಣವಾಗಿದೆ. ಆಧುನಿಕತೆ ಮತ್ತು ನವ ನಾಗರೀಕತೆಯ ನಡುವಿನ ಸಂಘರ್ಷ, ಗೊಡ್ಡು ಆಚರಣೆ ಮತ್ತು ಪುರೋಹಿತಶಾಹಿಯ ನಡುವಿನ ಸುಲಿಗೆ, ಸುಧಾರಣೆಯ ವೈಫಲ್ಯ ಈ ಕಥೆಯಲ್ಲಿ ಬರುವ ಬಹು ಮುಖ್ಯ ಅಂಶಗಳಾಗಿವೆ. ಇಲ್ಲಿ ವಿಶ್ವಾಮಿತ್ರ ಮತ್ತು ಧನ್ವಂತರಿಗಳು ಕಾಲ್ಪನಿಕ ವ್ಯಕ್ತಿಗಳಾಗಿ ಕಂಡರು ದೀನ ದಲಿತರ, ರೈತರ ಉದ್ಧಾರಕ್ಕಾಗಿ ಹುಟ್ಟಿ ಬರುವ ಸಮಾಜವಾದಿ ವ್ಯಕ್ತಿಗಳಂತೆ ಕಾಣಿಸಿಕೊಳ್ಳುತ್ತಾರೆ. ವಿಡಂಬನಾತ್ಮಕ ದೃಷ್ಟಿಕೋನದಿಂದ ಆರಂಭವಾದ ಈ ಕಥೆಯು ದರ್ಶನಾತ್ಮಕ ನೆಲೆಯಲ್ಲಿ ಮುಕ್ತಾಯ ಕಾಣುವುದು ನಿಜಕ್ಕೂ ಮೆಚ್ಚಿಗೆಯ ಅಂಶವಾಗಿದೆ.

ಜೀತಪದ್ಧತಿ ಭಾರತೀಯ ಪರಂಪರೆಯಲ್ಲಿಯೇ ಬಂದಂತ ಒಂದು ಅನಿಷ್ಟ ಪದ್ಧತಿಯಾಗಿದೆ. ಜಾತಿ ಪದ್ಧತಿಯಷ್ಟೆ ಇದು ಕ್ರೂರವಾದದ್ದು. ಜೀತ ಪದ್ಧತಿಯೂ ಇಂದಿಗೂ ಕೂಡ ಆಚರಣೆಯಲ್ಲಿದ್ದು ಅನೇಕ ಸಮಸ್ಯೆಗಳನ್ನು ಹುಟ್ಟುಹಾಕಿದೆ. ಮಲೆನಾಡಿನ ಪರಿಸರದಲ್ಲಿ ಇದ್ದಂತ ಜೀತ ಪದ್ಧತಿಯ ಮುಖವನ್ನು ಕುವೆಂಪು ಅವರು 'ಸಾಲದ ಮಗು' ಕಥೆಯಲ್ಲಿ ಸಮರ್ಥವಾಗಿ ಹಿಡಿಯಲಾಗಿದೆ. ದಣಿಯೊಬ್ಬನ ಸ್ವಾರ್ಥತತೆಗೆ ತುತ್ತಾದ ಅನಾಥ ಬಾಲಕನೊಬ್ಬನ ಕರುಣಾಮಯವಾದ ಸ್ಥಿತಿಯನ್ನು ಈ ಕಥೆ ಒಳಗೊಂಡಿದೆ. ಕುವೆಂಪು ಅವರ 'ಯಾರು ಅರಿಯದ ವೀರ' ಮತ್ತು 'ಸಾಲದ ಮಗು' ಕಥೆಗಳು ತಮ್ಮ ವಸ್ತು ಮತ್ತು ನಿರ್ವಹಣೆಯ ದೃಷ್ಟಿಯಿಂದ ಈ ಶತಮಾನದ ಶ್ರೇಷ್ಠ ಕಥೆಗಳಾಗಿವೆ. ಸಾಲದ ಮಗು ಕಥೆಯಲ್ಲಿ ಶ್ರೀಮಂತರು ಬಡವರನ್ನು ಅಮಾನುಷವಾಗಿ ಶೋಷಣೆಗೆ ಗುರಿಮಾಡುವ ಅಸಾಹಯಕ ಚಿತ್ರಣವನ್ನು ಕಥೆಗಾರರು ತುಂಬ ಶಕ್ತಿಯುತವಾಗಿ ಹಿಡಿದಿಟ್ಟಿದ್ದಾರೆ. ಅಪ್ಪ ಮಾಡಿದ ಸಾಲವನ್ನು ಮಕ್ಕಳು ತೀರಿಸಬೇಕೆಂಬ ನಂಬಿಕೆಯಲ್ಲಿ ಮಗನನ್ನು ಸಿಕ್ಕಿಸಿ ತನ್ನ ಮನೆಯ ಜೀತದಾಳನ್ನಾಗಿ ಮಾಡಿಕೊಳ್ಳುವ ಹುನ್ನಾರ ಅರ್ಥಹೀನವಾದುದು. ಇಂಥ ಅಮಾನವೀಯ ಶೋಷಣೆಯ ವಿರುದ್ಧ ಮೊಟ್ಟ ಮೊದಲಿಗೆ ಸಾಹಿತ್ಯದಲ್ಲಿ ಗಟ್ಟಿದನಿ ಎತ್ತಿದವರಲ್ಲಿ ಕುವೆಂಪು ಅವರು ಆದ್ಯರು. ದೈನ್ಯತೆ ಮತ್ತು ಕ್ರೌರ್ಯತೆಗಳನ್ನು ಮುಖಾಮುಖಿಯಾಗಿಸುವುದರ ಬದಲು ಅವುಗಳನ್ನು ಸಮಾಜ ಒಪ್ಪಿಕೊಂಡ ರೀತಿಯನ್ನು ಈ ಕಥೆಯಲ್ಲಿ ಗುರುತಿಸಿರುವುದು ಚಾರಿತ್ರಿಕ ದೃಷ್ಟಿಯಿಂದ ಬಹಳ ಮಹತ್ವವಾದುದು.

ಮಲೆನಾಡಿನಲ್ಲಿ ಮಳೆ, ಚಳಿ, ಗಾಳಿ, ಕತ್ತಲು, ಸಿಡಿಲು, ಮಿಂಚುಗಳಿಂದ ಪ್ರಾರಂಭವಾಗುವ ಈ ಕಥೆಯು ಸಹಜವಾಗಿಯೇ ನಿಗೂಢತೆ ಮತ್ತು ಭಯಾನಕತೆಯನ್ನು ಒಳಗೊಂಡಿದೆ. ಇಂಥ ವಾತಾವರಣದಲ್ಲಿ ಮನೆಯಲ್ಲಿ ಮಲಗಿದ್ದ ಗೌಡರಿಗೆ ಜಗ್ಗನೆ ಎಚ್ಚರವಾಗಿ ಮನೆಯ ಆಳು ಸುಬ್ಬನನ್ನು ಕೂಗಿಕೊಳ್ಳುತ್ತಾರೆ. ಕೆಳ ಜಗುಲಿಯ

ಮೂಲೆಯೊಂದರಲ್ಲಿ ಯಾರೋ ದಾನ ಮಾಡಿದ್ದ ಎರಡು ಚಿಂದಿ ಕಂಬಳಿಗಳನ್ನು ಸುತ್ತಿಕೊಂಡು ಮಲಗಿದ್ದ ಸುಬ್ಬನಿಗೆ ತಕ್ಷಣ ಎಚ್ಚರವಾಗದು. ಹಿಂದಿನ ದಿನ ಗದ್ದೆಯಲ್ಲಿ ಕೆಲಸಮಾಡಿದ ಶ್ರಮ ಕೂಡ ಆ ನಿದ್ದೆಯಲ್ಲಿ ಸೇರಿಕೊಂಡಿರುತ್ತದೆ. ಮೂರು ಸಲ ಕೂಗಿದ ಗೌಡರಿಗೆ ಸಿಟ್ಟು ನೆತ್ತಿಗೇರಿ ಹಾಸಿಗೆಯಿಂದ ಎದ್ದು ಕೈಗೆ ಬೆತ್ತ ತೆಗೆದುಕೊಂಡು ಮೇಲು ಜಗುಲಿಯಿಂದ ಕೆಳ ಜಗುಲಿಗೆ ಬರುತ್ತಾರೆ. ಆ ಮನೆಗೆ ಅವರು ಯಜಮಾನರು, ದೊಡ್ಡ ಶ್ರೀಮಂತರು ಮಾತ್ರವಲ್ಲ ಆ ಇಡೀ ಗ್ರಾಮಕ್ಕೆ ಒಡೆಯರು. ಅವರ ಸ್ವಭಾವ ಕಾಠಿಣ್ಯ, ಅವರಿಗೆ ವಯಸ್ಸು ೬೦ರ ಮೇಲಾಗಿತ್ತು. ಅವರಿಗೆ ಮೂವರು ಪತ್ನಿಯರು. ಗ್ರಾಮದಲ್ಲಿ ನಾಲ್ಕೈದು ಮನೆತನಗಳಿಗೆ ಹೆಚ್ಚು ಬಡ್ಡಿಯ ಮೇಲೆ ಸಾಲಕೊಟ್ಟು ಆ ಮನೆತನಗಳನ್ನು ನಾಶಮಾಡಿದ್ದರು. ಅವರನ್ನು ಕಂಡರೆ ಊರಿನವರಿಗೆ ಹುಲಿಯನ್ನೆ ಕಂಡಷ್ಟೆ ಭಯವಿತ್ತು. ಆದರೆ ಗೌಡರು ಆ ಭೀತಿಯನ್ನು ಜನರು ನನಗೆ ತೋರುವ ಗೌರವವೆಂದು ತಿಳಿದಿದ್ದರು. ಪೂಜೆ ಪುರಸ್ಕಾರಗಳಲ್ಲಿ, ನೀತಿ ನಿಯಮಗಳಲ್ಲಿ ಅವರಿಗೆ ನಿಷ್ಠೆ ಭಕ್ತಿ ಗೌರವಗಳಿದ್ದವು. ಗೌಡರು ಪ್ರತಿದಿನ ಮಧ್ಯವ್ಯಸನಿಯಾಗಿರುತ್ತಿದ್ದರು.

ಸುಬ್ಬುವಿನ ಆತ್ಮ ಚರಿತ್ರೆಯನ್ನು ಕಥೆಗಾರರು 'ಸಾಲದ ಮಗು' ಕಥೆಯಲ್ಲಿ ಈ ರೀತಿ ನಿರೂಪಿಸುತ್ತಾರೆ :

> "ಸುಬ್ಬು ಎಂಟು ಹತ್ತು ವರ್ಷದ ಹುಡುಗ. ಅವನ ತಂದೆ ರಂಗನು ಗೌಡರ ಒಕ್ಕಲಾಗಿದ್ದನು. ಸುಬ್ಬನ ತಾಯಿ ಮಗನನ್ನು ಹೆತ್ತ ಎರಡು ವರ್ಷಗಳಲ್ಲಿಯೆ ತೀರಿಹೋಗಿದ್ದಳು. ರಂಗನು ಮತ್ತೊಂದು ಮದುವೆ ಮಾಡಿಕೊಳ್ಳಬೇಕೆಂದು ಬಹಳ ಪ್ರಯತ್ನಪಟ್ಟನು. ಹೆಣ್ಣೂ ಕೂಡ ಗೊತ್ತಾಯಿತು. ಆದರೆ ಅದಕ್ಕೆ ಮುನ್ನೂರು ರೂಪಾಯಿ ತೆರ ಕೊಡಬೇಕೆಂದು ಹೆಣ್ಣಿನವರು ಕೇಳಿದರು. ಬಡ ರಂಗನು ಒಡೆಯರಾದ ಗೌಡರ ಹತ್ತಿರ ಸಾಲ ಕೇಳಿದನು. ಗೌಡರು ಈಗಾಗಲೆ ರಂಗನ ಮೇಲೆ ಇದ್ದ ಮುನ್ನೂರು ರೂಪಾಯಿಗಳ ಸಾಲವನ್ನು ತೋರಿಸಿ ಇನ್ನು ಒಂದು ಕಾಸನ್ನೂ ಕೊಡುವುದಕ್ಕಾಗುವುದಿಲ್ಲ ಎಂದರು. ಹೀಗಾಗಿ ರಂಗನ ಮದುವೆ ನಿಂತಿತು. ಕೆಲ ದಿನಗಳಲ್ಲಿಯೆ ರಂಗನಿಗೆ ರೇಷ್ಮೆ ಖಾಯಿಲೆ ಬಂದು ತೀರಿಹೋದನು. ಗೌಡರು ತಮ್ಮ ಸಾಲಕ್ಕಾಗಿ ಅವನ ಮಗ ಸುಬ್ಬನನ್ನು ಮನೆಯಲ್ಲಿ ಜೀತದಾಳನ್ನಾಗಿ ಮಾಡಿ ಇಟ್ಟುಕೊಂಡು ಅಗಸರು ಕತ್ತೆಗಳ ಮೇಲೆ ಹೊರೆ ಹೊರುವಂತೆ ಆ ಬಾಲಕನ ಮೇಲೆ ಕೆಲಸಗಳನ್ನು ಹೇರತೊಡಗಿದರು. ಸುಬ್ಬನ ಕೈಲಿ ಆಗಲಿ ಆಗದೇ ಹೋಗಲಿ ಕೆಲಸ ಮಾಡಲೇ ಬೇಕಿತ್ತು. ಗೌಡರು ಹುಡುಗನಿಗೆ ಬುದ್ಧಿ ಬರಲಿ ಎಂದು ಆಗಾಗ ಹೊಡೆಯುತ್ತಿದ್ದರು. ಸುಬ್ಬನು ದಿನ ದಿನವೂ ಕೃಶನಾಗುತ್ತಿದ್ದನು. ಅವನ್ನೆಲ್ಲಿಯಾದರೂ ಜ್ವರ ಬಂದು ಮಲಗಿಕೊಂಡರೆ ಗೌಡರು ಎರಡೂ ಗುದ್ದು ಹೇರಿ ಕೆಲಸಕ್ಕೆ ದಬ್ಬುತ್ತಿದ್ದರು." ೨

ಗೌಡರು ಬೆತ್ತ ಹಿಡಿದು ಸುಬ್ಬನ ಬಳಿ ಬಂದಾಗ ಆತ ಕನಸು ಕಾಣುತ್ತಿದ್ದನು. "ಸುಬ್ಬ ಕನಸಿನಲ್ಲಿ ತನ್ನ ತಂದೆ ತಾಯಿರೊಡನೆ ಒಂದು ಸುಂದರವಾದ ಸೌಧದಲ್ಲಿ ನಲಿಯುತ್ತಿದ್ದನು. ಅಲ್ಲಿ ಬೇಕಾದಷ್ಟು ಉಡುಗೆ ತೊಡುಗೆಗಳನ್ನು ಧರಿಸಿದ್ದನು. ಅಲ್ಲಿ ಅವನು ಕೆಲಸ ಮಾಡಬೇಕಾಗಿಯೇ ಇರಲಿಲ್ಲ. ಅವನ ಕೈಗೆ ಕಾಲಿಗೆ ಆಳುಗಳಿದ್ದರು. ಜೊತೆಗೆ

ಆಡಲು ಹುಡುಗರಿದ್ದರು. ವಿಧವಿಧವಾದ ಭಕ್ಷ್ಯ ಭೋಜ್ಯಗಳು ಅವನು ತಿಂದು ತಿಂದು ಮಿಗುವಷ್ಟಿದ್ದುವು" ಎಂದು ಕಥೆಗಾರರು ಬಣ್ಣಿಸುವಲ್ಲಿ ಸುಬ್ಬನು ಜಾಗೃತಾವಸ್ಥೆಯಲ್ಲಿ ತನಗಿಲ್ಲದ ಸುಖಗಳ್ನು ಕಂಡುಂಡು ನೆನಸಿನಲ್ಲಿ ಲಭಿಸದ ಮತ್ತು ಕೈಗೂಡದ ಬಯಕೆಗಳು ಕನಸಿನಲ್ಲಿ ಸಿಗುವುದನ್ನು ಸಹಜವಾಗಿ ಮೂಡಿಸಲಾಗಿದೆ.

ಸುಬ್ಬ ಮಲಗಿದ್ದಲ್ಲಿಗೆ ಬಂದ ಗೌಡರು ಬೆತ್ತದಿಂದ ರಪ್ಪ ರಪ್ಪನೆ ಒಡೆದಾಗ ಆತ ಚೀರಿ "ಅಯ್ಯೋ! ದಮ್ಮಯ್ಯ!" ಎಂದು ಬೆಚ್ಚಿ ಎದ್ದು ಕೂರುತ್ತಾನೆ. ಆ ಮಳೆಯಲ್ಲಿ ಗದ್ದೆಯಲ್ಲಿ ಹತ್ತು ಮೀನಿಗಾಗಿ ಹಾಕಿದ್ದ ಕೂಣಿಯನ್ನು ನೋಡಿಕೊಂಡು ಬರಲು ಸುಬ್ಬ ಕೈಯಲ್ಲಿ ಲಾಟೀನು ಹಿಡಿದುಕೊಂಡು ಹೊರಡುತ್ತಾನೆ. ಗೌಡರು ಮರಳಿ ಹೋಗಿ ಬೆಚ್ಚಗೆ ಮಲಗಿ ನಿದ್ದೆ ಮಾಡುತ್ತಾರೆ. ಭಯಂಕರ ಗಾಳಿ ಮಳೆ ಸಿಡಿಲು ಮಿಂಚು ಗುಡುಗುಗಳು ನಿಂತಿರಲಿಲ್ಲ. ಹಾದಿಯ ತುಂಬ ಕೆಸರು, ಎಂಟು ಹತ್ತು ಫರ್ಲಾಂಗು ನಡೆಯಬೇಕು. ರುದ್ರ ಪ್ರಕೃತಿಯ ಹೊರತು ಯಾವ ಜಂತುವೂ ಇಲ್ಲ. ಕಾಲುಜಾರಿ ಬಿದ್ದು ಲಾಟೀನು ಒಡೆದು ಹೋಗುತ್ತದೆ. ಮನೆಗೆ ಮೀನು ತರದೆ ಹಿಂದಿರುಗಿದರೆ ಗೌಡರ ಭಯ. ಅತ್ತು ಕರೆದು ಹೇಗೊ ಆತ ಗದ್ದೆಯ ಬಳಿ ಬಂದು ಕೂಣಿಯನ್ನೆತ್ತುತ್ತಾನೆ. ಕೂಣಿಯ ತುಂಬಾ ಮೀನುಗಳು ತುಂಬಿ ಹೋಗಿರುತ್ತವೆ. ಮೀನು ತಿನ್ನಲೆಂದು ಬಂದು ಅದರೊಳಗಿದ್ದ ಕೃಷ್ಣಸರ್ಪ ಸುಬ್ಬನನ್ನು ಕಚ್ಚುತ್ತದೆ. ಮಳೆ ಗಾಳಿ ಕಡಿಮೆಯಾಗಿ ಸುಬ್ಬ ಚೀರಿ ವಿಷವೇರಿ ಕೆಳಗೆ ಬೀಳುತ್ತಾನೆ. ಬೆಳಗಾದ ಮೇಲೆ ಗೌಡರು ಸುಬ್ಬ ಬಾರದಿದ್ದನ್ನು ನೋಡಿ "ಅವನು ಸಿಕ್ಕಲಿ, ಎಲುಬು ಮುರಿಯುತ್ತೇನೆ!" ಎಂದು ಗರ್ಜಿಸುತ್ತಾರೆ. ಕೂಣಿ ಸಮೀಪ ಬಂದರು ಸತ್ತು ಹೆಣವಾಗಿ ನಿಮಿರಿ ನಿಂತಿದ್ದ ಸುಬ್ಬನನ್ನು ಕಂಡು ಗೌಡರು ಬಹಳ ವ್ಯಸನಪಟ್ಟುಕೊಂಡು, "ಅಂತೂ ಮುನ್ನೂರು ರೂಪಾಯಿ ಮನೆಗೆ ಬಂತು" ಎಂದು ನಿಟ್ಟುಸಿರು ಬಿಡುತ್ತಾರೆ ಎಂಬಲ್ಲಿಗೆ ಕಥೆ ನಿಲ್ಲುತ್ತದೆ.

ಸುಬ್ಬುವಿನ ಚಿತ್ರ ಓದುಗರ ಮನಸ್ಸನ್ನು ಸೂರೆಗೊಳ್ಳುತ್ತದೆ. ಆದರೆ ಗೌಡರು ಸುಬ್ಬನ ಸಾವಿನ ಬಗ್ಗೆ ನಿಡುಸುಯ್ದು ಅವನ ತಂದೆಗೆ ತಾವು ಕೊಟ್ಟ ಮುನ್ನೂರು ರೂಪಾಯಿ ವ್ಯರ್ಥವಾಯಿತಲ್ಲ ಎಂದು ಪರಿತಪಿಸುತ್ತಾರೆ. ಮೀನು ಸಿಕ್ಕದೆ ಹೋದುದರ ಬಗ್ಗೆ ಅವರಿಗೆ ವಿಷಾದವಿದೆ. ಗೌಡರ ಪಾತ್ರ ಸಮಾಜದ ನಿಷ್ಕರುಣೆಯ, ಹೃದಯ ಹೀನ ಶ್ರೀಮಂತರ, ಶೋಷಕರ ಪ್ರತೀಕವಾಗಿದೆ. ಒಡೆಯನ ಆಸೆ ಕ್ರೌರ್ಯಕ್ಕಾಗಿ ಪ್ರಾಣತೆತ್ತ ಮುಗ್ಧ ಸುಬ್ಬು 'ಸಾಲದ ಮಗು'ವಾಗಿಯೇ ಸಾಯುತ್ತಾನೆ. ಗೌಡರ ವ್ಯಕ್ತಿತ್ವದ ಎಲ್ಲ ಮುಖಗಳನ್ನು ಕಥೆಗಾರರು ಮುಕ್ತವಾಗಿ ಬಿಚ್ಚಿಡುವುದು ಈ ಕಥೆಯ ವೈಶಿಷ್ಟ್ಯವಾಗಿದೆ. ಶ್ರೀ ಕುವೆಂಪು ಅವರ ಸಾಮಾಜಿಕ ಕಳಕಳಿ ಮತ್ತು ಕಲಾಪ್ರಜ್ಞೆಗೆ ಈ ನಾಲ್ಕೈದು ಪುಟದ ಕಥನ ಸಾಕ್ಷಿಯಾಗಿದೆ.

## ಆ. ಪ್ರತಿಕ್ರಿಯೆ

ಕನ್ನಡ ಸಣ್ಣಕಥೆ ೧೯೦೦ ರಲ್ಲೇ ಪಂಜೆಯವರಿಂದ ಪ್ರಾರಂಭವಾದರೂ ಅದು ಪ್ರಾತಿನಿಧಿಕತೆಯನ್ನು ಪಡೆದುಕೊಳ್ಳುವುದು ಮಾಸ್ತಿಯವರಿಂದ. ಮಾಸ್ತಿಯವರ ಮೊದಲ ಕಥಾ ಸಂಕಲನ ೧೯೧೦ ರಲ್ಲಿ ಪ್ರಕಟವಾದ ಬಳಿಕ ಅನೇಕ ಕಥೆಗಾರರು ಕನ್ನಡದಲ್ಲಿ ಬರೆಯಲಾರಂಭಿಸಿದರು. ಕೆಲವು ಕಥೆಗಾರರು ಮಾಸ್ತಿಯವರ ಪ್ರಭಾವಕ್ಕೆ ಒಳಗಾಗಿ ಕಥೆಗಳನ್ನು ಬರೆದರೆ ಕೆಲವರು ಅವರಿಂದ ಬಿಡಿಸಿಕೊಂಡು ಭಿನ್ನವಾಗಿ ಬರೆಯುವುದಕ್ಕೆ ಆರಂಭಿಸಿದರು. ಕುವೆಂಪು ಅವರು ೧೯೩೭ ರಲ್ಲಿ ಪ್ರಕಟಿಸಿದ ತಮ್ಮ ಮೊದಲ ಕಥಾ ಸಂಕಲನ 'ಸಂನ್ಯಾಸಿ ಮತ್ತು ಇತರ ಕಥೆಗಳು' ಕೃತಿಯಲ್ಲಿ

ತಮ್ಮ ವ್ಯಕ್ತಿತ್ವದ ಚಹರೆಯನ್ನು ಪ್ರಕಟಿಸಿದರು. ಕನ್ನಡ ಕಥನ ಪರಂಪರೆಯಲ್ಲಿ ಕುವೆಂಪು ಅವರ 'ಸಂನ್ಯಾಸಿ...', 'ಧನ್ವಂತರಿ...' ಮತ್ತು 'ಮಲೆನಾಡಿನ...' ಕೃತಿಗಳಿಗೆ ವಿಶಿಷ್ಟವಾದ ಸ್ಥಾನವಿದೆ. ಈ ವಿಶಿಷ್ಟತೆ ಅನ್ನುವುದು ಬರೀ ಗುಣ ವಿಶೇಷಣ ಮಾತ್ರವಲ್ಲ. ವಸ್ತು, ಭಾಷೆ, ನಿರೂಪಣೆ, ಕಲಾತ್ಮಕತೆ ಇವುಗಳಲ್ಲಿ ಇತರರಿಗಿಂತ ಭಿನ್ನವಾದ ಛಾಪನ್ನು ಕುವೆಂಪು ಇವುಗಳಲ್ಲಿ ಮೂಡಿಸಿದ್ದಾರೆ. ಇವರ ಕಥೆಗಳನ್ನು ಮತ್ತು 'ಮಲೆನಾಡಿನ ಚಿತ್ರಗಳನ್ನು' ಕುರಿತು ಮೇಲಿನ ಭಾಗದಲ್ಲಿ ಆಸ್ವಾದನೆ, ವಿಶ್ಲೇಷಣೆಯ ಮಟ್ಟದಲ್ಲಿ ಪರಿಶೀಲಿಸಲಾಯಿತು. ಈ ಭಾಗದಲ್ಲಿ ಈ ಕಥೆಗಳನ್ನು ಮತ್ತು ಚಿತ್ರಗಳನ್ನು ಕುರಿತು ಕನ್ನಡ ವಿಮರ್ಶೆ ಕಳೆದ ಆರೇಳು ದಶಕಗಳಲ್ಲಿ ಹೇಗೆ ಪ್ರತಿಕ್ರಿಯಿಸಿದೆ ಎಂಬುದನ್ನು ನೋಡಬಹುದು. ಕುವೆಂಪು ಅವರ 'ಸಂನ್ಯಾಸಿ ಮತ್ತು ಇತರ ಕಥೆಗಳು' ಸಂಕಲನಕ್ಕೆ ಅವರ ಸಮಕಾಲಿನ ಪ್ರಮುಖ ಕಥೆಗಾರರಲ್ಲೊಬ್ಬರಾದ ಮಾಸ್ತಿಯವರು ಮುನ್ನುಡಿ ಬರೆದಿದ್ದಾರೆ. ಈ ಮುನ್ನುಡಿಯಲ್ಲಿ ಅವರು ಕನ್ನಡ ಕಥನ ಪರಂಪರೆಗೆ ಸಂಬಂಧಿಸಿದಂತೆ ಕೆಲವು ಮಹತ್ವದ ವಿಚಾರಗಳನ್ನು ಮಂಡಿಸಿದ್ದಾರೆ. ಅವುಗಳಲ್ಲಿ ಕೆಲವು ಮಾತುಗಳು ಹೀಗಿವೆ:

"...ಯಾವುದಕ್ಕಾದರೂ ಕಣ್ಣು ಬೇಕು, ಯಾವುದಕ್ಕಾದರೂ ಕಲೆ ಬೇಕು. ಈ ಪುಸ್ತಕದ 'ದೆವ್ವದ ಕಾಟ', 'ಆರಾಣೆ ಮೂರು ಕಾಸು', 'ಯಾರೂ ಅರಿಯದ ವೀರ', 'ಪಾಪ ಎಳಗರು' ಕತೆಗಳಲ್ಲಿ ಕತೆಯ ಸಹಜವಾದ ಕಥನ ಪದ್ಧತಿಯು ಅದಕ್ಕೆ ಅಸಾಧಾರಣವಾದ ಒಂದು ಸೌಂದರ್ಯವನ್ನು ಕೊಟ್ಟಿದೆ. ನಮ್ಮ ಸಾಹಿತ್ಯದಲ್ಲಿ ಸಣ್ಣ ಕತೆ ಇದೀಗ ಬೆಳೆಯುತ್ತಿದೆ. ಅದು ಇದುವರೆಗೆ ಬೆಳೆಯುವುದರಲ್ಲಿ ಪುಟ್ಟಪ್ಪನವರಿಂದ ಬಹಳ ಕೆಲಸವಾಗಿದೆ. ಆದರೆ ಅದು ಇನ್ನೂ ಬೆಳೆಯುವುದರಲ್ಲಿ ಅವರಿಂದ ಆಗಬೇಕಾದ ಕೆಲಸವೂ ಬಹಳ ಇದೆ. ಅವರ ಕವನಗಳಿಗೆ ದೊರೆಯುವ ಹೆಚ್ಚಿನ ಮನ್ನಣೆಯಿಂದ ಪುಟ್ಟಪ್ಪನವರು ಕತೆ ಬರೆಯುವುದನ್ನು ಎಲ್ಲಾದರೂ ಕಡಿಮೆ ಮಾಡಿಯಾರು ಎಂದು ನನಗೆ ಒಮ್ಮೊಮ್ಮೆ ಶಂಕೆಯಾಗುವುದುಂಟು. ಅವರು ಹಾಗೆ ಮಾಡಿದರೆ ನಮ್ಮ ಸಾಹಿತ್ಯಕ್ಕೆ ಬಹಳ ನಷ್ಟವಾಗುವುದೆಂದು ನನ್ನ ಅಭಿಪ್ರಾಯ."[೨]

ಈ ಕಥೆಗಳಲ್ಲಿ ಮಾಸ್ತಿಯವರು ಕುವೆಂಪು ಅವರ 'ಸಹಜವಾದ ಕಥನ ಪದ್ಧತಿ'ಯನ್ನು ಗುರುತಿಸಿದ್ದಾರೆ. ಕಥೆಯ ವಸ್ತುವಿನ ಅಭಿವ್ಯಕ್ತಿಗೆ ಕುವೆಂಪು ಅವರ ಸಹಜ ಕಥನ ಪ್ರತಿಭೆಯು ಅಸಾಧಾರಣವಾದ ಸೌಂದರ್ಯವನ್ನು ನೀಡಿರುವುದನ್ನು ಮಾಸ್ತಿಯವರು ಸರಿಯಾಗಿಯೇ ಗುರುತಿಸಿದ್ದಾರೆ. ಆಗತಾನೆ ಬೆಳೆಯುತ್ತಿರುವ ಸಣ್ಣಕಥೆ ಪ್ರಕಾರಕ್ಕೆ ಕುವೆಂಪು ಅವರು ನೀಡಿರುವ ಕೊಡಿಗೆಯನ್ನು ಮಾಸ್ತಿಯವರು ಗುರುತಿಸಿ ಕುವೆಂಪು ಅವರಿಂದ ಇನ್ನೂ ಹೆಚ್ಚಿನ ಕಥನ ಸಾಹಿತ್ಯ ಸೃಷ್ಟಿಯಾಗಬೇಕೆಂದು ಆಶಿಸುತ್ತಾರೆ. ಅವರು ಹಾಗೆ ಮಾಡದಿದ್ದರೆ ಸಾಹಿತ್ಯಕ್ಕೆ ನಷ್ಟವಾಗುತ್ತದೆಂಬ ತಮ್ಮ ಅಭಿಪ್ರಾಯವನ್ನು ಪ್ರಾಮಾಣಿಕವಾಗಿ ಹೇಳುತ್ತಾರೆ. ಈ ಸಂಕಲನದ ಕಥೆಗಳು ಯಶೋದರಾ ಅವರಿಗೆ ಅವು ಬರೀ ಸಾಹಿತ್ಯಕ ರೂಪಕಗಳಾಗಿ ಮಾತ್ರ ಕಾಣುವುದಿಲ್ಲ. ಅವು ಸಮಾಜದ ನಿಲುಗನ್ನಡಿಯಾಗಿ ಕಾಣುತ್ತವೆ. ಅವರು ಹೀಗೆ ವಿವರಿಸುತ್ತಾರೆ:

"...ಈ ಎರಡೂ ಸಂಕಲನಗಳ ಕಥೆಗಳು ಬರಿಯ ಕಥೆಯಾಗಿರದೆ ಸಮಾಜದ ನಿಲುಗನ್ನಡಿಗಳಾಗಿವೆ. ಕತೆಗಾರರು ಒಡೆಯ; ಆಳು; ಇವರುಗಳ ಸಂಬಂಧದಿಂದ ಹಿಡಿದು ವೈದ್ಯರು; ರಾಜಕಾರಣಿಗಳೆಲ್ಲರ ಬಗ್ಗೆಯೂ ವಿಡಂಬಿಸಿದ್ದಾರೆ. ಹೀಗಾಗಿ ಕತೆಗಳು ಒಂದರ ನಕಲು ಇನ್ನೊಂದಾಗದೆ ಹೊಸ ಹೊಸ ವಿಚಾರಗಳತ್ತ ನಮ್ಮ ದೃಷ್ಟಿಯನ್ನು ಹರಿಸಲು ಸಹಾಯ ಮಾಡುತ್ತವೆ. ಅಲ್ಲದೆ ಬಹುಮಟ್ಟಿಗೆ ಕಥೆಗಳಲ್ಲಿ ಪ್ರಾದೇಶಿಕತೆ ತುಂಬಿದ್ದರೂ ಅವು ಕಾಲ; ದೇಶವನ್ನೂ

ಮೀರಿನಿಲ್ಲುತ್ತವೆ. ಒಟ್ಟಾರೆ, ಕುವೆಂಪುರವರು ಅಂದಿನ, ತಾವು ಕಂಡುಂಡ ಅನುಭವಗಳನ್ನು ಅಭಿವ್ಯಕ್ತಪಡಿಸಿದ್ದರೂ ಅವು ಇಂದಿಗೂ, ಮುಂದೆಯೂ ಆಗುತ್ತಿರುವ, ಆಗುವ ಸತ್ಯಸ್ಯಸತ್ಯ ಸ್ಥಿತಿಯನ್ನೇ ಸೂಚಿಸುತ್ತವೆ ಎಂಬುದಂತೂ ಸ್ಪಷ್ಟ."[೪] ಎಂದು ಯಶೋಧರಾ ಅವರು ಅಭಿಪ್ರಾಯ ಪಡುತ್ತಾರೆ. ಪ್ರಾದೇಶಿಕತೆ ಈ ಕಥೆಗಳಲ್ಲಿ ಗಾಢವಾಗಿದ್ದರೂ ಅವು ಕಾಲ, ದೇಶವನ್ನು ಮೀರುವ ಗುಣ ಹೊಂದಿವೆ ಎಂದು ಹೇಳುವ ಅವರ ಮಾತಿನಲ್ಲಿ ಯಾವುದೇ ಉತ್ಪ್ರೇಕ್ಷೆ ಇಲ್ಲ. ಪ್ರೀತಿ, ಜೀತ, ಮತಾಂತರ - ಇಂತಹ ವಸ್ತುಗಳು ಕುವೆಂಪು ಅವರ ಪರಿಸರವನ್ನೂ ದಾಟಿ ರಾಷ್ಟ್ರೀಯ ವಸ್ತುಗಳಾಗಿ ಪರಿಣಮಿಸುವುದನ್ನು ಅವರಲ್ಲಿ ಗುರುತಿಸಬಹುದು.

ಕುವೆಂಪು ಅವರ ಕಥೆಗಳಲ್ಲಿ ನಿಸರ್ಗದ ಚೆಲುವು, ಕಾವ್ಯಗುಣ, ಆವರಣ ನಿರ್ಮಾಣ, ವಸ್ತುವೈವಿಧ್ಯತೆ, ಕಲಾತ್ಮಕತೆ ಹಾಗೂ ಲೋಕಪ್ರಜ್ಞೆಯನ್ನು ಎಚ್.ಜೆ. ಲಕ್ಕಪ್ಪಗೌಡರು ಸಮರ್ಥವಾಗಿ ವಿಶ್ಲೇಷಿಸಿ ಹೀಗೆ ಗುರುತಿಸಿದ್ದಾರೆ:

"ಕುವೆಂಪು ಅವರ ಕತೆಗಳಲ್ಲಿನ ಮತ್ತೊಂದು ವಿಶೇಷ ಮಹತ್ವದ ಗುಣ, ಕಾವ್ಯತ್ವ. ಕತೆಗಳ ಪರಿಸರಣವನ್ನು ನಿರ್ಮಿಸುವಾಗ, ಅಲ್ಲಿಯ ನಿಸರ್ಗದ ಚೆಲುವನ್ನು ವರ್ಣಿಸುವಾಗ, ಪಾತ್ರ ಮನೋಧರ್ಮದ ಸೂಕ್ಷ್ಮ ಭಾವಗಳನ್ನು ಬಣ್ಣಿಸುವಾಗ ಅವರ ಕತೆ ಕಾವ್ಯ ವಿಮಾನವನ್ನೇರಿ ಆನಂದಯಾನ ಮಾಡುತ್ತದೆ. ಸಂಗೀತ ಸಂಗಿಯಾಗಿ ಲಲಿತಪ್ರಾಸ ವೈಭವದಿಂದ ಮೊರೆಯುತ್ತದೆ, ಮೋಹಕ ವರ್ಣ ಚಿತ್ರವಾಗಿ ಮೆರೆಯುತ್ತದೆ. ಹಲವು ಕತೆಗಳ ಕಾರ್ಯರಂಗ ಸೌಂದರ್ಯದ ಸೋನೆಗರೆಯುವ ಮಲೆನಾಡಾದುದರಿಂದ ಆ ಲಾವಣ್ಯಮಯ ಪ್ರಕೃತಿಯ ಲೀಲಾ ವಿಲಾಸಗಳ ರಸಚಿತ್ರಗಳನ್ನು ಕೊಡುವಾಗ ಸಹಜವಾಗಿಯೇ ಕವಿಯ ಪ್ರತಿಭೆಗೆ ತೌರಿಗೆ ಹೊರಟ ಹೆಣ್ಣು ಮಗಳ ಸಂಭ್ರಮಾನಂದಗಳ ರೆಕ್ಕೆ ಮೂಡುತ್ತದೆ. ಆದರೂ ಕತೆಯ ಅಂತ:ಸೂತ್ರಗಳಾಗಿ ಧ್ವನಿರಮ್ಯವಾಗಿ ಈ ವರ್ಣನೆಗಳು ಬರುತ್ತವೆಯೇ ಹೊರತು ಕಲೆಗೆ ಎರವಾಗುವ ಬಹಿರಂಗದ ಅನಾವಶ್ಯಕ ಹೊರೆಯಾಗುವುದಿಲ್ಲವೆನ್ನುವುದೇ ಇವುಗಳ ವೈಶಿಷ್ಟ್ಯವಾಗಿದೆ."[೫]

"...ಕುವೆಂಪು ಅವರ ಕತೆಗಳಲ್ಲಿ, ಸಂಖ್ಯೆ ಕಡಿಮೆಯಾದರು, ವಸ್ತು ವೈವಿಧ್ಯವಿದೆ, ವರ್ಣನಾ ವೈವಿಧ್ಯವಿದೆ, ತಂತ್ರ ವೈವಿಧ್ಯವಿದೆ, ಪ್ರತಿಮಾ ವೈವಿಧ್ಯವಿದೆ, ನಿರೂಪಣಾ ವೈವಿಧ್ಯವಿದೆ, ರಸವೈವಿಧ್ಯವಿದೆ, ಮೇಲಾಗಿ ಎಲ್ಲ ಕತೆಗಳ ಅಂತರಾಳದಲ್ಲೂ ಅಮೃತಶಕ್ತಿಯಾಗಿ ಪ್ರವಹಿಸುತ್ತಿರುವ ಅನನ್ಯ ಸಾಧಾರಣವಾದ ಅಗಾಧವಾದ ಲೋಕ ಪ್ರಜ್ಞೆಯಿದೆ; ನಿರ್ಮತ್ಸರಶೀಲವಾದ ಕಲಾತ್ಮಕ ಸಮತೋಲನದ ವಿಶಿಷ್ಟ ಸೌಂದರ್ಯ ದೃಷ್ಟಿಯಿದೆ; ಇವುಗಳೆಲ್ಲವನ್ನೂ ಜೀವಕಳೆಯಿಂದ ಕುಣಿಸಿ ಮೆರೆಸಬಲ್ಲ ಮಾಂತ್ರಿಕ ಅಭಿವ್ಯಕ್ತಿ ಶಕ್ತಿಯಿದೆ."[೬]

ಕನ್ನಡದ ಹಿರಿಯ ವಿದ್ವಾಂಸರಾದ ಎಸ್.ವಿ. ಪರಮೇಶ್ವರಭಟರು 'ಸಂನ್ಯಾಸಿ ಮತ್ತು ಇತರ ಕಥೆಗಳು' ಸಂಕಲನವನ್ನು ವಿಮರ್ಶೆ ಮಾಡುತ್ತಾ ಕೆಲವು ಮೌಲಿಕವಾದ ವಿಚಾರಗಳನ್ನು ಹೇಳಿದ್ದಾರೆ:

ಅಲ್ಲಲ್ಲಿ ಗದ್ಯದಲ್ಲಿ ಹದುಗಿ ಭಾವ ಪ್ರಕಾಶನಕ್ಕೆ ಅರ್ಥಸ್ಪಷ್ಟತೆಗೆ ನೆರವು ನೀಡುತ್ತಿರುವುದರಿಂದ ಶೈಲಿ ಕಾಂತಿಯುಕ್ತವಾಗಿದೆ, ಸತ್ವಪೂರ್ಣವಾಗಿದೆ. ಹಾಸ್ಯವನ್ನು ಗಾಂಭೀರ್ಯವನ್ನು ಬರವಣಿಗೆಯಲ್ಲಿ ಸೊಗಸಾಗಿ ಈ ಕತೆಗಾರರು ಪ್ರಕಟಪಡಿಸಿದ್ದಾರೆ. ವಸ್ತುವಿಗೆ ಅನುಗುಣವಾದ ನಿರೂಪಣಾ ಶೈಲಿ ಇಲ್ಲಿ ಇದೆ. ಕಥೆಗಳ ಆರಂಭ, ಬೆಳವಣಿಗೆ, ಮುಕ್ತಾಯ ಇವು ಕಲಾತ್ಮಕವಾಗಿ ಬಂದಿದೆ. ಕವಿಯ ಪ್ರಪಂಚ ಜ್ಞಾನ ಮಾನವ ಸ್ವಭಾವದ ವರ್ಣನೆಯಲ್ಲಿ ಎದ್ದು ಕಾಣುತ್ತದೆ. ಜನದ ಬಾಳುವೆಯನ್ನು ಕಂಡು ಕೇಳಿ ತಿಳಿದು ನುಡಿಯುವ ಹಿರಿಮೆ ಇಲ್ಲಿದೆ."[೭]

ಹೀಗೆ ಭಟ್ಟರು ಕುವೆಂಪು ಅವರ ಹಾಸ್ಯಪ್ರಜ್ಞೆ, ಕಲಾಪ್ರಜ್ಞೆ ಮತ್ತು ನಿರೂಪಣಾ ಪ್ರಧಾನವಾದ ಶೈಲಿಯನ್ನು ಗುರುತಿಸಿದ್ದಾರೆ

ಕುವೆಂಪು ಅವರ ಹೆಚ್ಚಿನ ಕಥೆಗಳು ಪ್ರಕೃತಿಯ ವರ್ಣನೆಯ ಪ್ರಧಾನವಾದರೂ ಪ್ರಕೃತಿಯು ಕಥೆಯ ಓಟಕ್ಕೆ ಕಥೆಯ ಭಾಷೆಗೆ ಅದು ಭಂಗಬರುವುದಿಲ್ಲವೆಂದು ವಿಮರ್ಶಕರೊಬ್ಬರು ಪಡುವ ಅಭಿಪ್ರಾಯ ಉಚಿತದುವಾಗಿದೆ:

"ಹತ್ತಕ್ಕಿಂತಲೂ ಹೆಚ್ಚಿನ ಕಥೆಗಳಲ್ಲಿ ಕಾಣಿಸುವ ನಿಸರ್ಗ ವರ್ಣನೆ, ಸಂದರ್ಭೋಚಿತವಾಗಿದ್ದು ಕಥೆಗಳ ಸತ್ವವನ್ನು ಹೆಚ್ಚಿಸಿದೆ. ಕಥಾಭಾಷೆ ಎಲ್ಲು ತೊಡಕಾಗಿ ತೋರದೆ, ಭಾವ, ಅರ್ಥ ಸಂದರ್ಭಗಳ ವಿಶದೀಕರಣಕ್ಕಾಗಿ ಕುವೆಂಪು ಅತ್ಯಂತ ಶಕ್ತಿಯುತವಾಗಿ, ಔಚಿತ್ಯ ಪೂರ್ಣವಾಗಿ, ಪರಿಣಾಮಕಾರಿಯಾಗಿ ಭಾಷೆಯನ್ನು ದುಡಿಸಿಕೊಂಡದ್ದನ್ನು ಅವರ ಎಲ್ಲ ಕಥೆಗಳಲ್ಲೂ ಕಾಣಬಹುದಾಗಿದೆ."[೮] ಎಂಬ ಮಾತು ಅರ್ಥಪೂರ್ಣವಾಗಿದೆ. ಕುವೆಂಪು ಅವರ ಕಥನದ ಭಾಷೆಯು ಓದುಗರನ್ನು ಮತ್ತೆ ಮತ್ತೆ ಆಕರ್ಷಿಸುತ್ತದೆ. ಈ ಆಕರ್ಷಕ ಗುಣ ಅವರ ಭಾಷೆಗೆ ಸಹಜವಾಗಿ ಲಭ್ಯವಾಗಿದೆ. ವಿಮರ್ಶಕರಾದ ಶ್ರೀಕಂಠ ಕೂಡಿಗೆ ಅವರು ಕುವೆಂಪು ಅವರ ಕಥೆಗಳನ್ನು ವಸ್ತುವಿನ ದೃಷ್ಟಿಯಿಂದ ಎರಡು ಭಾಗ ಮಾಡಿದ್ದಾರೆ.

"ಪುಟ್ಟಪ್ಪನವರ ಕಥೆಗಳನ್ನು ವಸ್ತುವಿನ ದೃಷ್ಟಿಯಿಂದ ಹೀಗೆ ವಿಭಜಿಸಬಹುದು. ದೈವಿಕ ಮತ್ತು ಭ್ರಾಮಕ ಪ್ರೇಮ; ಸ್ವಾಮಿನಿಷ್ಠೆ ಮತ್ತು ತ್ಯಾಗ; ಧನದಾಹ ಇತ್ಯಾದಿ. ಜೀವನ ವ್ಯಾಖ್ಯಾನ (Life Interpretation) ಒಂದು ಮುಖ್ಯ ಧೋರಣೆಯಾಗಿದೆಯೇ ಹೊರತು ಜೀವನ ವಿರೋಧಿ ನಿಲುವುಗಳು ಅವುಗಳಲ್ಲಿ ಇಲ್ಲ."[೯] ಅವರ ಈ ವಿಭಾಗಕ್ರಮ ಏನೇ ಇರಲಿ, ಕುವೆಂಪು ಅವರ ಕೃತಿಗಳು ಅವರೇ ಹೇಳುವ ಹಾಗೆ ಜೀವಪರ ನೆಲೆಯಿಂದ ಕೂಡಿವೆ ಎಂಬುದಂತು ಸತ್ಯ.

ಕುವೆಂಪು ಅವರ 'ಸುಂದರ ಗದ್ಯ ಕಥನ ಶೈಲಿ'ಯ ಬಗ್ಗೆ ದೇಜಗೌ ಅವರು ವಿವರಿಸುತ್ತಾ, ಕುವೆಂಪು ಅವರ ಶೈಲಿಯಿಂದ ಕನ್ನಡ ಭಾಷೆಯ ಸತ್ವ ವೃದ್ಧಿಗೊಂಡಿತೆಂದು ಹೇಳುತ್ತಾರೆ:

"ವೈವಿಧ್ಯಮಯ ಶೈಲಿಯಿಂದ ಕನ್ನಡ ಭಾಷೆಯ ಸತ್ವವನ್ನು ವೃದ್ಧಿಗೊಳಿಸಿರುವ, ಅದರ ಸರ್ವಾಂಗ ಸೌಂದರ್ಯವನ್ನು ಶ್ರೀಮಂತಗೊಳಿಸಿರುವ ಸಾಹಿತಿಗಳಲ್ಲಿ ಕುವೆಂಪು ಅಗ್ರಗಣ್ಯರು. ವಿಮರ್ಶೆ, ಪ್ರಬಂಧ, ಭಾವಗೀತೆ, ಮಹಾಕಾವ್ಯ ಸಣ್ಣಕಥೆ, ಮಹಾಕಾದಂಬರಿ, ಜೀವನ ಚರಿತ್ರೆ, ನಾಟಕ ಈ ಒಂದೊಂದು ಪ್ರಕಾರವೂ ಬಹುರೂಪದ ಶೈಲಿಯ ನಿರ್ಮಾಣಕ್ಕೆ ನಿಮಿತ್ತವಾಗಿವೆ. ಕ್ಲಿಷ್ಟಪದಗಳ ಭಾರವಿಲ್ಲದೆ, ಸತ್ತು ಬಳಸಿದ ಸುದೀರ್ಘ ವಾಕ್ಯಗಳ ಗೊಂದಲವಿಲ್ಲದೆ, ಗಗನ ವಿಹಾರಿಯಾದ ಕಾವ್ಯಶೈಲಿಯ ತೊಡಕಿಲ್ಲದೆ, ಪಾತ್ರ ಘಟನೆ ಸನ್ನಿವೇಶ ವರ್ಣನೆ ಹಾಗೂ ಭಾವಲೋಚನೆಗಳಿಗೆ ತಕ್ಕಂತೆ ಹೊಂದಿಕೊಳ್ಳುವ ಲಲಿತವೂ ಸುಭಗವೂ ಆದ ಸುಂದರ ಗದ್ಯ ಕಥನ ಶೈಲಿ ಎಲ್ಲ ಕಥೆಗಳಲ್ಲಿಯೂ ರಂಜಿಸುತ್ತದೆ,"[೧೦] ಹೀಗೆ ಕುವೆಂಪು ಭಾಷೆಯು ವಸ್ತುವಿಗನುಗುಣವಾಗಿ ರೂಪುಗೊಂಡಿರುವುದನ್ನು ದೇಜಗೌರವರು ಸರಿಯಾಗಿಯೇ ಗುರುತಿಸಿದ್ದಾರೆ. ವೇಣುಗೋಪಾಲ ಅವರು ಕುವೆಂಪು ಅವರ ಕಥೆಗಳನ್ನು ಕುರಿತು ತೆಗೆದುಕೊಳ್ಳುವ ನಿರ್ಣಯ ವಿಮರ್ಶಾತ್ಮಕವಾಗಿಯೇ ವ್ಯಕ್ತವಾಗಿದೆ:

"ಶ್ರೀ ಕುವೆಂಪು ಅವರ ಎರಡು ಕಥಾ ಸಂಕಲನಗಳ ಪರಿಶೀಲನದಿಂದ ಅವರ ಪ್ರತಿಭೆಯ ಒಂದು ಮುಖ ಸ್ವಲ್ಪ ಮಟ್ಟಿಗಾದರೂ ಪರಿಚಯವಾದೀತು. ಗಂಭೀರ - ಪರಿಶುದ್ಧ ಎಂಬುದು ಎದ್ದು ತೋರುವ ಗುಣಗಳು, ನಸುವ್ಯಂಗ್ಯ, ಆರೋಗ್ಯಕರ ಪರಿಹಾಸ, ಸರಳತೆ ಅಲ್ಲಿಯ ಸ್ವಾದಿಷ್ಟ ವ್ಯಂಜನಗಳು, ತೀವ್ರ ಸಾಮಾಜಿಕ ಕಳಕಳಿ, ಸಾಮಾನ್ಯನ ಹೃದಯ ಸಂಪತ್ತು, ಮಾನವೀಯ ಅನುಕಂಪ ಅಲ್ಲಿ ಹಾಸುಹೊಕ್ಕಾದ ನಮುನಿ ಧಮನಿಯಲ್ಲಿ ಹರಿಯುತ್ತಿರುವ ಜೀವವಾಹಿನಿ. ಮಹಾಕವಿಗೆ ಉಚಿತವಾದ ಸಾಲಂಕೃತ ಶೈಲಿ ಸಣ್ಣಕತೆಗೆ ಸ್ವಲ್ಪ ಭಾರವಾಯಿತು ಎಂದು ಒಮ್ಮೊಮ್ಮೆ ಎನಿಸಿದರೂ ಸರಸ ಸಂಭಾಷಣಾ ಸಲೀಲತೆಯಿಂದ ಈ ಕೊರತೆಯನ್ನು ಅವರು ಬಹುಮಟ್ಟಿಗೆ ನೀಗಿಕೊಂಡು ಬಿಡುತ್ತಾರೆ. ಆದರ್ಶದ ಎತ್ತರ, ಅವರನ್ನು ಮಾನವೀಯ ದೌರ್ಬಲ್ಯಗಳತ್ತ ಕುರುಡು ಮಾಡಿಲ್ಲ, ಸಾನುಕಂಪದಿಂದಲೇ ಅವುಗಳನ್ನು ಚಿತ್ರಿಸುತ್ತಾರೆ. ಆದರೆ ಮಾನವ ಶೋಷಣೆ, ಅದು ಯಾವ ಮುಖವನ್ನೇ ಹೊತ್ತು ಬರಲಿ, ಗುರುತಿಸಿ ಕಿಡಿಗಾರುತ್ತಾರೆ. ಆಗ ವ್ಯಂಗ್ಯದ ಹೂಬಾಣ ಕಟಕಿಯ ತ್ರಿಶೂಲವಾಗಿ ಬಿಡುತ್ತದೆ. ಸಾಮಾಜಿಕ ಕಳಕಳಿಯಿಂದ ಸದಾ ಮಿಡಿಯುವ ಈ ಕತೆಗಾರ ನಮ್ಮ ಕಾಲದ ವಿಶಿಷ್ಟ ಮಾನವತಾವಾದಿಯಾಗುತ್ತಾರೆ. ಅವರ ಸಾಹಿತ್ಯದ ಇತರ ಪ್ರಕಾರಗಳಲ್ಲಿ 'ಎದ್ದು ಕಾಣುವ' ಈ ಗುಣವೇ ಈ ಎರಡು ಸಂಕಲನಗಳ ಗಟ್ಟಿದನಿ."[೧೧] ಈ ಅಭಿಪ್ರಾಯವು ಅವರ ಒಟ್ಟು ಸಾಹಿತ್ಯದ ಬಗ್ಗೆಯೇ ಹೇಳುವ ಪ್ರತಿಕ್ರಿಯೆಯಾಗಿದೆ.

ಹೆಚ್ .ಕೆ. ಜಯದೇವ ಅವರು ಕುವೆಂಪು ಅವರ ಕಥೆಗಳನ್ನು ವಿಶ್ಲೇಷಿಸಿ ಹೊಸಗನ್ನಡ ಕಥೆಗಳ ಇತಿಹಾಸದಲ್ಲಿ ಅವುಗಳ ಸ್ಥಾನವನ್ನು ನಿರ್ದೇಶಿಸಿದ್ದಾರೆ:

"ಸಣ್ಣ ಕಥೆಗಳಲ್ಲಿ ವರ್ಣನೆ ಎಷ್ಟಿರಬೇಕು, ಏಕಿರಬೇಕು ಎನ್ನುವುದಕ್ಕೆ 'ಕುವೆಂಪು' ಅವರ ಕಥೆಗಳನ್ನೋದಬೇಕು. 'ಕುವೆಂಪು'ರವರಿಗಿನ್ನ ಮೊದಲು ನಿಸರ್ಗದ ಇಷ್ಟೊಂದು ವಿವರಗಳನ್ನು ಯಾರೂ ಸಣ್ಣಕಥೆಗಳಲ್ಲಿ ತಂದಿರಲಿಲ್ಲ. ಇಂತಹ ವರ್ಣನೆಗಳಿಂದ ಅವರ ಕಥೆಗಳಿಗೆ ಒಳ್ಳೆಯ ಮೆರಗು ಬಂದಿದೆ. 'ಕುವೆಂಪು'ರವರ ಸಣ್ಣಕಥೆಗಳ ಶ್ರೇಷ್ಠತೆಯಿರುವುದು ಅವು ಸಮಕಾಲೀನ ಜೀವನದ ಎಲ್ಲ ಅಂಶಗಳಿಗೂ ಪ್ರತಿಸ್ಪಂದಿಯಾದುವೆಂಬುದರಲ್ಲಿ. ನಿಸರ್ಗದ ಚೆಲುವ, ಆದರ್ಶಪ್ರಿಯತೆ, ಕಾಂತಿಯ ವೀರಭಾವ, ಆಧ್ಯಾತ್ಮಿಕತೆ ಮೊದಲಾದ ಎಲ್ಲ ವಿಷಯಗಳಿಗೂ ಅವರ ಸಣ್ಣಕಥೆಗಳು ಇಂಬುಕೊಟ್ಟಿವೆ. ಹೀಗಾಗಿ ಹೊಸಗನ್ನಡ ಸಣ್ಣಕಥೆಗಳ ಇತಿಹಾಸದಲ್ಲಿ ಅವರ ಸ್ಥಾನ ಭದ್ರಾವಾಗಿದೆಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ." [೧೨]

'ಸಣ್ಣಕಥೆ ಬರೆಯುವುದು ಬಹಳ ಕಷ್ಟದ ಕೆಲಸ. ಕಿರಿದರಲ್ಲಿ ಹಿರಿದಾದ ಭಾವಜ್ಞಾನ, ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯ" ಎಂದು ಬಿ.ಎಂ. ಶ್ರೀ. ಅವರು ಹೇಳಿದ್ದಾರೆ. ಹಾಗೆಯೇ 'ಸಣ್ಣಕಥೆ ಅಲ್ಪಜೀವಿಗಳ ಮಹಾಕಾವ್ಯ' ಎಂದು ರಂ.ಶ್ರೀ. ಮುಗಳಿ ಅವರು ಹೇಳಿರುವ ಈ ಮಾತುಗಳ ಸತ್ಯವನ್ನು ಕುವೆಂಪುರವರ ಕಥೆಗಳು ಹೊರಡಿಸುತ್ತವೆ. ಹೊಸಗನ್ನಡ ಸಣ್ಣ ಕಥಾಸಾಹಿತ್ಯದ ಚರಿತ್ರೆಯನ್ನು ಬರೆಯಲು ಹೊರಟವರಿಗೆ ಕುವೆಂಪು ಅವರ ಸಣ್ಣಕಥೆಗಳನ್ನು ಬಿಟ್ಟು ಬರೆಯಲು ಸಾಧ್ಯವೇ ಇಲ್ಲವೆಂಬ ತೀರ್ಮಾನಕ್ಕೆ ಯಾವುದೇ ರಿಯಾಯಿತಿ ಇಲ್ಲದೆ ಬರಬಹುದಾಗಿದೆ.

ಕುವೆಂಪು ಅವರ ಒಟ್ಟು ಸಾಹಿತ್ಯದ ದನಿಯೇ ಬದುಕಿನ ಅಖಂಡತೆಯನ್ನು ಭಾಷೆಯಲ್ಲಿ ಹಿಡಿಯವುದು. ಕಥೆಯಾಗಲೀ, ಪ್ರಬಂಧಗಳಾಗಲೀ, ಕಾದಂಬರಿಗಳಾಗಲೀ ಅಲ್ಲೆಲ್ಲಾ ತುಡಿಯುವುದು ಮಾನವೀಯತೆಯ ಸೃಷ್ಟಿ:

"ಲೋಕರೂಢಿಯ ದೃಷ್ಟಿಯಿಂದ ಎಷ್ಟೇ ಅಲ್ಪವಾದುದಾಗಿರಲಿ, ಎಷ್ಟೇ ಮಹತ್ತಾದುದಾಗರಲಿ, ಪ್ರತಿಯೊಂದು ವಸ್ತುವನ್ನು ಸನ್ನಿವೇಶವನ್ನು ವಿರಾಟ್ ದೃಷ್ಟಿಯಿಂದ ನೋಡಲೆಳಸುವುದು, ಅವರ ಒಂದು ವಿಶಿಷ್ಟತೆ. ಕಂತ್ರಿನಾಯಿ ನೊಣ ನುಂಗುತ್ತಿರುವುದಾಗಲಿ, ಹೇಂಟೆ ಮರಿಗಳಿಗೆ ಹುಳು ತಿನ್ನಿಸುತ್ತಿರುವದಾಗಲಿ, ಆ ದೃಷ್ಟಿಗೆ ಹೊರತಲ್ಲ, ಕಡೆಯಲ್ಲ, ಕೀಳಲ್ಲ. ತೀರ ಸಾಮಾನ್ಯ ಹಳ್ಳಿಗನೊಬ್ಬನ ಋಜತೆ, ಋಣ ತೀರಿಸಿ ಸಾಯಬೇಕೆಂಬ ದೃಢ ಸಂಕಲ್ಪ. ಎಂಥ ಪರಿಸ್ಥಿತಿಯಲ್ಲೂ ಸಮಾಜದ ಶಾಶ್ವತ ಮೌಲ್ಯಗಳಿಗೆ ಬಾಗಿ ನಡೆಯುವ ಮಾಹೇಶ್ವರ ನಿಷ್ಠೆ, ಇವುಗಳು ಅಣ್ಣಪ್ಪನ ವ್ಯಕ್ತಿತ್ವದ ಗುಣಗಳಾದರೆ, ಮಕ್ಕಳ ಮೇಲಿನ ಅವ್ಯಾಜ ಪ್ರೇಮ, ಹೃದಯದ ಆರ್ದ್ರತೆ ಹಾಗೂ ದುಡ್ಡಿನಿಂದ ಬಡವನಾದರೂ ಹೃದಯದಿಂದ ಶ್ರೀಮಂತನಾದ ಕತೆಗಾರ ಮಂಜಣ್ಣನ ಗುಣರತ್ನಗಳು. ಅವನು ಬಡವ ಎಂಬುದು ಯಾರಿಗೂ ಜ್ಞಾಪಕವಿಲ್ಲ. "ನಮಗೆಲ್ಲಾ ಬಲವಂತ ಮಾಡಿ, ಹೊಡೆದು ಊಟ ಮಾಡಿಸುತ್ತಿದ್ದರು. ಆದರೆ ಯಾರ ಅನುರೋಧವೂ ಇಲ್ಲದ ಮಂಜಣ್ಣನನ್ನು ಯಾರು ಹೊಡೆಯುತ್ತಿದ್ದರು?" ಎಂಬಲ್ಲಿ ಅವನ ದೀನ, ಸ್ನೇಹಹೀನ ಬಾಳುವೆಯ ಕರುಣಾಪೂರ್ಣರೇಖೆ ತನ್ನ ಗುರುತೆಳೆದು ಹೋಗುತ್ತದೆ. ಅವರು ಹಾಸ್ಯ ಚಿತ್ರಗಳನ್ನು ಕೊಡುವಂತೆಯೇ, ಸಮರ್ಥವಾದ ವ್ಯಕ್ತಿ ಚಿತ್ರಗಳನ್ನು ಅವರು ಕೊಡಬಲ್ಲರು. ಮಂಜಣ್ಣ ವ್ಯಕ್ತಿಚಿತ್ರ - "ಅವನ ಗಡ್ಡ ಬಯಲು ಸೀಮೆಯ ಗುಡ್ಡಗಳಲ್ಲಿ ಬೆಳೆಯುವ ವಿರಳ ಪೊದೆಗಳಂತೆ ಇತ್ತು. ಗಡ್ಡ ಉದ್ದವಾದ ಕೂಡಲೇ ತುದಿಯನ್ನೊಟ್ಟುಗೂಡಿಸಿ, ಕುಡುಗೋಲಿನಿಂದ ಚರಚರನೆ ಕೂಯ್ಯುತ್ತಿದ್ದ. ಬೆಳೆದು ಹಣ್ಣಾದ ಬತ್ತದ ಪೈರನ್ನು ರಾಶಿಮಾಡುವಂತೆ." ಇದಕ್ಕಿಂತಲೂ ಮೂರ್ತಿಮತ್ತಾದ ಆಚಾರಿಯ ವ್ಯಕ್ತಿ ಚಿತ್ರವನ್ನು ಪುಸ್ತಕವನ್ನೋದಿಯೆ ಗ್ರಹಿಸಬೇಕು. ಕುವೆಂಪು ಅವರೇ ಹೇಳಿದಂತೆ "ನೆನಹು ಬಾಳಿನ ಬುತ್ತಿ" ಇದುವರೆಗೂ ಆ ಬುತ್ತಿಯೊಳಗಿನ ಸವಿಭೋಜನದ ತುತ್ತುಗಳನ್ನು ರುಚಿ ನೋಡಿದೆವು. ಇಂಥವನ್ನು ಓದಿದಾಗ ಎಲ್ಲರೂ ತಮ್ಮ ತಮ್ಮ ಹಳ್ಳಿಯ ಬಾಲ್ಯದ ದಿನನಿತ್ಯದ ಜೀವನವನ್ನು ಸ್ಮರಿಸಿಕೊಳ್ಳುವುದಿರಲಿ, ತಮ್ಮ ಈಗಿನ ವಯಸ್ಸನ್ನು ಪರಿಸರವನ್ನು ಕ್ಷಣಕಾಲ ಮರೆತು, ಈ ಪರಿವೇಷವನ್ನು ತೆಗೆದಿಟ್ಟು, ಅಲ್ಲಿಯ ವ್ಯಕ್ತಿಗಳಾಗಿ ಬಾಳಿ, ಆ ಜೀವನವನ್ನು ಬದುಕಿ ಬರುತ್ತಾರೆ. ಈ ಹರಟೆಗಳು ಬೇಜಾರಿಗೆ ಭೇಷಜ ಮಾತ್ರವಲ್ಲ; ಮನ: ಪ್ರಫುಲ್ಲತೆಗೆ ಟಾನಿಕ್ಕಿನಂತಿರುವ ರಸ ಚಿತ್ರಗಳೂ ಆಗಿವೆ."[೨೨] ಹೀಗೆ ಲಕ್ಷ್ಮೀನಾರಾಯಣರು ಕುವೆಂಪು ಅವರ 'ಮಲೆನಾಡಿನ ಚಿತ್ರಗಳಲ್ಲಿ' ತುಡಿಯುವ ಜೀವನ ಕ್ರಮವನ್ನು ಹೀಗೆ ಗ್ರಹಿಸಿ ವಿಶ್ಲೇಷಿಸಿದ್ದಾರೆ. ಸಿ.ಪಿ.ಕೃಷ್ಣಕುಮಾರ್ ಅವರು ಇದರ ಬಗ್ಗೆ ವಿಮರ್ಶಿಸುತ್ತಾ ಈ ರೀತಿ ಅಭಿಪ್ರಾಯಪಡುತ್ತಾರೆ:

"ನೆನಹು ಬಾಳಿನ ಬುತ್ತಿ; ಅನುಭವಗಳ ಅಕ್ಷಯ ನಿಧಿ" (ಮುನ್ನುಡಿ, ಪುಟ ೩) ಎನ್ನುವ ಕುವೆಂಪು, ತಮ್ಮ ಪೂರ್ವಾನುಭವಗಳ ಸ್ಮೃತಿ ಚಿತ್ರಗಳನ್ನು ಇಲ್ಲಿ ಅತ್ಯಂತ ಸ್ವಾರಸ್ಯಪೂರ್ಣವಾಗಿ, ಕುತೂಹಲ ಪ್ರಚೋದಕವಾಗಿ ಬಿಡಿಸಿದ್ದಾರೆ. ಒಂದೊಂದು ಚಿತ್ರವೂ ಒಂದೊಂದು ರಸಖಂಡ. ಇವುಗಳ ರಚನೆಯ ಹಿನ್ನೆಲೆಯನ್ನು ಲೇಖಕರೇ ಹೀಗೆ ಹೇಳಿಕೊಂಡಿದ್ದಾರೆ: "ಮಲೆನಾಡನ್ನು ಬಿಟ್ಟು ಬಂದು ಬಯಲು ಸೀಮೆಯಲ್ಲಿದ್ದಾಗ ನನ್ನ ಮನಸ್ಸು ಆಗಾಗ್ಗೆ ತವರು ನಾಡಿನ ಚೆಲುವು ಗೆಲುವುಗಳನ್ನೂ ದೃಶ್ಯಗಳನ್ನೂ ವ್ಯಕ್ತಿಗಳನ್ನೂ ಸನ್ನಿವೇಶಗಳನ್ನೂ ನೆನೆದು ಸುಖಪಡುತ್ತದೆ. ನನ್ನ

ಆಪ್ತಮಿತ್ರರಿಗೆ ಅವುಗಳನ್ನು ಹೇಳಿ ನಲಿಯುತ್ತದೆ. ಅದರ ಪರಿಣಾಮವೇ ಈ 'ಮಲೆನಾಡಿನ ಚಿತ್ರಗಳು'." [೧೪] ಎಂದು ಸಿ.ಪಿ. ಕೃಷ್ಣಕುಮಾರ್ ಅವರು ಕುವೆಂಪು ಅವರ ಮಾತುಗಳಿಂದಲೇ ಮಲೆನಾಡಿನ ಚಿತ್ರಗಳ ವೈಶಿಷ್ಟ್ಯವನ್ನು ಅಳೆಯುತ್ತಾರೆ.

ಕುವೆಂಪು ಅವರೇ ತಮ್ಮ 'ಮಲೆನಾಡಿನ ಚಿತ್ರಗಳು' ಕೃತಿಯ ಮುನ್ನುಡಿಯಲ್ಲಿ ಅವುಗಳ ಮಹತ್ವ ಹಾಗೂ ಅನನ್ಯತೆಯನ್ನು ಹೀಗೆ ವಿವರಿಸಿದ್ದಾರೆ:

"ನೆನಹು ಬಾಳಿನ ಬುತ್ತಿ; ಅನುಭವಗಳ ಅಕ್ಷಯ ನಿಧಿ. ಜೀವನಯಾತ್ರೆ ಬೇಸರವಾದಾಗ, ಜೀವನದಲ್ಲಿ ನವೀನತೆ ಮೊಳೆಯದೆ ಮಂಕು ಕವಿದಾಗ, ಜೀವನದಲ್ಲಿ ಬಿಸಿಲ ಬೇಗೆ ಹೆಚ್ಚಿ ಬಳಲಿದಾಗ, ಹಾದಿಯ ಬಳಿ ದಟ್ಟವಾಗಿ ಸೊಂಪಿಡಿದು ಬೆಳೆದ ತಣ್ಣೆಳಲಿನ ತಂಪಿನಲ್ಲಿ, ಮೊರೆದು ಹರಿಯುವ ತೊರೆಯ ಮಂಜುಳನಾದವನ್ನು ಆಲಿಸುತ್ತಾ ಆ ಬುತ್ತಿಯನ್ನು ಬಿಚ್ಚಿ ಉಣಬಹುದು; ತಣಿಯಬಹುದು; ದಣಿವಾರಿಸಿಕೊಳ್ಳಬಹುದು. ನಮಗೆ ಬೇಕಾದವರು, ನಮ್ಮ ಜೀವನ ಅನುಭವಗಳಲ್ಲಿ ಒಲ್ಮೆಯುಳ್ಳವರು ಬಳಿಯಿದ್ದರೆ ಅವರಿಗೂ ಆ ಬುತ್ತಿಯ ಪರಿಚಯ ಮಾಡಿಕೊಟ್ಟು, ಒಂಟಿಯಾಗಿ ಅನುಭವಿಸುವ ಸುಖವನ್ನು ಇಮ್ಮಡಿಯಾಗಿ ಅನುಭವಿಸಬಹುದು."(ಪುಟ ೫) [೧೫]

ಈ ಉದ್ಧರಣೆಯಿಂದ ವ್ಯಕ್ತಿಯ ವೈಯಕ್ತಿಕ ಸುಖಕ್ಕಿಂತ ಸಾಮೂಹಿಕವಾಗಿ ಅನುಭವಿಸುವ ಸುಖ ಸಂತೋಷವೇ ದೊಡ್ಡದು ಎಂಬ ತಿಳುವಳಿಕೆ ವ್ಯಕ್ತವಾಗುತ್ತದೆ. ಮತ್ತೆ ಅವರು ಮುಂದುವರಿದು ಹೀಗೆ ಹೇಳುತ್ತಾರೆ:

"ಒಂದು ದಿನ ಸಾಯಂಕಾಲ ನಾನು ಶ್ರೀಮಾನ್ ವೆಂಕಣ್ಣಯ್ಯನವರೊಡನೆ ಕುಕ್ಕನಹಳ್ಳಿಯ ಕೆರೆಏರಿಯ ಮೇಲೆ ವಾಯು ವಿಹಾರಕ್ಕಾಗಿ ಹೋಗಿದ್ದಾಗ ಯಾವುದೋ ಮಾತು ಬಂದು ಮಲೆನಾಡಿನ ಕೆಲವು ಅನುಭವಗಳನ್ನು ಹೇಳ ತೊಡಗಿದೆ. ಜೊತೆಯಲ್ಲಿ ತೀ.ನಂ.ಶ್ರೀ, ಡಿ.ಎಲ್.ಎನ್. ಮೊದಲಾದ ಮಿತ್ರರೂ ಇದ್ದರು. ನಾವೆಲ್ಲರೂ ಹುಲುಸಾಗಿ ಹಸರು ಹೊಮ್ಮಿ ಬೈಗುಗಂಪಿನ ಬಿಸಿನಲ್ಲಿ ಸುಮನೋಹರವಾಗಿದ್ದ ಕೆರೆಯಂಚಿನ ಬಯಲಿನಲ್ಲಿ ಕುಳಿತಿದ್ದೆವು. ತಂಗಾಳಿ ಸುಖದಾಯಕವಾಗಿ ತೀಡುತ್ತಿತ್ತು. ಬಹಳ ಹೊತ್ತು ಕತೆ ಹೇಳಿದೆ. ಅವರೂ ಸಾವಧಾನದಿಂದ, ಅದಕ್ಕಿಂತಲೂ ಹೆಚ್ಚಾಗಿ ವಿಶ್ವಾಸದಿಂದ ಆಲಿಸಿದವರು ಎಲ್ಲ ಮುಗಿದ ಮೇಲೆ ವೆಂಕಣ್ಣಯ್ಯನವರು ಆ ಅನುಭವಗಳನ್ನು ಬರೆದರೆ ಚೆನ್ನಾಗಿರುತ್ತದೆ ಎಂದು ಸೂಚನೆ ಕೊಟ್ಟರು." (ಪುಟ xiv)[೧೬].

ಮಲೆನಾಡಿನಲ್ಲಿ ಕುವೆಂಪು ತಾವು ಅನುಭವಿಸಿದ, ತಮಗೆ ಆದ ಅನುಭವಗಳನ್ನು ಕನ್ನಡದ ಮಹಾನ್ ಚೇತನಗಳಾದ ವೆಂಕಣ್ಣಯ್ಯ, ಡಿಎಲ್‌ಎನ್, ತೀನಂಶ್ರೀ, ಇವರ ಬಳಿ ಹೇಳಿಕೊಂಡಾಗ ಅವರಲ್ಲಿ ವೆಂಕಣ್ಣಯ್ಯನವರು ಆ ಅನುಭವಗಳನ್ನು ಬರೆಯಲು ಸೂಚಿಸಿದರು. ಅದಕ್ಕಾಗಿ ತಾವು ಬರೆದೆ ಎಂದು ವಿವರಿಸುತ್ತಾರೆ. ತಮ್ಮ ಅನುಭವಗಳನ್ನು ಸಮಾನ ಮನಸ್ಸಿನ ವ್ಯಕ್ತಿಗಳ ಜೊತೆ ಹಂಚಿಕೊಳ್ಳುವ ಅಖಂಡ ದೃಷ್ಟಿ ಅವರಲ್ಲಿ ವ್ಯಕ್ತವಾಗುವುದನ್ನು ಗುರುತಿಸಬಹುದು. ಒಟ್ಟಾರೆ ಕುವೆಂಪು ಅವರ ಸಣ್ಣ ಕಥಾಸಾಹಿತ್ಯ ಮತ್ತು ಮಲೆನಾಡಿನ ಚಿತ್ರಗಳಲ್ಲಿ ವ್ಯಕ್ತವಾಗುವ ಕಥನದ ಪರಂಪರೆಯು ಪ್ರಾಚೀನ ಕನ್ನಡ ಕಥನ ಪರಂಪರೆಯ ಮುಂದುವರಿಕೆಯೇ ಆಗಿದೆ. ಕಥೆ ಮತ್ತು ಚಿತ್ರಗಳ ಮೂಲಕ ಬಿಡಿ ಬಿಡಿ ಪ್ರಯೋಗಗಳನ್ನು ಮಾಡಿ ಮುಂದೆ ಕಥನ ಪರಂಪರೆ ಸೃಷ್ಟಿಗೆ ಕಾರಣರಾಗಿದ್ದಾರೆ. ಆಧುನಿಕ ಇಂಗ್ಲಿಶ್ ಶಿಕ್ಷಣ ಮತ್ತು ವಸಾಹತು ಸಂದರ್ಭದಲ್ಲಿ ತೀವ್ರಗತಿಯಲ್ಲಿ ನಡೆದ ಮತಾಂತರದ ಪ್ರಕ್ರಿಯೆ ಇವೆರಡರ ಪರಿಣಾಮದಿಂದ ಹಳೆಯ ಕಥನ ಪರಂಪರೆಗೆ ಹೊಸ ಅರ್ಥವನ್ನು ಜೋಡಿಸಲಾಗಿದೆ. ವಸ್ತು, ಭಾಷೆ, ನಿರೂಪಣೆ ಎಲ್ಲದರಲ್ಲೂ ಕುವೆಂಪು ಆಧುನಿಕ ಕನ್ನಡ ಕಥನ ಪರಂಪರೆಗೆ ವಿಶಿಷ್ಟ ಅಂಶಗಳನ್ನು ಸೇರಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ.

■

# ಅಡಿಟಿಪ್ಪಣಿ

೧. ಕುವೆಂಪು, ಸಂನ್ಯಾಸಿ ಮತ್ತು ಇತರ ಕಥೆಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೧, ಪು : ೫೪

೨. ಕುವೆಂಪು, ನನ್ನ ದೇವರು ಮತ್ತು ಇತರ ಕಥೆಗಳು, ಉದಯರವಿ ಪ್ರಕಾಶನ, ಮೈಸೂರು, ೧೯೯೭, ಪು : ೧೩ - ೧೪

೩. ಶ್ರೀನಿವಾಸ, ಮಾಸ್ತಿ, ಮುನ್ನುಡಿ, ಸಂನ್ಯಾಸಿ ಮತ್ತು ಇತರ ಕಥೆಗಳು, ಕಾವ್ಯಾಲಯ ಪ್ರಕಾಶನ, ಶಿವಮೊಗ್ಗ, ೧೯೩೬, ಪು : vi-vii

೪. ಯಶೋಧರಾ ಎಚ್.ಬಿ, ಕುವೆಂಪು ಕಥಾ ಸಂಕಲನಗಳು - ಒಂದು ನೋಟ, ಕುವೆಂಪು ಸಾಹಿತ್ಯ ಚಿಂತನ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ : ೧೦೦ - ೧೦೧

೫. ಲಕ್ಕಪ್ಪಗೌಡ ಎಚ್.ಜೆ, ಕುವೆಂಪು ಅವರ ಕಥೆಗಳು, ಕಥಾವಲೋಕನ, ಶೈನಿ ಪಬ್ಲಿಕೇಷನ್ಸ್, ಬೆಂಗಳೂರು, ೧೯೭೮, ಪು: ೧೧೪, ೧೨೦

೬. ..... ಅದೇ .....

೭. ಪರಮೇಶ್ವರ ಭಟ್ಟ ಎಸ್.ವಿ, ಸಂನ್ಯಾಸಿ ಮತ್ತು ಇತರ ಕಥೆಗಳು, ಉಡುಗೊರೆ, ಪ.ವಿ. ಚಂದ್ರಶೇಖರ, ಜ.ಶಿ. ಪರಮಶಿವಮೂರ್ತಿ (ಸಂ), ಮಹಾರಾಜ ಕಾಲೇಜು, ಮೈಸೂರು, ಪು : ೯೪

೮. ಸಿದ್ಧಾಶ್ರಮ ಸಿ.ಪಿ, ಕುವೆಂಪು ಕಥೆಗಳು : ಒಂದು ವಿವೇಚನೆ, ನಿಕಷ, ಶಕ್ಕು ಪ್ರಕಾಶನ, ಮೈಸೂರು, ೧೯೮೭, ಪು : ೬೫

೯. ಶ್ರೀಕಂಠ ಕೂಡಿಗೆ, ಕುವೆಂಪು ಅವರ ಸಣ್ಣ ಕಥೆಗಳು, ಓದುಗೆ, ದಖನ್ ಪಬ್ಲಿಕೇಷನ್ಸ್, ಬೆಂಗಳೂರು, ೧೯೮೨, ಪು : ೧೯

೧೦. ವೇಣುಗೋಪಾಲರಾವ್ ಎ.ಎಸ್, ಶ್ರೀ ಕುವೆಂಪು ಅವರ ಸಣ್ಣ ಕಥೆಗಳು ಕೃತಿಗೆ ಬರೆದಿರುವ ದೇಜಗೌ ಮುನ್ನುಡಿಯಲ್ಲಿ

೧೧. ವೇಣುಗೋಪಾಲರಾವ್ ಎ.ಎಸ್. ಶ್ರೀ ಕುವೆಂಪು ಅವರ ಸಣ್ಣ ಕಥೆಗಳು, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೮೪ ಪು : ೧೫,೮೨,೮೩

೧೨. ಜಯದೇವ್ ಹು.ಕಾ, ಕುವೆಂಪು ಅವರ ಸಣ್ಣ ಕಥೆಗಳು, ಅರಣೋದಯ ನವೋದಯ ನಂತರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯, ಪು : ೪೮

೧೩. ಲಕ್ಷ್ಮೀನಾರಾಯಣ ರಾ, ಮಲೆನಾಡಿನ ಚಿತ್ರಗಳು, ರಸಋಷಿ, ಎಚ್.ಜೆ. ಲಕ್ಕಪ್ಪಗೌಡ (ಸಂ), ಮಂಗಳಗಂಗೋತ್ರಿ, ಮಂಗಳೂರು, ೧೯೭೨, ಪು : ೧೯೧ - ೧೯೨

೧೪. ಕೃಷ್ಣಕುಮಾರ ಸಿ.ಪಿ, ಮಲೆನಾಡಿನ ಚಿತ್ರಗಳು, ಕುವೆಂಪು ಕಿರಣಗಳು, ಚಿತ್ರಭಾನು ಪ್ರಕಾಶನ, ಮೈಸೂರು, ೧೯೮೯, ಪು : ೩೦

೧೫. ಕುವೆಂಪು, ಮುನ್ನುಡಿ, ಮಲೆನಾಡಿನ ಚಿತ್ರಗಳು, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೦ ಪು : v, xiv

೧೬. ..... ಅದೇ .....



೮

# ಕುವೆಂಪು ಕಥಾ ಸಾಹಿತ್ಯದ ಬಗೆಗೆ ಸಮಕಾಲೀನರ ಪ್ರತಿಕ್ರಿಯೆ

ಕುವೆಂಪು ಅವರ ಕಾದಂಬರಿ ಮತ್ತು ಕಥೆಗಳನ್ನು ಕುರಿತು ಇದುವರೆಗೂ ಪ್ರಕಟಗೊಂಡಿರುವ ವಿಮರ್ಶಾ ಬರಹಗಳು ಸುಮಾರು ಒಂದು ಸಾವಿರದ ಐದುನೂರು ಪುಟಗಳನ್ನು ಮೀರಿವೆ. ಈ ಬರಹಗಳು ಲೇಖನ, ಪುಸ್ತಕ, ಮಹಾಪ್ರಬಂಧ, ಟಿಪ್ಪಣಿಗಳ ರೂಪದಲ್ಲಿ ಪ್ರಕಟವಾಗಿವೆ. ಇಂಥ ಬರಹಗಳಲ್ಲಿ ಪ್ರಕಟವಾಗಿರುವ ಜಿಜ್ಞಾಸೆಯು ಅವರ ಕಥಾ ಸಾಹಿತ್ಯದ ಹಲವಾರು ಮುಖ್ಯ ನೆಲೆಗಳನ್ನು ಕುರಿತು ಚಿಂತಿಸಿವೆ. ಈ ಬರಹಗಳಲ್ಲಿ ಕುವೆಂಪು ಕಥನವನ್ನು ಕುರಿತು ನಡೆದಿರುವ ಜಿಜ್ಞಾಸೆ ವಿಭಿನ್ನ ನೆಲೆಗಳಿಂದ ಕೂಡಿದ್ದಾಗಿದ್ದು, ಕೆಲವಡೆ ಪೂರ್ವಗ್ರಹ ಪೀಡಿತ ವಿಮರ್ಶಕರ ಹೊಗಳಿಕೆ, ತೆಗಳಿಕೆ, ಪ್ರಶಂಸೆ, ಮೆಚ್ಚುಗೆಯ ಮಟ್ಟದಲ್ಲಿಯೇ ನಿಂತುಬಿಡುತ್ತವೆ. ಈ ರೀತಿಯ ವಿಮರ್ಶೆಗಳು ಕುವೆಂಪು ಕಥನಗಳ ಸಾಂಸ್ಕೃತಿಕ ಸಂಘರ್ಷವನ್ನಾಗಲಿ, ಆ ಕೃತಿಗಳ ಮುಖ್ಯ ವಾಗ್ವಾದಗಳನ್ನಾಗಲಿ ಅರ್ಥೈಸುವಲ್ಲಿ ವಿಫಲವಾಗುತ್ತವೆ. ಹಾಗಾಗಿಯೂ ಇಂಥ ವಿಮರ್ಶೆಗಳಲ್ಲಿ / ಪ್ರತಿಕ್ರಿಯೆಗಳಲ್ಲಿ ಮಹತ್ವ ವಿಚಾರಗಳಿಲ್ಲವೆಂದು ನಾನು ಭಾವಿಸಿಲ್ಲ. ಕುವೆಂಪು ಕಥನವನ್ನು ಕುರಿತು ಇಂಥ ನೆಲೆಯಿಂದ ಮುಕ್ತವಾದ ವಿಮರ್ಶೆಯೂ ಪ್ರಕಟವಾಗಿದೆ; ಆ ಕೃತಿಗಳಿಗೆ ಕನ್ನಡ ವಿಮರ್ಶಾ ಸಂವೇದನೆ ತೋರಿದ ಪ್ರತಿಕ್ರಿಯೆ ಚಾರಿತ್ರಿಕವಾಗಿ ಬಹು ಮುಖ್ಯವಾಗಿದೆ. ಹೊಗಳಿಕೆ ಮತ್ತು ತೆಗಳಿಕೆಗಳ ನೆಲೆಗಳಲ್ಲಿ ಕುವೆಂಪು ಕಥನವನ್ನು ಅರ್ಥೈಸಿದ ವಿಮರ್ಶೆಯನ್ನು ಕುರಿತು ವಿ.ಎಂ. ಇನಾಂದರ್ ರವರು ೧೯೭೪ ರಲ್ಲಿಯೇ ಪ್ರಶ್ನಿಸಿರುವುದನ್ನು ಇಲ್ಲಿ ಉದ್ಧರಿಸುವುದು ಸೂಕ್ತವೆಂದು ಕಾಣುತ್ತದೆ.

"…..ದೋಷಾನ್ವೇಷಣೆ ವಿಮರ್ಶೆಯ ಕೆಲಸವಲ್ಲ. ಹಾಗೆಯೆ, ಬರೆದವರನ್ನು ಹೊಗಳುವುದಾಗಲಿ, ತೆಗಳುವುದಾಗಲಿ, ಎರಡೂ ವಿಮರ್ಶೆ ಮಾಡಬೇಕಾದ ಕೆಲಸಗಳಲ್ಲ. ಹೊಗಳಿಕೆ ತೆಗಳಿಕೆಗಳಾಚೆಯಲ್ಲಿ ವಿಮರ್ಶೆಯ ಕಾರ್ಯ ನಡೆಯಬೇಕಾಗುತ್ತದೆ. ಇಂದು ನಮ್ಮಲ್ಲಿ ವಿಮರ್ಶೆಯ ಹೆಸರಿನ ಬರೆಹ ಹೊಗಳಿಕೆ ತೆಗಳಿಕೆಗಳಲ್ಲಿ ತೊಡಗಿರುತ್ತದೆ ಎಂದರೆ ಅದು ವಿಮರ್ಶೆಯ ತಪ್ಪಲ್ಲ. ಅದು ವಿಮರ್ಶಕರೆಂದುಕೊಳ್ಳುವವರ ಸಂಕುಚಿತ ದೃಷ್ಟಿ ಎನ್ನಬೇಕಾಗುತ್ತದೆ. ನಾನೆಂದುಕೊಂಡ ಹಾಗೆ ನಿಜವಾದ ವಿಮರ್ಶೆ ತನ್ನೆದುರಿಗೆ ಬಂದ ಕಲಾಕೃತಿಯೊಂದನ್ನು ಯಾವ ಪೂರ್ವಗ್ರಹಗಳೂ ಇಲ್ಲದೆ ಸ್ವೀಕರಿಸುತ್ತದೆ. ಸ್ವೀಕರಿಸಿಕೊಂಡ ಕೃತಿಯನ್ನು ಅರ್ಥವಿಸಿಕೊಳ್ಳುತ್ತದೆ. ಆ ಅರ್ಥದ ಬೆಳಕಿನಲ್ಲಿ

ಯಾವುದನ್ನು ಹೇಳುವುದಕ್ಕೆಂದು ಅದನ್ನು ಬರೆದವ ಯತ್ನಿಸಿರುತ್ತಾನೆಯೋ ಆ ಯತ್ನದ ಯಶಸ್ಸನ್ನು, ಸಾರ್ಥಕತೆಯನ್ನು ಅಥವಾ ಅಸಮರ್ಪಕತೆಯನ್ನು ಅಥವಾ ಸೋಲನ್ನು ಗುರುತಿಸಿ ಅದನ್ನು ವಿವರಿಸುವುದು ವಿಮರ್ಶೆಯ ಕೆಲಸ. ಕೃತಿಯ ವಿಮರ್ಶೆ ಈ ದಾರಿಯಲ್ಲಿ ನಡೆದಾಗ ಹೊಗಳಿಕೆ ತೆಗಳಿಕೆಗಳೆರಡೂ ಅಪ್ರಸ್ತುತವಾಗುತ್ತವೆ. ಕೃತಿಯಲ್ಲಿ ದೋಷಗಳಿವೆಯೆ ಅಥವಾ ಇಲ್ಲವೆ ಎನ್ನುವುದಕ್ಕಿಂತ ಆ ಕೃತಿ ಸಾಧಿಸಬೇಕೆಂದದ್ದು ಏನನ್ನು, ಅದನ್ನು ಅದು ಎಷ್ಟರ ಮಟ್ಟಿಗೆ ಸಾದಿಸಿದೆ, ಪೂರ್ತಿಯಾಗಿ ಸಾಧಿಸಲಾಗಿರದಿದ್ದರೆ ಅದು ಯಾವ ಕಾರಣಗಳಿಗಾಗಿ ಎನ್ನುವ ಪ್ರಶ್ನೆಗಳೇ ಮಹತ್ವದಾಗುತ್ತದೆ, ಯಾವುದಕ್ಕೂ ಕೃತಿಯೇ ಆಧಾರವಾಗಬೇಕಾಗುತ್ತದೆ."[೧]

ಅಂದರೆ ಪೂರ್ವಗ್ರಹ ವಿಮರ್ಶಾ ನೆಲೆಗಳಿಂದ ಕುವೆಂಪು ಕೃತಿಗಳ ಮೌಲ್ಯವನ್ನು ನಿರ್ಧರಿಸುವ ಸಂಕುಚಿತ ದೃಷ್ಟಿಯನ್ನು ಇಲ್ಲಿ ವಿ.ಎಂ. ಇನಾಂದರ್ ರವರು ಪ್ರಶ್ನಿಸಿದ್ದಾರೆ. ಅವರು ಈ ರೀತಿ ಪ್ರಶ್ನಿಸುವುದರಲ್ಲಿ ವಾಸ್ತವಾಂಶವೂ ಇದೆ. ಇಂಥ ವಿಮರ್ಶೆ ಕುವೆಂಪು ಕಾದಂಬರಿಗಳ ಶ್ರೇಷ್ಠತೆಯನ್ನು ಮತ್ತು ಬೇರೆ ಲೇಖಕರಿಗಿಂತ ಕುವೆಂಪು ಹೇಗೆ ಶ್ರೇಷ್ಠರು? ಏಕೆ ಶ್ರೇಷ್ಠರಲ್ಲ? ಎಂಬ ಪ್ರಾಥಮಿಕ ನೆಲೆಗಳನ್ನು ವಿಮರ್ಶೆಗೆ ಗುರಿಪಡಿಸುವುದರಲ್ಲೇ ನಿಂತು ಬಿಡುತ್ತದೆ. ಹಾಗಾಗಿ ಇಂಥ ವಿಮರ್ಶೆಗಳಿಂದ ನೈಜ ಮೌಲ್ಯ ನಿರ್ಣಯ ಕುವೆಂಪು ಕೃತಿಗಳಿಗೆ ದೊರೆಯಲೇ ಇಲ್ಲ ಎನ್ನಬಹುದು.

ಕುವೆಂಪು ಕಾದಂಬರಿಗಳನ್ನು ಕುರಿತು ಪ್ರಕಟವಾದ ಈರ್ಷಾ ನೆಲೆಯ ವಿಮರ್ಶೆಯನ್ನು ಕುರಿತು ವಿ.ಎಂ. ಇನಾಂದರರೂ ಪ್ರತಿಕ್ರಿಯಿಸುವಂತೆಯೇ ವಿಮರ್ಶಕರುಗಳಾದ ಎಂ. ಅಕಬರಅಲಿ ಹಾಗೂ ಆರ್ಕೆ ಮಣಿಪಾಲರು ತೀವ್ರವಾಗಿಯೇ ಅಂಥ ನೆಲೆಗಳನ್ನು ವಿಮರ್ಶೆಗೆ ಗುರಿಪಡಿಸುತ್ತಾರೆ. ಅನಂತಮೂರ್ತಿಯವರು ಕುವೆಂಪು ಕಥನಗಳನ್ನು ಕುರಿತು ಹೇಳುವ ದ್ವಂದ್ವದ ನೆಲೆಗಳನ್ನು ಎಂ. ಅಕಬರಅಲಿಯವರು ತಮ್ಮ 'ಕುವೆಂಪು ಕಾದಂಬರಿಗಳ ಒಂದು ಸಮೀಕ್ಷೆ' ಎಂಬ ಲೇಖನದಲ್ಲಿ ಸೋದಾಹರಣವಾಗಿ ವಿಮರ್ಶೆಗೆ ಗುರಿಪಡಿಸುತ್ತಾರೆ. ಕುವೆಂಪು ಸಂವೇದನೆಯನ್ನು 'ಸ್ಕೂಲ್ ಮಾಸ್ಟರುಗಳ ಸಂವೇದನೆ' ಎಂದು ವ್ಯಂಗ್ಯವಾಡಿದ ಅನಂತಮೂರ್ತಿಯವರ ಸಂವೇದನೆಯು ಕುವೆಂಪು ನಮ್ಮ ಯುಗದ ಅತ್ಯಂತ ಶಕ್ತಿಶಾಲಿ ಸಾಹಿತಿಗಳಲ್ಲಿ ಒಬ್ಬರು ಎಂದು ನುಡಿದುದ್ದನ್ನು ಎಂ. ಅಕಬರ ಆಲಿಯವರು ಪ್ರಶ್ನಿಸುವುದರೊಂದಿಗೆ ಅವರ ದ್ವಂದ್ವಾತ್ಮಕ ವಿಮರ್ಶಾ ನೆಲೆಗಳನ್ನು ಸ್ಪಷ್ಟವಾಗಿ ಗುರುತಿಸುತ್ತಾರೆ.

ಇದೇ ನೆಲೆಯ ವಿಮರ್ಶೆ ಬೇಂದ್ರೆ ಮತ್ತು ಕುವೆಂಪು ಅವರ ಮಧ್ಯೆ ಯಾರು ಶ್ರೇಷ್ಠ ಕವಿಗಳೆಂಬ ಪ್ರಶ್ನೆಗೆ ಉತ್ತರಗಳನ್ನು ಹುಡುಕುವ ಸಂವೇದನೆಯ ನೆಲೆಯನ್ನು ಆರ್ಕೆ ಮಣಿಪಾಲರಂತಹ ವಿಮರ್ಶಕರು ಈ ಕೆಳಕಂಡಂತೆ ಪ್ರಶ್ನಿಸುತ್ತಾರೆ. ಕುವೆಂಪುರವರನ್ನು ಬೇಂದ್ರೆಯಷ್ಟು ಶ್ರೇಷ್ಠ ಕವಿಯಲ್ಲ, ಅವರು ಶ್ರೇಷ್ಠ ಗದ್ಯ ಲೇಖಕರು ಮಾತ್ರ ಎನ್ನುವ ವಿಮರ್ಶಾ ಧೋರಣೆಗಳನ್ನು ಪ್ರಶ್ನಿಸುತ್ತಾ, ಒಬ್ಬ ಲೇಖಕನ ಪ್ರತಿಯೊಂದು ಬರಹವು ಶ್ರೇಷ್ಠವಾಗಲಾರದು, ಒಂದೇ ಗ್ರಂಥದೊಳಗಿನ ಎಲ್ಲ ಪುಟಗಳು, ಸಾಲುಗಳು ಸತ್ವಪೂರ್ಣವಾಗಿರಲಾರವೂ ಎಂದು ಹೇಳುತ್ತಾ ಬೇಂದ್ರೆ, ಅಡಿಗ ಹಾಗೂ ಅನಂತಮೂರ್ತಿಯವರ ಕೃತಿಗಳು ಉತ್ಕೃಷ್ಟ ಕಲೆಗಾರಿಕೆಯನ್ನು ತಮ್ಮ ಎಲ್ಲ ಕೃತಿಗಳಲ್ಲೂ ಕಾಪಾಡಿಕೊಂಡು ಬರಲು ಹೇಗೆ ಸಾಧ್ಯವಾಗಿಲ್ಲ ಎಂಬುದನ್ನು ಇವರು ಗುರುತಿಸುತ್ತಾರೆ. ಹಾಗೆಯೇ ನವ್ಯ ವಿಮರ್ಶಕರು ಕುವೆಂಪು ಅವರ ಎರಡು ಕಾದಂಬರಿಗಳು ಅವರ ಕಾವ್ಯಕ್ಕಿಂತ ಮಹತ್ವ ಕೃತಿಗಳೆಂದು ಮಾನ್ಯ ಮಾಡಿದ ಧೋರಣೆಯನ್ನು ಈ ಕೆಳಗಿನಂತೆ ಪ್ರಶ್ನಿಸುತ್ತಾರೆ. ಹಾಗೆಯೇ 'ಕಾನೂರು ಹೆಗ್ಗಡಿತಿ' ಗಿಂತ ನಂತರ ಪ್ರಕಟಗೊಂಡ 'ಮಲೆಗಳಲ್ಲಿ

ಮದುಮಗಳು' ಕಾದಂಬರಿ ಹೆಚ್ಚು ಶ್ರೇಷ್ಠವೆಂಬ ವಿಮರ್ಶಾ ಸಂವೇದನೆಯನ್ನು ಆರ್ಕೆ ಮಣಿಪಾಲರು ಈ ಕೆಳಗಿನ ಉದ್ಧರಣೆಯಲ್ಲಿ ವಿಶ್ಲೇಷಣೆಗೆ ಗುರಿಪಡಿಸಿರುವುದನ್ನು ಕಾಣಬಹುದು:

"...ಕುವೆಂಪು ಕವಿಗಿಂತ ಗದ್ಯಕಾರನೆಂದು ತಿಳಿದ ನವ್ಯ ವಿಮರ್ಶಕರು ಅವರ ಎರಡೂ ಕಾದಂಬರಿಗಳನ್ನು ಮಹತ್ವದ ಕೃತಿಗಳೆಂದು ಮಾನ್ಯ ಮಾಡಿದ್ದಾರೆ. ೧೯೩೬ ರಷ್ಟು ಆಚೆಗೆ ಹೊರಟಿದ್ದ 'ಕಾನೂರು ಹೆಗ್ಗಡಿತಿ' ಗಿಂತ ೧೯೬೭ ರಲ್ಲಿ ಪ್ರಕಟವಾದ 'ಮಲೆಗಳಲ್ಲಿ ಮದುಮಗಳು' ಹೆಚ್ಚು ಉತ್ತಮವೆಂದು ಇವರೆಲ್ಲಾ ವಾದಿಸುತ್ತಾ ಬಂದಿದ್ದಾರೆ. ಆದರೆ, ಅಸಂಖ್ಯ ಸನ್ನಿವೇಶಗಳನ್ನು, ಅಪಾರ ವಿವರಗಳು ಹಿಡಿದಿರುವುದರಿಂದ ಹಾಗೂ ಪಾತ್ರ ಪ್ರಧಾನ ಕಾದಂಬರಿಗಳಲ್ಲವಾದುದರಿಂದ, ಇವುಗಳಲ್ಲಿ ಕೇಂದ್ರಸ್ಥ ಧೋರಣೆಯಿಲ್ಲವೆಂಬುದು ಈ ವಿಮರ್ಶಕರ ಆಕ್ಷೇಪ. ಈ ಎರಡೂ ಆಕ್ಷೇಪಗಳೂ ಸಮಂಜಸವಾದುದಲ್ಲ; ಎರಡನೆಯದಂತೂ ವಿಮರ್ಶೆಯೇ ಅಲ್ಲ - ಪೂರ್ವಾಗ್ರಹ ದೂಷಿತ ಕ್ಷುಲ್ಲಕ ಟೀಕೆ ಎನ್ನಬೇಕಾಗುತ್ತದೆ. ಹೆಗ್ಗಡಿತಿ, ಮದುಮಗಳಷ್ಟೇ ಮಹತ್ವದ ಕೃತಿಯೆಂಬುದಷ್ಟೇ ಅಲ್ಲ, ಒಂದನ್ನು ಇನ್ನೊಂದರ ಜೊತೆಗಿಟ್ಟು ಅಧ್ಯಯನ ಮಾಡುವುದು ಸೂಕ್ತ, ಫಲಪ್ರದ. ಹೆಗ್ಗಡಿತಿಯಲ್ಲಿ ಬಹುವಾಗಿ ಕೌಟುಂಬಿಕ ವಸ್ತುವೇ ಕೇಂದ್ರವಾಗಿದ್ದರೆ, ಮದುಮಗಳಲ್ಲಿ ಹೆಚ್ಚು ವಿಸ್ತಾರವಾದ, ವಿವಿಧ ಸಾಮಾಜಿಕ ಸ್ತರಗಳ ಅನುಭವಗಳ ಮೂಲಕ ಕೌಟುಂಬಿಕ ಸಮಸ್ಯೆಗಳನ್ನು ವಿಶ್ಲೇಷಿಸುವ ಪ್ರಯತ್ನವಿದೆ. ಮೊದಲನೆಯದರಲ್ಲಿ ವಿಘಟನೆಯ ಚಿತ್ರಣವಿದ್ದರೆ ಎರಡನೆಯದರಲ್ಲಿ ಸಂಘಟನೆಗೆ ಸಹಜವಾಗಿಯೇ ಒತ್ತು ಬಿದ್ದಿದೆ. ವಿಘಟನೆ - ಸಂಘಟನೆಗಳು ಪ್ರತ್ಯೇಕ ಪ್ರತ್ಯೇಕವೆಂದು ಭಾವಿಸದೆ ಒಂದಕ್ಕೊಂದು ತೆಕ್ಕೆ ಹಾಕಿಕೊಂಡಿರುವ, ಒಂದು ಇನ್ನೊಂದಕ್ಕೆ ಪ್ರೇರಣೆಯೊದಗಿಸುವ ಪರಿಯನ್ನು ಕುವೆಂಪು ಇಲ್ಲಿ ಸಮಗ್ರೀಕರಿಸಿದ್ದಾರೆನ್ನಬಹುದು."[೨]

ಕುವೆಂಪು ಅವರ ಸಾಹಿತ್ಯದ ಬಗೆಗೆ ಸಮತೂಕದ ವಿಮರ್ಶೆ ಒಂದು ಕಾಲದಲ್ಲಿ ಬರೆದಿರುವ ಸಾಹಿತ್ಯಿಕ ರಾಜಕಾರಣವನ್ನು ಇದೇ ಲೇಖನದಲ್ಲಿ ಆರ್ಕೆ ಮಣಿಪಾಲರು ಚರ್ಚೆಗೆ ಗುರಿಪಡಿಸಿದ್ದಾರೆ. ಹಾಗೆಯೇ ಕುವೆಂಪು ಬರವಣಿಗೆಯ ಸಂದರ್ಭದ ಕನ್ನಡದ ಸಾಂಸ್ಕೃತಿಕ ಆಗು ಹೋಗುಗಳನ್ನು ಗಮನಿಸದೆ ನಿರ್ಲಕ್ಷಿಸುವ ಕ್ರಮವನ್ನು ಇವರು ಪ್ರಶ್ನಿಸುತ್ತಾರೆ. ಕಾವ್ಯ ಮತ್ತು ಗದ್ಯ ಎಂಬ ಪ್ರಕಾರಗಳಿಂದ ಕುವೆಂಪು ಅವರ ಶ್ರೇಷ್ಠತೆಯನ್ನು ಹುಡುಕುವ ವಿಮರ್ಶಾ ಸಂವೇದನೆಯನ್ನು ಪ್ರಶ್ನಿಸುತ್ತಾ, ಕುವೆಂಪು ಅವರ ಶ್ರೇಷ್ಠತೆಯನ್ನು ಒಟ್ಟು ಕೃತಿಗಳ ಅಖಂಡತ್ವದಲ್ಲಿ ಕಾಣಬೇಕೆಂಬ ಆಶಯವನ್ನು ಪ್ರಕಟಿಸುತ್ತಾರೆ.

ಕುವೆಂಪು ಕಾದಂಬರಿಗಳ ಬಗೆಗೆ ಬಂದಿರುವ ವಿಮರ್ಶೆಗಳನ್ನು ಕುರಿತು ಸಮೀಕ್ಷೆ ಮಾಡುವ ಎಂ. ಅಕಬರ ಅಲಿಯವರು ವಿ.ಎಂ. ಇನಾಂದರ್ ಅವರಂತೆಯೇ ಯು.ಆರ್. ಅನಂತಮೂರ್ತಿ, ರಂ.ಶ್ರೀ. ಮುಗಳಿ, ಎಂ.ಜಿ. ಕೃಷ್ಣಮೂರ್ತಿ, ಗಿರಡ್ಡಿ ಗೋವಿಂದರಾಜ, ಎಚ್.ಎಂ. ಚನ್ನಯ್ಯ ಅವರ ವಿಮರ್ಶಾ ನೆಲೆಗಳನ್ನು ಈ ಲೇಖನದಲ್ಲಿ ಚರ್ಚೆಗೆ ಗುರಿಪಡಿಸುತ್ತಾರೆ. "ಕುವೆಂಪು ಕಾದಂಬರಿಗಳ ನಿಷ್ಠುರ ವಿಮರ್ಶೆಯನ್ನೆಲ್ಲ ಚಾಣಿಸಿ ನೋಡಿದಾಗ, ವಿಮರ್ಶೆಯ ಹೆಸರಿನಲ್ಲಿ ಪ್ರಕಟವಾದ ಒಂದು ಮಾತು ನನ್ನ ಮನಸ್ಸನ್ನು ಕುಟುಕಿ ಮತ್ತೆ ಮತ್ತೆ ಯೋಚಿಸುವಂತೆ ಮಾಡಿದೆ" ಎನ್ನುತ್ತಾ, ಯು.ಆರ್. ಅನಂತಮೂರ್ತಿಯವರು 'ಭಾರತೀಯ ಸಂಸ್ಕೃತಿ ಮತ್ತು ಲೇಖಕ' ಎಂಬ ತಮ್ಮ ವಿಮರ್ಶಾ ಲೇಖನದಲ್ಲಿ ಕುವೆಂಪು ಮತ್ತು ಅವರ ಕಾದಂಬರಿಗಳ ಬಗೆಗೆ ಆಡಿದ ಕೊಂಕು ಮತ್ತು ದ್ವಂದ್ವಾತ್ಮಕ ನಿಲುವುಗಳನ್ನು ಪ್ರಶ್ನಿಸುತ್ತಾರೆ:

"...ಅತ್ಯುತ್ತಮ ಲೇಖಕರು ತಮ್ಮ ಸಂಸ್ಕೃತಿಯ ಸಾಧಾರಣ ಪ್ರವೃತ್ತಿಗಳಿಂದ ಸಂಪೂರ್ಣ ಸೀಮಿತರಾಗಬೇಕೆಂದಿಲ್ಲ. ಉದಾಹರಣೆಗೆ ಎಮರ್‌ಸನ್, ವ್ಹಿಟಮನ್, (ಇವರ ದೃಷ್ಟಿ ಹಿಂದೂ ಧರ್ಮಕ್ಕೆ ಹತ್ತಿರ) ಲಾರೆನ್ಸ್ ಇತ್ಯಾದಿ ಲೇಖಕರು ಜೀವನದಲ್ಲಿ ಕರಾಳವಾದದ್ದನ್ನು 'ಈವಿಲ್' ಅನ್ನು ಗೌಣವೆಂದು ಕಂಡು, ಈ ಬಗ್ಗೆ ವ್ಯಗ್ರಗೊಳ್ಳುವುದು ಮನಸ್ಸಿನ ಜಾಡ್ಯವೆಂದು ತಿಳಿದು, ಆರೋಗ್ಯಕರವಾದ ದೃಷ್ಟಿಯನ್ನು ತಳೆದವರು. ಇವರದು ಮುಖ್ಯವಾಗಿ ಚಿಕಿತ್ಸಕ ದೃಷ್ಟಿ. ಆದರೆ ಸೂಕ್ಷ್ಮವೇದಿಗಳಲ್ಲದ ಕೇವಲ ಹುಮ್ಮಸ್ಸಿನ ಮಂದ ಈ ದೃಷ್ಟಿಯನ್ನು ತಳೆದಾಗ ಮುಗ್ಧ ನಿರನುಭವದ, ಅಥವಾ ಸಲೀಸು ಲೋಕಾಭಿರಾಮದ ಆಶಾವಾದ ಹುಟ್ಟುತ್ತದೆ. ಒಬ್ಬ ಕರ್ಕೆಗಾರ್ಡ್, ಒಬ್ಬ ಕಾಫ್ಕ, ಒಬ್ಬ ಎಲಿಯಟ್ ಗೆ ನೂರು ಜನ ಅಳುಬುರುಕ ನಿರಾಶಾ ಪ್ರವಾದಿಗಳು ಇರುವುದು ಸಾಧ್ಯವಿರುವಂತೆ, ಒಬ್ಬ ಲಾರೆನ್ಸ್, ಒಬ್ಬ ಎಮರ್ ಸನ್, ಒಬ್ಬ ವಿವೇಕಾನಂದನಿಗೆ ನೂರು ಜನ 'ನುಗ್ಗಿನಡೆ ಮುಂದೆ' ಎನ್ನುವ ಸ್ಕೌಟ್ ಮಾಸ್ಟರುಗಳು ಇರುವುದೂ ಸಾಧ್ಯ."[೩]

ಈ ಮೇಲೆ ಉದ್ಧರಿಸಿರುವ ಅನಂತಮೂರ್ತಿಯವರ ಪೂರ್ವಗ್ರಹ ನಿಲುವುಗಳಿಂದ ಒಂದು ಕಾಲದ ಸಾಹಿತ್ಯಿಕ ರಾಜಕಾರಣವನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ. ಇಡೀ ಲೇಖನದಲ್ಲಿ ಅನೇಕ ದ್ವಂದ್ವಗಳು ಎದುರಾಗುತ್ತವೆ. ಈ ಮೇಲಿನ ಉದ್ಧರಣೆಯನ್ನು ಗಮನಿಸಿದರೆ ಸಾಕು ಒಂದು ಕೃತಿಯ ಬಗೆಗೆ ವಿಮರ್ಶಕರು ತಾಳುವ ದ್ವಂದ್ವಾತ್ಮಕ ನಿಲುವುಗಳಲ್ಲಿ ಪೂರ್ವಗ್ರಹದ ದುರುದ್ದೇಶದ ನೆಲೆ ಸ್ಪಷ್ಟವಾಗದೆ ಇರಲಾರದು.

ಇದೇ ಬಗೆಯ ಧೋರಣೆಗಳನ್ನು ಕೀರ್ತಿನಾಥ ಕುರ್ತುಕೋಟಿಯವರ ವಿಮರ್ಶೆಗಳಲ್ಲಿಯೂ ಕಾಣಬಹುದಾಗಿದೆ. ಕುರ್ತುಕೋಟಿಯವರು 'ಕಾನೂರು ಹೆಗ್ಗಡಿತಿ' ಕಾದಂಬರಿಯನ್ನು ಆಧುನಿಕ ಯುಗದ ಮಹಾಕಾವ್ಯವೆಂದು ಕರೆದರೂ, ಹೂವಯ್ಯನ ಪಾತ್ರದ ದೌರ್ಬಲ್ಯದ ವಿಷಯವಾಗಿ ಇಲ್ಲದ ಆಕ್ಷೇಪಗಳನ್ನು ಎತ್ತಿರುವುದರಲ್ಲೇ ಮಗ್ನರಾಗಿದ್ದಾರೆ.

"...ಹೂವಯ್ಯನ ಪಾತ್ರದ ವಿಷಯವಾಗಿಯೇ ಅನೇಕ ಆಕ್ಷೇಪಣೆಗಳಿವೆ. ಅವನ ಭಾವ ಸಮಾಧಿ ಆದರ್ಶವಾದ, ಅಹಿಂಸೆ, ದೈವಭಕ್ತಿ ಇವು ಎಷ್ಟರ ಮಟ್ಟಿಗೆ ಸಹಜವಾಗಿವೆಯೆಂಬ ಪ್ರಶ್ನೆಯೊಂದಿದೆ. ಅಲ್ಲದೆ ಅವನ ಈ ಗುಣಗಳು ಅವನನ್ನು ಕಾದಂಬರಿಯ ಉಳಿದ ಪಾತ್ರಗಳಿಂದ ಬೇರ್ಪಡಿಸುತ್ತವೆಂಬ ದೂರೂ ಇದೆ. ಈ ಆಕ್ಷೇಪಣೆಗಳಲ್ಲಿ ತಥ್ಯಾಂಶವಿಲ್ಲದೆ ಇಲ್ಲ. ...ಅದು ಸುತ್ತಲಿನ ವಾತಾವರಣದಿಂದ ಸಹಜವಾಗಿ ಮೂಡಿಬಂದದ್ದಲ್ಲವಾದ್ದರಿಂದ ಉಳಿದ ವ್ಯಕ್ತಿಗಳಿಗೆ ಅದು ಅರ್ಥವಾಗುವುದಿಲ್ಲ. ರಾಮಯ್ಯನೊಬ್ಬನನ್ನು ಬಿಟ್ಟರೆ ಉಳಿದ ಯಾರೂ ಅವನಿಗೆ ಈ ವಿಷಯದಲ್ಲಿ ಸಂಗಾತಿಗಳಾಗಲಾರರು. ಇದರಿಂದಾಗಿ ಹೂವಯ್ಯ ಹೆಚ್ಚು ಹೆಚ್ಚು ಆತ್ಮನಿಷ್ಠ (Ego- Centric) ನಾಗುತ್ತ ನಡೆದಿದ್ದಾನೆ. ಕಾದಂಬರಿಯ ಉಳಿದ ಕ್ರಿಯೆಗಳಲ್ಲಿರುವ ಚಟುವಟಿಕೆ ಚೈತನ್ಯಗಳು ಅದರ ಬೌದ್ಧಿಕತೆಯಲ್ಲಿ ಇಲ್ಲ. ಇದಕ್ಕೆ ಕಾರಣವೆಂದರೆ ಅದು ಕೇವಲ ಸುಶಿಕ್ಷಿತತೆಯಾಗಿ ತನ್ನ ಕ್ರಿಯಾಶೀಲತೆಯನ್ನು ಕಳೆದುಕೊಂಡುಬಿಟ್ಟಿದೆ. ಹೂವಯ್ಯ ಅಂತರ್ಮುಖಿಯಾಗುತ್ತಾನೆ, ಭಾವ ಸಮಾಧಿಯಲ್ಲಿ ತೊಡುಗುತ್ತಾನೆ."[೪]

ಈ ಮೇಲಿನ ಉಧೃತ ಭಾಗದಲ್ಲಿ ಕುರ್ತುಕೋಟಿಯವರು ಹೂವಯ್ಯನ ಭಾವಸಮಾಧಿ, ಆದರ್ಶವಾದ, ಅಹಿಂಸೆ, ಸಹನೆ, ಧ್ಯಾನ, ಅವನ ಏಕಾಕಿತನಗಳ ಬಗೆಗೆ ಆಕ್ಷೇಪಗಳನ್ನು ಎತ್ತಿರುವುದನ್ನು ಕಾಣಬಹುದು.

"...ಹೂವಯ್ಯನ ಜ್ಞಾನ ಭಂಡಾರದಲ್ಲಿ ಹುರುಳಿದ್ದರೂ ಅದು ಈ ಜೀವನಕ್ಕೆ ಮಾತ್ರ ನಿರುಪಯುಕ್ತವಾಗಿದೆ. ಬೌದ್ಧಿಕ ಕ್ಷೇತ್ರದಲ್ಲಿ ಹೂವಯ್ಯನಿಗೆ ವೆಂಕಪ್ಪ ಜೋಯಿಸರಂಥವರು ಪ್ರತಿಸ್ಪರ್ಧಿಯಾಗುವುದೆಂದರೆ ಎಂಥ ವಿಪರ್ಯಾಸ! ಅಂತಲೇ ಲೇಖಕರು ಕೊನೆಯ ಪ್ರಕರಣದಲ್ಲಿ ಬಣ್ಣಿಸುವ ಕ್ರಾಂತಿ ಅನುಚಿತವಾಗಿದೆಯೆಂದೆನಿಸುತ್ತದೆ. ಅಲ್ಲಿಯವರೆಗಿದ್ದ ಒಂದೇ ಕ್ರಿಯಾಪೂರ್ಣವಾದ ಜಗತ್ತು ಮಟಮಯವಾದಂತಾಗಿ, ಓದುಗರನ್ನು ಅನಿರೀಕ್ಷಿತವಾಗಿ ಬೇರೊಂದು ಲೋಕದಲ್ಲಿ ನೂಕಿದಂತಾಗುತ್ತದೆ."[೫]

ಈ ಮೇಲಿನ ಉಲ್ಲೇಖದ ನಿಲುವುಗಳಿಗಿಂತ ಭಿನ್ನವಾದ ಅನಿಸಿಕೆಗಳನ್ನು ಕುವೆಂಪುರವರ ಎರಡೂ ಕಾದಂಬರಿಗಳ ಬಗೆಗೆ ಕುರ್ತುಕೋಟಿಯವರು ತಮ್ಮ ಇತ್ತೀಚಿನ ವಿಮರ್ಶಾ ಕೃತಿಯಾದ 'ನೂರು ಮರ ನೂರು ಸ್ವರ' ಕೃತಿಯಲ್ಲಿ ತಾಳುತ್ತಾರೆ. ಈ ನಿಲುವುಗಳಲ್ಲಿ ಆದ ಬದಲಾವಣೆಗಳನ್ನು ಗಮನಿಸಿದಾಗ ಕಾದಂಬರಿಗಳ ಬಗೆಗೆ ಹಿಂದಿನ ಅಪಸ್ವರಗಳಲ್ಲಿ ಬದಲಾವಣೆಯನ್ನು ಕಂಡುಕೊಂಡಿರುವುದನ್ನು ಈ ಕೆಳಗಿನ ಭಾಗದ ಮಾತುಗಳು ಸ್ಪಷ್ಟ ಪಡಿಸುತ್ತವೆ. ಈ ಅಭಿಪ್ರಾಯ ಬದಲಾವಣೆಯು ಒಬ್ಬ ನಿಜವಾದ ವಿಮರ್ಶಕನ ಬೌದ್ಧಿಕ ಬೆಳವಣಿಗೆಯಲ್ಲಿ ಆದ ಬೆಳವಣಿಗೆಗೆ ಸಾಕ್ಷಿಯಾಗಿದೆ. ಕುರ್ತುಕೋಟಿಯವರು ಮುಂದುವರಿದು ಹೀಗೆ ಹೇಳುತ್ತಾರೆ:

"...ನವೋದಯ ಕಾಲದ ಬದಲಾವಣೆಯ ಚೈತನ್ಯದ ಒಂದು ಪ್ರತೀಕವನ್ನು 'ಕಾನೂರು ಹೆಗ್ಗಡಿತಿ'ಯ ಹೂವಯ್ಯನ ಪಾತ್ರದ ಸೃಷ್ಟಿಯಲ್ಲಿ ಗಮನಿಸಿದ್ದಾರೆ. ಕಾದಂಬರಿಯ ಜಗತ್ತು ಪೂರ್ವಪಕ್ಷವಾಗಿದ್ದರೆ ಹೂವಯ್ಯ ಉತ್ತರ ಪಕ್ಷವಾಗಿದ್ದಾನೆ. ಮನುಷ್ಯ ಮನುಷ್ಯರ ಸಂಬಂಧಗಳು ಪವಿತ್ರವಾಗಬೇಕೆಂದು ಹೂವಯ್ಯ ಹಗಲಿರುಳು ದುಡಿಯುತ್ತಾನೆ. ಆದರೆ ಕಾದಂಬರಿಯ ಜಗತ್ತು ಎಷ್ಟು ಪ್ರಾಣಶಕ್ತಿಯಿಂದ ತುಂಬಿದೆಯೆಂದರೆ ಅದು ಹೂವಯ್ಯನ ಚೈತನ್ಯವನ್ನು ಒಳಗೊಂಡು ಅದನ್ನು ಆಕ್ರಮಿಸುತ್ತದೆ."[೬]

ಕೀರ್ತಿನಾಥ ಕುರ್ತುಕೋಟಿಯವರು ಕಾದಂಬರಿಯ ಜಗತ್ತನ್ನು ಯಥಾರ್ಥವಾಗಿಯೇ ಗುರುತಿಸಿದ್ದಾರೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯನ್ನು ಕುರಿತು ಅತ್ಯಂತ ಉಡಾಫೆಯಿಂದ ಗಿರಡ್ಡಿ ಗೋವಿಂದರಾಜು ವಿಮರ್ಶಿಸಿದ್ದನ್ನು ಮಾತ್ರ ಕನ್ನಡ ವಿಮರ್ಶೆ ಅತ್ಯಂತ ತೀವ್ರವಾಗಿಯೇ ಪ್ರತಿಭಟಿಸಿದೆ. ನವ್ಯ ವಿಮರ್ಶಕ ಗಿರಡ್ಡಿ ಗೋವಿಂದರಾಜ ಅವರು ಕಾದಂಬರಿಯ ಕಲಾತ್ಮಕತೆಯನ್ನು ಗುರುತಿಸದೆ ಹೋದದ್ದು ವಿಷಾದ ಸಂಗತಿ.

"...ಕಾನೂರು ಹೆಗ್ಗಡಿತಿಯಲ್ಲಿ ಹೂವಯ್ಯನ ಪಾತ್ರದ ಮೂಲಕ ವೈಚಾರಿಕತೆಯನ್ನು ತಂದು ಜೋಡಿಸುವ ಪ್ರಯತ್ನವೇನೋ ಇದೆ. ಆದರೆ ಅದು ಈ ಬದುಕಿಗೆ ಹೊರತಾದದ್ದು. ಅದು ಪೂರ್ತಿ ಅಸಹಜವಾಗಿ ಇಡಿಯ ಪಾತ್ರದ ಜೀವಂತತನವನ್ನೇ ಅಲ್ಲಗಳೆದಿದೆ. ಕಲಾತ್ಮಕವಾಗಿ ಹೂವಯ್ಯನ ಪಾತ್ರ ಹಾಗೂ ಅವನ ಭಾವತಿರೇಕದ ಆದರ್ಶವಾದ ಯಶಸ್ವಿಯಾಗಲಿಲ್ಲ ಎಂಬುದು ಈಗಾಗಲೇ ಜಗಜ್ಜಾಹೀರಾಗಿ ಬಿಟ್ಟಿದೆ."[೭] ಎಂದು ಗಿರಡ್ಡಿ ಅವರು ಪಡುವ ಅಭಿಪ್ರಾಯ ಸಮಂಜಸವಾಗಿಲ್ಲ.

ಈ ಮೇಲಿನ ಉಲ್ಲೇಖದಲ್ಲಿ ಹೂವಯ್ಯನ ಪಾತ್ರ ಮತ್ತು ಆತನ ಭಾವತಿರೇಕದ ಆದರ್ಶವಾದ ವಿಚಾರವಾಗಿ ಎತ್ತಿರುವ ಆಕ್ಷೇಪಣೆಗೆ, 'ಕುವೆಂಪು ಅವರ ಕಾದಂಬರಿಗಳಲ್ಲಿ ವೈಚಾರಿಕತೆ' ಎಂಬ ಲೇಖನದಲ್ಲಿ ಸುಧಾಕರ ಅವರು ವಿಮರ್ಶಕರನೊಬ್ಬನು ಬೇಕಾಬಿಟ್ಟಿ ಮಾತಾಡುವ ಪ್ರಕ್ರಿಯೆಯನ್ನು ಪ್ರಶ್ನಿಸುತ್ತಾರೆ. ಗಿರಡ್ಡಿಯವರ ಇಂಥ ವಿಮರ್ಶಾ

ಆರೋಪಗಳು ಬುಡವಿಲ್ಲದವು ಮತ್ತು ದುಡುಕಿನದು ಎನ್ನುವುದನ್ನು ಸಮರ್ಥವಾಗಿಯೇ ಸುಧಾಕರ ಅವರು ಗುರುತಿಸಿದ್ದಾರೆ. ಹಾಗೆಯೇ "ಹೂವಯ್ಯನ ಪಾತ್ರದ ಮೂಲಕ ವೈಚಾರಿಕತೆಯನ್ನು ತಂದು ಜೋಡಿಸುವ ಪ್ರಯತ್ನವೇನೋ ಇದೆ. ಆದರೆ ಅದು ಈ ಬದುಕಿಗೆ ಹೊರತಾದ್ದು" ಎಂಬ ಹೇಳಿಕೆಯನ್ನು ಪ್ರಸ್ತಾಪಿಸಿ ಯು.ಆರ್. ಅನಂತಮೂರ್ತಿಯವರ 'ಭಾರತೀಪುರ' ಕಾದಂಬರಿಯ 'ಜಗನ್ನಾಥನ' ಪಾತ್ರದ ವೈಚಾರಿಕತೆಯ ಜೊತೆ ಚರ್ಚಿಸುತ್ತಾರೆ. ಹಾಗೆಯೇ ಮುಂದುವರಿದು 'ಇಂಥ ವಿಮರ್ಶೆಗಳು ಕೇವಲ ಪಂಥ ಪ್ರಿಯರ ಸಂತೃಪ್ತ್ಯರ್ಥವಾಗಿ ಮಾಡಿದ ಅಸಮಂಜಸ ಆರೋಪ ಎನ್ನಿಸುತ್ತದೆ. ಜಗಜ್ಜಾಹೀರು ಎಂಬುದು ಬಹುಶ: ಆ ಪಂಥ ಜಗತ್ತಿನ ಜಾಹೀರಾಗಿರಬಹುದಷ್ಟೆ' ಎಂದು ಸುಧಾಕರರು ಕೆಲವು ತಾತ್ವಿಕ ಕಾರಣಗಳ ಮೂಲಕ ವಿರೋಧಿಸುವುದು ಅರ್ಥಪೂರ್ಣವಾಗಿದೆ.

ಎಂ.ಜಿ. ಕೃಷ್ಣಮೂರ್ತಿ ಅವರು ಕುವೆಂಪು ಕಾದಂಬರಿಗಳನ್ನು ಕುರಿತು ನಿರ್ದಿಷ್ಟ ಉದ್ದೇಶದಿಂದ ಬರೆದ ವಿಮರ್ಶೆಯನ್ನು ಅನೇಕರು ಪ್ರಶ್ನಿಸಿ ಪ್ರತಿಕ್ರಿಯಿಸಿದ್ದಾರೆ. ಎಂಜಿಕೆ ಅವರು ಕನ್ನಡ ಮತ್ತು ಇಂಗ್ಲೀಷ್ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದವರು. ಆದರೆ ಗೋಪಾಲಕೃಷ್ಣ ಅಡಿಗ, ಗಿರಡ್ಡಿ ಗೋವಿಂದರಾಜು, ಯು.ಆರ್. ಅನಂತಮೂರ್ತಿ ಮೊದಲಾದ ವಿಮರ್ಶಕರು ಎಂ.ಜಿ. ಕೃಷ್ಣಮೂರ್ತಿಯವರ ನಿಲುವುಗಳನ್ನು ಸಮರ್ಥಿಸುತ್ತಾರೆ. ಈ ಸಮರ್ಥನೆಯ ಹಿಂದೆ ಅನೇಕ ಸಾಮಾಜಿಕವಾದ ಅನುಮಾನಗಳಿವೆ. ಆದರೆ ವಿ.ಎಂ. ಇನಾಂದಾರ್, ಎಂ. ಅಕಬರ್ ಆಲಿ, ದೇ.ಜವರೇಗೌಡ, ಎನ್. ಬೋರಲಿಂಗಯ್ಯ, ಸಿ.ಪಿ. ಕೃಷ್ಣಕುಮಾರ್ , ಹೆಚ್.ಎಂ. ಚನ್ನಯ್ಯ ಮೊದಲಾದವರು ಎಂ.ಜಿ. ಕೃಷ್ಣಮೂರ್ತಿಯವರ ಈ ಕಾದಂಬರಿಗಳ ಬಗೆಗಿನ ವಿಮರ್ಶೆಗಳನ್ನು, ಆ ವಿಮರ್ಶೆಯ ಧೋರಣೆಗಳನ್ನು ವಸ್ತುನಿಷ್ಠ ವಿಶ್ಲೇಷಣೆಗೆ ಗುರಿಪಡಿಸುತ್ತಾರೆ. ಎಂಜಿಕೆ ಅವರ ಪೂರ್ವ ನಿರ್ಧಾರಿತ ಯೋಜನಾ ವಿಮರ್ಶೆಯನ್ನು ಇವರು ಪ್ರಶ್ನಿಸಿ, ಕುವೆಂಪು ಕಾದಂಬರಿಗಳ ನ್ಯೂನ್ಯತೆಗಳನ್ನೇ ಮುಂದೆ ಮಾಡಿ ಈ ಹಿಂದಿನ ವಿಮರ್ಶಕರು ಈ ಕೃತಿಗಳು "ಮಾಹಾಕಾವ್ಯಗಳು" ಎಂದಿದ್ದನ್ನು ಸಮರ್ಥಿಸುತ್ತಾರೆ. ಕಾದಂಬರಿಗಳಲ್ಲಿ ಕಾವ್ಯಗುಣ, ನಾಟ್ಯಗುಣ, ಕಥನ ಗುಣ, ಸಹಜವಾಗಿ ಕಂಡು ಬಂದಿದ್ದರಿಂದ ಇವರು ಕಾದಂಬರಿಗಳನ್ನು 'ಮಹಾಕಾವ್ಯಗಳು' ಎಂದು ಕರೆದದ್ದರಲ್ಲಿ ಆಶ್ಚರ್ಯವಿಲ್ಲ. ಆದರೆ ವಿಚಿತ್ರವಾದ ಪ್ರಕ್ರಿಯೆ ಎಂದರೆ ಕುವೆಂಪು ಮರಣಾ ನಂತರ ಕೆಲವೇ ತಿಂಗಳುಗಳಲ್ಲಿ ಪ್ರಕಟವಾದ ಕೆ.ವಿ. ಸುಬ್ಬಣ್ಣನವರು 'ಕುವೆಂಪುಗೆ ಪುಟ್ಟ ಕನ್ನಡಿ' ಎಂಬ ಕೃತಿಯಲ್ಲಿ ಈ ಮೇಲಿನ ಎಲ್ಲ ವಿಮರ್ಶಕರ ವಿಮರ್ಶಾ ಧೋರಣೆಗಳಿಗೆ ಹತ್ತಿರವೋ ಎಂಬಂತೆ ಕುವೆಂಪು ಕಾದಂಬರಿಗಳನ್ನು ಕುರಿತು ಅವರು ವಿಶ್ಲೇಷಣೆ ಮಾಡಿರುವ ವಿಧಾನ ಬೆರಗು ತರಿಸುತ್ತದೆ. ಅದರಲ್ಲಿಯೂ ಎಂ.ಜಿ. ಕೃಷ್ಣಮೂರ್ತಿ, ಯು.ಆರ್. ಅನಂತಮೂರ್ತಿ, ಗಿರಡ್ಡಿ ಗೋವಿಂದರಾಜು ಮೊದಲಾದ ವಿಮರ್ಶಕರು ಹೂವಯ್ಯನ ಪಾತ್ರದ ದೌರ್ಬಲ್ಯದ ಬಗೆಗೆ ಎತ್ತಿದ ಪ್ರಶ್ನೆಗಳಿಗೆ ಉತ್ತರವೋ ಎಂಬಂತೆ ಈ ವಿಮರ್ಶಾ ಕೃತಿ ಹುಟ್ಟಿಕೊಂಡಂತೆ ಕಾಣಿಸುತ್ತದೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯನ್ನು ಬರೆದ ಕಾಲದ ಸಾಂಸ್ಕೃತಿಕ ಮಹತ್ವ, ಆ ಕಾಲದ ಸ್ಥಿತ್ಯಂತರಗಳು, ಅನುಸಂಧಾನಗಳು, ರಾಷ್ಟ್ರ ಮತ್ತು ಜಾಗತಿಕ ಮಟ್ಟದ ಆಗುಹೋಗುಗಳು ಈ ಕೃತಿಯಲ್ಲಿ ಅತ್ಯಂತ ಸಮರ್ಥವಾಗಿ ಮೈದಾಳಿದ್ದನ್ನು ಸುಬ್ಬಣ್ಣ ಅವರು ಚಿಂತಿಸುತ್ತಾರೆ. ಹೂವಯ್ಯನ ಪಾತ್ರವನ್ನು ಈ ಹಿಂದಿನ ವಿಮರ್ಶೆ ಗ್ರಹಿಸಿದ್ದನ್ನು ಪ್ರಸ್ತಾಪಿಸುತ್ತಾ ಅದಕ್ಕೆ ಸ್ಪಷ್ಟನೆಯೋ ಎಂಬಂತೆ ಈ ಕೆಳಗಿನ ಮಾತುಗಳನ್ನು ಅವರು ಬರೆಯುತ್ತಾರೆ:

"ಹೂವಯ್ಯನು ಅದೆಷ್ಟು ವಾಸ್ತವವಾಗಿದ್ದಾನೆ ಎಂಬ ಪ್ರಶ್ನೆಯು ಇಷ್ಟು ಕಾಲವೂ ಅನೇಕ ಓದುಗರನ್ನು ಅನುಮಾನಗೊಳಿಸಿದ್ದು ಅಸಹಜವೇನೂ ಅಲ್ಲ. ಅವನು ಕೆಲಮಟ್ಟಿಗೆ ನಿಜ, ಕೆಲಮಟ್ಟಿಗೆ ಸಮುದಾಯದ ಅಭೀಷ್ಟ ಆದರ್ಶಗಳ ಒಂದು ಪ್ರತಿಮೆ. ಅವನನ್ನು ಚಿತ್ರಿಸುವ ಭಿನ್ನ ಶೈಲಿಯೂ ಈ ಸೂಚನೆ ಕೊಡುತ್ತದೆ. ಅಥವಾ ಗರಿಷ್ಠ ಹೊಣೆಗಾರಿಕೆಯ ಕವಿಯು ಕಂಡ, ಕಾಣಿಸಿದ ಸಮುದಾಯದ ಗರ್ಭ ಸತ್ಯವೇ ಹೂವಯ್ಯ. ಸಮುದಾಯ ಗರ್ಭದಲ್ಲಿ ಕಣ್ ಮೂಡದೆ ಮಿಡುಕಿ ಮಿದುಗಾಲುಗಳಿಂದ ಒದೆಯುತ್ತಿರುವ - ಸಾಮಾನ್ಯರಿಗೆ ಸಾಮಾನ್ಯವಾಗಿ ಕಾಣಿಸದ - ಪಿಂಡ ಸತ್ಯ ಎನ್ನಿ. ಮೂವತ್ತರ ದಶಕದಲ್ಲಿ ಯಾವುದು ಪ್ರಾಯಶಃ ಸುಲಭವಾಗಿ ನಂಬಲಿಕ್ಕಾಗದ ಕಾದಂಬರಿ ಕನಸಾಗಿತ್ತೋ ಅದು, ಈಚಿನ ಅರವತ್ತು ವರ್ಷಗಳಲ್ಲಿ ನಮಗೆ ನನಸಾಗಿ ಬಂದು ಒಡನಾಡುತ್ತಿದೆ. ಈ ಅವಧಿಯಲ್ಲಿ ನಮ್ಮ ಕರ್ನಾಟಕದಲ್ಲಿ ಅತ್ಯುತ್ಕೃಷ್ಟ ಲೇಖಕರಾಗಿ, ಧೀಮಂತ ಚಿಂತಕರಾಗಿ, ಅಪೂರ್ವ ಜನನಾಯಕರಾಗಿ ಹತ್ತಾರು ಮಂದಿ ಹೂವಯ್ಯರು ದಲಿತ ಜಾತಿಗಳ ಚಿಪ್ಪೊಡೆದು ಚಿಮ್ಮಿ ಬಂದಿರುವುದನ್ನು ನಾವೇ ಕಂಡಿದ್ದೇವೆ - ಎನಿಸಿಕೊಳ್ಳಬಹುದು. ಶಾಂತವೇರಿಯವರಿಂದ ದೇವನೂರರ ತನಕ. 'ಕಾನೂರು ಹೆಗ್ಗಡಿತಿ'ಯಲ್ಲಿ ಕುವೆಂಪು, ಪ್ರಸ್ತುತ ಶತಮಾನದ ಹೊಸ ಇಂಡಿಯಾದ ಆಕಾಂಕ್ಷೆ ಸೋಲು ಸಾಧನೆಗಳನ್ನು ಶೋಧಿಸತೊಡಗಿದ್ದರು: ತಳಮಳ ಇಂಡಿಯಾದ ಗೊಮ್ಮಟ ಪ್ರತಿಮೆಯೆನ್ನುವಂತೆ ಹೂವಯ್ಯನನ್ನು ಸೃಜಿಸಿದ್ದರು. ಹೂವಯ್ಯನು 'ಅತಿಶಯಿತ' ಅವಾಸ್ತವ ಎಂಬ ವಾದವಿತ್ತಲ್ಲ? ಅದೂ ಕುವೆಂಪು ಮನಸ್ಸಿನಲ್ಲಿ ಕೆಲಸ ಮಾಡುತ್ತಿದ್ದಿರಬೇಕು, ಮಲೆನಾಡು ಕೊಂಪೆಯ ಹಿಂದುಳಿದ ಜಾತಿಯಲ್ಲಿ ಹುಟ್ಟಿಬಂದ ಹೂವಯ್ಯನು ಅಸಹಜವಾಗಿ ಕಂಡರೆ, ಇಕೊ ಈ ಕಾದಂಬರಿಯಲ್ಲಿ ಅವನನ್ನು ಉದ್ಭವಗೊಳಿಸಿದ ಸಾಮಾನ್ಯ ಸಮುದಾಯದ ನಿಜವನ್ನು ಕಾಣಿಸುತ್ತಿದ್ದೇನೆ ನೋಡಿ, ನಿಜವೂ ಸ್ವಲ್ಪ ಪುರಾಣವಾಗಿಯೇ ಕಂಡರೆ ಜೀರ್ಣಿಸಿಕೊಳ್ಳಿ ಅಂತ ಹೇಳುವ ಹಾಗೆ ಇದನ್ನು ರಚಿಸಿದರು."[೮]

ಈ ಭಾಗದಲ್ಲಿ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸಾಂಸ್ಕೃತಿಕ ಮಹತ್ವವನ್ನು ಸಮರ್ಥವಾಗಿ ಹಿಡಿದಿಟ್ಟಿರುವುದನ್ನು ಕಾಣುತ್ತೇವೆ. ಹಾಗೆಯೇ ಹೂವಯ್ಯನ ಪಾತ್ರದ ಸುತ್ತ ವಿವಾದವೆಬ್ಬಿಸಿದ ವಿಮರ್ಶಕರಿಗೆ ಕೊಟ್ಟ ಉತ್ತರದಂತೆಯೂ ಇದೆ. ಅಂತೆಯೇ 'ಕಾನೂರು ಹೆಗ್ಗಡಿತಿ' ಅನ್ಯಜ್ಞಾನ ಶಿಸ್ತುಗಳಿಗೆ ವಿಪುಲ ಸಾಮಾಗ್ರಿಯನ್ನು ಒದಗಿಸುವ ಸಾಂಸ್ಕೃತಿಕ ದಾಖಲೆಯೆಂದು ಸಹ ಅವರು ಸೂಚಿಸುವುದು ಸೂಕ್ತವಾಗಿಯೇ ಇದೆ.

'ಕಾನೂರು ಹೆಗ್ಗಡಿತಿ' ಕಾದಂಬರಿಯಂತೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕೆಲವು ಭಾಗಗಳ ಬಗೆಗೆ ವಿಮರ್ಶಕರು ಎತ್ತಿದ ಅಪಸ್ವರಗಳಿಗೂ ಈ ಕೃತಿಯಲ್ಲಿ ಕೆ.ವಿ. ಸುಬ್ಬಣ್ಣನವರು ಉತ್ತರವನ್ನು ಕಾಣಿಸುತ್ತಾರೆ. 'ಮದುಮಗಳು' ಕಾದಂಬರಿಯ ಚಾರಿತ್ರಿಕ ಹಾಗೂ ಅವಾಸ್ತವ ವರ್ಣನೆಗಳು ಅನಪೇಕ್ಷಣೀಯ ಅಲ್ಲವೆಂದು ಅಭಿಪ್ರಾಯ ಪಡುತ್ತಾರೆ. ಹಾಗೆಯೇ 'ಮದುಮಗಳು' ಕೃತಿಯ ಬಗೆಗಿನ, ಇಂಥ ನಿಲುವುಗಳ ಬಗ್ಗೆ ತೋರಿದ ಪ್ರತಿಕ್ರಿಯೆಯನ್ನು ಈ ಕೆಳಕಂಡಂತೆ ಉದಾಹರಿಸಬಹುದು:

"...ಈ ಕಾದಂಬರಿಯು ಪ್ರಕಟವಾದಾಗ ಕನ್ನಡ ಸಾಹಿತ್ಯ ಲೋಕದಲ್ಲಿ ದೊಡ್ಡ ಆಶ್ಚರ್ಯವೆದ್ದಿತ್ತು. ನನ್ನ ಹಲವು ಲೇಖಕ ಮಿತ್ರರಿಗೆ - ಕಾದಂಬರಿಯೊಳಕ್ಕೆ ಅರಗಿಸಿಕೊಳ್ಳದ ಆಧ್ಯಾತ್ಮದ ಗೀಳು ಇದರಲ್ಲಿ ಪ್ರಕ್ಷಿಪ್ತವಾಗಿ ಬಾರದೇ ಇರುತ್ತಿದ್ದರೆ ಇದು ಪ್ರಪಂಚ ಸಾಹಿತ್ಯದಲ್ಲೇ ಗೌರವಸ್ಥಾನ ಪಡೆದುಕೊಳ್ಳುತ್ತಿತ್ತು - ಅಂತ ಕಾಣಿಸಿತ್ತು.

ಗಡ್ಡದಯ್ಯನ ಪಾತ್ರ, ಅವನ ಜನ್ಮಜ್ಞಾನ ಕಾಲಜ್ಞಾನಗಳು ಇತ್ಯಾದಿಗಳಾದರೂ ದೊಡ್ಡದಲ್ಲ. ಆ ವಿವೇಕಾನಂದರ ಪ್ರಸಂಗ ಮತ್ತು ಕಲ್ಕತ್ತದ ಸನ್ಯಾಸಿಗಳ ಪ್ರಸಂಗ, ಹಾಗೂ ಕೆಲವು ಅವಾಸ್ತದ ವರ್ಣನೆಗಳು ಇವನ್ನಷ್ಟು ಕೈಬಿಟ್ಟಿದರೂ ಸಾಕಿತ್ತು, ಇದನ್ನು ಜಗತ್ ಶ್ರೇಷ್ಠ ಕಾದಂಬರಿಗಳಲ್ಲಿ ಒಂದೆರಡು ಪರಿಗಣಿಸಲು ಬರುತ್ತಿತ್ತು - ಅಂತ ಅವರು ಖೇದ ಪಟ್ಟಿದ್ದರು. ಇನ್ನು ಕೆಲವು ಮಿತ್ರರು, ಈ ಕಾದಂಬರಿಯ ಲೈಂಗಿಕ ಚಿತ್ರಣದಲ್ಲಿ ಕಾಣುವ ಸಂಕೀರ್ಣತೆಯನ್ನು ಇಂಥ ಸೂಕ್ಷ್ಮದಲ್ಲಿ ಮತ್ತು ಇಂಥ ಅಸಾಧಾರಣ ನಿರ್ಭಿಡೆಯಿಂದ - ಎಲ್ಲಾ ಬಿಟ್ಟು ಎನ್ನೋಣ - ಚಿತ್ರಿಸುವುದರಲ್ಲಿ ಕುವೆಂಪು ನಮ್ಮಲೇಖಕರೆಲ್ಲರನ್ನೂ ಹಿಂದೆ ಹಾಕಿದ್ದಾರೆ ಅಂತ ಅವರಿಗೆ ಅನ್ನಿಸಿತ್ತು. ಅದನ್ನೇ ನಾನೀಗ ಯೋಚಿಸಿಕೊಳ್ಳುತ್ತಿದ್ದೇನೆ. ಈಗಲೂ ಆ ಕಾದಂಬರಿಯ 'ಅನಪೇಕ್ಷಣೀಯ' ಭಾಗಗಳನ್ನು ಕತ್ತರಿಸಿದ ಹದ ಗಾತ್ರದ 'ಸಂಗ್ರಹ'ವನ್ನು ತಯಾರಿಸಬಹುದ. ಅಂಥ ಸಂಗ್ರಹ ಏನಾಗುತ್ತದೆ? ರಡ್ ಯಾರ್ಡ್ ಕಿಪ್ಲಿಂಗ್ ಮಲೆನಾಡಿಗೆ ಬಂದು ಇದ್ದು ಇಲ್ಲಿನ ಕೆಲವು ಹಳ್ಳಿ ಕುಟುಂಬಗಳನ್ನು ಅಭ್ಯಾಸ ಮಾಡಿ ನೋಟ್ಸ್ ಮಾಡಿಕೊಂಡು ವಾಪಸು ಹೋಗಿ ಬರೆದ ಕಾದಂಬರಿ - ಎನ್ನುವಂತಾಗಬಹುದು. ಅಥವಾ ಲೈಂಗಿಕ ಚಿತ್ರಣವನ್ನು ಕೇಂದ್ರವಾಗಿಸಿ ಸಂಗ್ರಹಿಸಿದರೆ ಅಸಾಧಾರಣ ರೋಚಕ ಸೆಕ್ಸ್ - ಹಾರರ್ ಕಾದಂಬರಿಯಾಗಬಹುದು. ಹಾಗೆ ಇದನ್ನು ಪಾಶ್ಚಾತ್ಯ ವೃತ್ತಿ ಎಡಿಟರ್ ಗಳಿಂದ ಚೆನ್ನಾಗಿ ಎಡಿಟ್ ಮಾಡಿಸಿ ತಾಜಾ ಸಮಕಾಲೀನ ಇಂಗ್ಲೀಷ್ ಗೆ ಪರಿವರ್ತಿಸಿದರೆ ಪ್ರಾಯಶಃ ಜಗತ್ತಿನಾದ್ಯಂತ 'ಬೆಸ್ಟ್ ಸೆಲರ್ ' ಆಗಬಹುದು. ಕನ್ನಡದ ಮಹತ್ಕೃತಿಯೇ ಆಗಿರಬೇಕು ಎನ್ನುವುದಾದರೆ, ಈಗಿದ್ದ ಹಾಗೇ - ಒಂದು ಅಕ್ಷರವೂ ಆಚೀಚೆಯಾಗದೆ, ಹಾಗೇ - ಇರಬೇಕು."[೯]

ಕೆ.ವಿ. ಸುಬ್ಬಣ್ಣನವರು 'ಕುವೆಂಪುಗೆ ಪುಟ್ಟ ಕನ್ನಡಿ' ಕೃತಿಯಲ್ಲಿ ಕುವೆಂಪುರವರ ಎರಡೂ ಕಾದಂಬರಿಗಳ ಸಾಂಸ್ಕೃತಿಕ ಮಹತ್ವವನ್ನು ಇಷ್ಟು ತಡವಾಗಿ ಚಿಂತಿಸಿದ್ದು ಮಾತ್ರ ಕುತೂಹಲವಾಗೇ ಉಳಿಯುತ್ತದೆ. ಕುವೆಂಪು ಮರಣದ ನಂತರ ಸುಬ್ಬಣ್ಣನವರು ಈ ಕೃತಿಯನ್ನು ಹೊರತಂದಿದ್ದು ಇತಿಹಾಸದ ವ್ಯಂಗ್ಯ. ಇದು ಏನೇ ಇರಲಿ ಕೆಲವು ನಮ್ಮ ವಿಮರ್ಶಕರು ಕುವೆಂಪು ಕಾದಂಬರಿಗಳ ಬಗೆಗೆ ಎತ್ತಿದ ಅಪಸ್ವರಗಳನ್ನು ಮತ್ತು ಆ ಅಪಸ್ವರಗಳಿಗೆ ಆನಂತರ ಕೆಲವು ವಿಮರ್ಶಕರು ತೋರಿದ ಪ್ರತಿರೋಧವನ್ನು ಗಮನಿಸುತ್ತಲೇ ೧೯೮೦ರ ನಂತರದ ವಿಮರ್ಶೆ ಬೇರೆಯದೇ ಆದ ದಿಕ್ಕನ್ನು ಕಂಡು ಕೊಂಡಿದ್ದನ್ನು ಕನ್ನಡ ವಿಮರ್ಶೆಯಲ್ಲಿ ಕಾಣುತ್ತೇವೆ.

ಕುವೆಂಪುರವರ ಕಥನಗಳು ಅನೇಕ ಜ್ಞಾನ ಶಾಖೆಗಳಿಗೆ ಆಕರಗಳಾಗಿಯು, ಅನೇಕ ವಿಮರ್ಶಾ ನೆಲೆಗಳಿಗೆ ಸಾಮಗ್ರಿಯಾಗಿಯೂ, ಮುಖಾಮುಖಿಯಾದುದ್ದನ್ನು ಆನಂತರದ ವಿಮರ್ಶೆಗಳನ್ನು ಗಮನಿಸಿದರೆ ತಿಳಿದು ಬರುವ ಮುಖ್ಯ ಸಂಗತಿಯಾಗಿದೆ. ಸಾಮಾಜಿಕ, ಚಾರಿತ್ರಿಕ, ವರ್ಗ - ವರ್ಣನೆಗಳ ಸಂಘರ್ಷ, ವಸಾಹತುಶಾಹಿ ಅಧ್ಯಯನಗಳು, ಮನೋವೈಜ್ಞಾನಿಕ ವಿಶ್ಲೇಷಣೆ, ಭಾಷಾ ನೆಲೆಗಳ ಜಿಜ್ಞಾಸೆ, ಪರಿಸರದ ಚಿಂತನೆ ಹೀಗೆ ಹತ್ತು ಹಲವು ಅಧ್ಯಯನಗಳಿಗೆ ಆಕರ ಕೃತಿಗಳಾಗಿ ಚರ್ಚೆಗೆ ಒಳಗಾಗಿರುವುದನ್ನು ಕಾಣುತ್ತೇವೆ. ಡಿ.ಆರ್. ನಾಗರಾಜ್, ರಾಜೇಂದ್ರ ಚೆನ್ನಿ, ರಾಜಾರಾಮ್ ಹೆಗಡೆ, ರಹಮತ್ ತರೀಕೆರೆ, ಆರ್ಕೆ ಮಣಿಪಾಲ, ಹೆಚ್.ಎಂ. ಚನ್ನಯ್ಯ, ಅಕಬರ್ ಆಲಿ, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಎನ್. ಬೋರಲಿಂಗಯ್ಯ, ಎಚ್.ಜೆ. ಲಕ್ಕಪ್ಪಗೌಡ, ಕೆ.ವಿ. ಸುಬ್ಬಣ್ಣ, ಸಿ.ಪಿ. ಕೃಷ್ಣಕುಮಾರ್, ಶ್ರೀಕಂಠ ಕೂಡಿಗೆ, ಬಸವರಾಜ ಕಲ್ಗುಡಿ, ಮೊದಲಾದ ವಿಮರ್ಶಕರು ಈ ಕೃತಿಗಳನ್ನು ವಿಭಿನ್ನ ನೆಲೆಗಳಲ್ಲಿ ವಿಮರ್ಶಿಸಿದ್ದಾರೆ. ಈ ಹಿನ್ನೆಲೆಯಲ್ಲಿ ರಾಜೇಂದ್ರ ಚನ್ನಿಯರ ಮಾತುಗಳನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ.

"ಅವರ ಕಾದಂಬರಿಗಳ ಮೇಲಿನ ವಿಮರ್ಶೆಯನ್ನು ಓದಿದಾಗ ಅವರು ಬರೆಯಬಹುದಾಗಿದ್ದ ಕಾದಂಬರಿಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ವಿಮರ್ಶಕರು ತೋರಿದ್ದಾರೆ ಎನ್ನಿಸುತ್ತದೆ. ಅಂದರೆ ಹಲವಾರು ದೃಷ್ಟಿಯಲ್ಲಿ ಕುವೆಂಪು ಅವರ ಕಾದಂಬರಿಗಳು ಅತ್ಯುನ್ನತ ಕಲೆಗಾರಿಕೆಯ ಹೊಳಹುಗಳನ್ನು ತೋರಿಸಿದರೂ ಅವು ಕಲಾಕೃತಿಗಳಾಗಿ ಪಡೆಯುವ ಯಶಸ್ಸು ಹೆಚ್ಚಿನದಲ್ಲ ಎನ್ನುವ ಅಭಿಪ್ರಾಯವಿದೆ. ಎರಡೂ ಕಾದಂಬರಿಗಳ ಬಂಧದ ಶಿಥಿಲತೆಯ ಬಗ್ಗೆ, ಕೆಲವು ಘಟನೆಗಳ ಮತ್ತು ಪಾತ್ರಗಳ ನ್ಯೂನತೆಗಳ ಬಗ್ಗೆ ವಿಮರ್ಶೆ ಹೆಚ್ಚು ಆಸಕ್ತಿ ತೋರಿದೆ. ಆದರೆ ಕುವೆಂಪು ಅವರ ಕಾದಂಬರಿಗಳು ಕೇವಲ ಪ್ರಾದೇಶಿಕ ವಿವರಗಳ ಸಮೃದ್ಧಿಯಿಂದ ಅಥವಾ ಬಿಡಿಬಿಡಿಯಾಗಿ ಅಲ್ಲಲ್ಲಿ ಕಾಣುವ ಪ್ರತಿಭೆಯಿಂದ ನಮಗೆ ಮುಖ್ಯವಾಗಬೇಕಾದ ಕಾದಂಬರಿಗಳಲ್ಲ. ಅವು ಒಂದು ನಿಶ್ಚಿತವಾದ ಮೌಲ್ಯಕಲ್ಪನೆಯನ್ನು, ಪ್ರಬುದ್ಧವಾದ ಒಂದು ಜೀವನದೃಷ್ಟಿಯನ್ನು ಕಲಾಸೃಷ್ಟಿಯ ಮೂಲಕ ಸಂವಹಿಸುವ ಎರಡು ಸ್ವಯಂಪೂರ್ಣ ಕೃತಿಗಳು. ಎಲ್ಲ ಶ್ರೇಷ್ಠ ಕೃತಿಗಳಂತೆ ಅವುಗಳಲ್ಲಿಯೂ ಈ ಜೀವನ ದೃಷ್ಟಿ ಮತ್ತು ಅದು ವ್ಯಕ್ತವಾಗುವ ಕಲಾ ಸೃಷ್ಟಿ (ಕಾದಂಬರಿಯ ಬಂಧವೂ ಸೇರಿದಂತೆ) ಇವೆರಡೂ ಅಭಿನ್ನವಾಗಿವೆ. ಆದ್ದರಿಂದಲೇ ಅವರ ಕಾದಂಬರಿಗಳ ವಿಮರ್ಶೆಯಲ್ಲಿ ವಸ್ತು, ಬಂಧ ಮತ್ತು ಜೀವನ ದೃಷ್ಟಿ ಇವುಗಳನ್ನು ಬೇರ್ಪಡಿಸಿ ನೋಡುವುದು ತಪ್ಪಾಗುತ್ತದೆ. ಆದರೆ ಬಂಧದ ಬಗ್ಗೆ ಒಂದು ಮಾತನ್ನು ಇಲ್ಲಿಯೇ ಹೇಳುವುದು ಉಚಿತ. ಕುವೆಂಪು ವಾಸ್ತವವಾದಿ ಕಾದಂಬರಿಯ ಬಂಧವನ್ನೇ ಬಳಸಿಕೊಳ್ಳುತ್ತಾರೆ. ವಾಸ್ತವವಾದಿ ಕಾದಂಬರಿಯ ಬಂಧ - ಪಾತ್ರಗಳ ಸಾಮ್ಯ ವೈಷಮ್ಯ, ಘಟನೆಗಳು ಲಯಬದ್ಧವಾಗಿ ಸೃಷ್ಟಿಸುವ ಗತಿ, ಮತ್ತು ನಿರೂಪಕನ ಅಸ್ತಿತ್ವ ಇವೆಲ್ಲವೂ ಹೆಣೆದುಕೊಂಡಾಗ ಹುಟ್ಟುವ ಬಂಧ ಇದು. ನವ್ಯ ವಿಮರ್ಶೆಗೆ ಆಧಾರವಾಗಿರುವ ಕಾವ್ಯದ ಬಂಧಕ್ಕಿಂತ ತುಂಬಾ ಬೇರೆಯಾದ ಬಂಧ ಇದು. ಆದ್ದರಿಂದಲೇ ಕಾದಂಬರಿಯ ಕೆಲವು ಭಾಗಗಳನ್ನು ಭಾಷೆಯ ಚೌಕಟ್ಟಿನಲ್ಲಿ ವಿಮರ್ಶಿಸಿ ತೀರ್ಮಾನಿಸುವುದು ಅಸಂಬದ್ಧವಾಗುತ್ತದೆ."[೧೦]

ಈ ಉಲ್ಲೇಖದಲ್ಲಿ ರಾಜೇಂದ್ರ ಚೆನ್ನಿಯವರು ಕುವೆಂಪು ಕಾದಂಬರಿಗಳ ಮೇಲಿನ ವಿಮರ್ಶೆಯನ್ನು ಓದಿದಾಗ, ಕುವೆಂಪು ಬರೆಯಬಹುದಾಗಿದ್ದ ಕಾದಂಬರಿಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ವಿಮರ್ಶಕರು ತೋರಿಸಿದ್ದನ್ನು ಪ್ರಸ್ತಾಪಿಸುತ್ತಾರೆ. ಹಾಗೆಯೇ ಇಂಥ ವಿಮರ್ಶಕರು ಎರಡೂ ಕಾದಂಬರಿಗಳ ಬಂಧದ ಶಿಥಿಲತೆಯ ಬಗ್ಗೆ, ಕೆಲವು ಘಟನೆಗಳ ಮತ್ತು ಪಾತ್ರಗಳ ನ್ಯೂನತೆಯ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರಿದ್ದರಿಂದ ಅಂಥ ವಿಮರ್ಶೆಗೆ ತನಗೆ ತಾನೆ ಒಂದು ಮಿತಿ ಬಂದದ್ದನ್ನು ಸೂಚಿಸುತ್ತಾರೆ. ಹಾಗೆಯೇ ಅವರು ವಾಸ್ತವವಾದಿ ನೆಲೆಯ ಕಾದಂಬರಿಗಳನ್ನು ಅಧ್ಯಯನ ಮಾಡಬೇಕಾದ ವಿಮರ್ಶಾನೆಲೆಯ ಮಾದರಿಯೊಂದನ್ನು ಶೋಧಿಸಿಕೊಳ್ಳುತ್ತಾರೆ. ಅಂಥ ವಿಮರ್ಶಾ ನೆಲೆಯ ಶೋಧನೆಯಿಂದ ಎರಡೂ ಕಾದಂಬರಿಗಳ ಅನನ್ಯತೆಯನ್ನು ಶೋಧಿಸುವ ಈ ಬರಹ ಕುವೆಂಪು ಕಾದಂಬರಿಗಳ ಕುರಿತು ಬಂದಿರುವ ಬಹುಮುಖ್ಯ ವಿಮರ್ಶೆಗಳಲ್ಲಿ ಇದೂ ಒಂದು.

ಸ್ವತಃ ಕುವೆಂಪು ಅವರೆ, ಕುವೆಂಪು ಬರೆಯಬಹುದಾಗಿದ್ದ ಕೃತಿ, ಬರೆದ ಕೃತಿಗಳ ಮೇಲಿನ ವಿಮರ್ಶೆಯನ್ನು ಗಮನಿಸಿ, ಅವರ ಎರಡು ಸಂದರ್ಶನಗಳ ವಿಷಯಗಳ ಕಡೆ ಗಮನ ಸೆಳೆಯುವುದು ಇಲ್ಲಿ ಮುಖ್ಯವೆನಿಸುತ್ತದೆ. ೧೯೬೮ ರಲ್ಲಿ, ಪ್ರಜಾವಾಣಿ ದಿನಪತ್ರಿಕೆಗೆ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ಕುವೆಂಪು ಅವರನ್ನು ಸಂದರ್ಶನ ಮಾಡುತ್ತ, ಈ ಕೆಳಗಿನ ಪ್ರಶ್ನೆಯನ್ನು ಹಾಕುತ್ತಾರೆ:

"ಆದರ್ಶವಾದ ಹೂವಯ್ಯನ ಪಾತ್ರದಲ್ಲಿ ಮಾತ್ರವಲ್ಲದೆ ಅದು ಕಾದಂಬರಿಯ ಸೃಷ್ಟಿಯಲ್ಲಿಯೂ ತಲೆದೋರಿದೆ" ಎನ್ನುತ್ತಾರೆ. ಈಗ ಉದಾಹರಣೆಗೆ ಸೀತೆ ಹೂವಯ್ಯನಿಗೆಂದು ಕೊಟ್ಟ ಕಾಗದ ಅದು ಹೂವಯ್ಯನಿಗೆ ತಲುಪದೆ ರಾಮಯ್ಯನಿಗೆ ತಲುಪುತ್ತದೆ. ಅದು ನೇರವಾಗಿ ಹೂವಯ್ಯನಿಗೇ ತಲುಪಿದ್ದರೇ ಆಗ ಹೂವಯ್ಯನ ಆದರ್ಶವಾದಕ್ಕೆ ಇನ್ನೂ ಕಠೋರ ಅಗ್ನಿ ಪರೀಕ್ಷೆ ಒದಗುತ್ತಿತ್ತು. ಅನೇಕ ಬಾರಿ ಕವಿಯ ಆದರ್ಶವಾದದ ಒಲವು ಹೂವಯ್ಯನನ್ನು ರಕ್ಷಿಸುವುದರವರೆಗೂ ಹೋಗುತ್ತದೆ ಎನ್ನುತ್ತಾರಲ್ಲಾ? ಇದರ ಬಗ್ಗೆ ಈ ರೀತಿ ಉತ್ತರಿಸಿದ್ದಾರೆ: "ಅದು ನೇರವಾಗಿ ಹೂವಯ್ಯನಿಗೇ ತಲುಪಿದ್ದರೆ ಎನ್ನುವ ಈ ವಿಮರ್ಶಕರಿದ್ದಾರಲ್ಲಾ ಅವರಂಥ ಪ್ರಚ್ಛನ್ನ ಕಠೋರ ಆದರ್ಶವಾದಿಗಳು ಬೇರೆ ಯಾರೂ ಇಲ್ಲ. ಏಕೆಂದರೆ ಆದರ್ಶವಾದದ ಬಗೆಗೇ ಒಂದು ಆದರ್ಶ ಕಲ್ಪನೆ ಅವರ ಮೆದುಳೊಳಗಿರುವುದರಿಂದ ಈ ಬಗೆಯ ವಿಕೃತ ವಿಮರ್ಶೆ ಪ್ರಾರಂಭಿಸುತ್ತಾರೆ. ಇನ್ನೊಬ್ಬ ಕೃಷ್ಣಪ್ಪನನ್ನೇ ಏಕೆ ಹುಲಿ ಸಾಹಿಸಬೇಕಿತ್ತು? ಎನ್ನಬಹುದು. ಮತ್ತೊಬ್ಬ ವಾಸ್ತವವಾದಿ ಸುಬ್ಬಮ್ಮ ಏಕೆ ಗರ್ಭಸ್ರಾವ ಮಾಡಿಸಿಕೊಳ್ಳಬೇಕಿತ್ತು. ಅವಳಿಗೆ ಮಗು ಜನಿಸಿದ್ದರೆ ಆಗಿನ ಕಾಲದ ಸಾಮಾಜಿಕ ಪರಿಸರದ ಪ್ರತಿಕ್ರಿಯೆಗಳನ್ನು ಇನ್ನೂ ವಾಸ್ತವವಾಗಿ ಚಿತ್ರಿಸಬಹುದಾಗಿತ್ತು ಎನ್ನಬಹುದು. ಈ ತರಹದ ಚಿಂತನೆಗಳು ಆಧ್ಯಾತ್ಮ ಮತ್ತು ತತ್ವ ಮೀಮಾಂಸೆಗಳಾದಾವೇ ಹೊರತು ಸಾಹಿತ್ಯ ವಿಮರ್ಶೆ ಅಲ್ಲ." ಎಂದು ಉತ್ತಿರಿಸಿದ್ದನ್ನು ತೇಜಸ್ವಿಯರು ತಮ್ಮ 'ಅಣ್ಣನ ನೆನಪು' ಕೃತಿಯಲ್ಲಿ ದಾಖಲಿಸಿದ್ದಾರೆ.[೧೧]

ಕುವೆಂಪು ಅವರನ್ನು ಈಶ್ವರ ಸಣಕಲ್ ಅವರು ಮಾಡಿದ ಮತ್ತೊಂದು ಸಂದರ್ಶನದ ಭಾಗವನ್ನು ಇಲ್ಲೇ ಉಲ್ಲೇಖಿಸುವುದು ಸೂಕ್ತವೆನ್ನಿಸುತ್ತದೆ.

"ನಂತರ ಅವರು 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಯ ಬಗೆಗೆ ಮಾತು ಹೊರಟಿತು. ನನ್ನ ಜೊತೆಗೆ ಬಂದಿದ್ದ ಗೆಳೆಯ ಮುಳಗುಂದದವರು 'ತಮ್ಮ ಮಹಾಕಾದಂಬರಿಯನ್ನು ಓದಿರುವೆ! ಅದೊಂದು ಉತ್ತಮ ಕೃತಿ!' ಎಂದರು. ಅವರ ಜೊತೆಗೆ ನಾನು ದನಿಗೂಡಿಸಿ 'ನನ್ನ ಆ ಗೆಳೆಯರು ಹೇಳುವಂತೆ ನಿಮ್ಮ ಕಾದಂಬರಿ ಉತ್ತಮವಿದ್ದರೂ ಅದನ್ನು ಕುರಿತು ಸದ್ಯದ ವಿಮರ್ಶಕರು ಎತ್ತಿದ ಆಕ್ಷೇಪಗಳಿಗೆ ನಿಮ್ಮ ಉತ್ತರವೇನು?' ಎಂದು ಕೇಳಿದೆ. ಅದಕ್ಕೆ ಅವರು 'ಸಣಕಲ್ಲ, ಆ ಕಾದಂಬರಿಯು ಮಾಡಿದ್ದಲ್ಲ ಮೂಡಿದ್ದು; ಅದಕ್ಕೆ ನಾನೇನು ಉತ್ತರ ಕೊಡಲಿ. ಇಂದಿನ ಈ ಕವಿಯ ಕಣ್ಣು ಮುಚ್ಚಬೇಕು; ಸದ್ಯದ ವಿಮರ್ಶಕರ ಕಾಲವೂ ಹೋಗಬೇಕು! ಮುಂದೆ ನಿಷ್ಪಕ್ಷಪಾತವಾದ ಒಂದು ಪೀಳಿಗೆಯು ಬಂದಾಗ ನಿಜವಾದ ವಿಮರ್ಶೆಯು ಬಂದಿತು! ಆಗ ನನ್ನ ಕೃತಿಯ ನಿಜವಾದ ಅರ್ಥವೂ ಆದೀತು!"[೧೨] ಎಂದು ಕುವೆಂಪು ಅವರು ಉತ್ತರಿಸಿದ್ದು ಇಂದಿನ ಪ್ರಸ್ತುತ ಸಂದರ್ಭದಲ್ಲಿ ನಿಜವಾಗಿದೆ.

ಈ ಮೇಲಿನ ಎರಡೂ ಸಂದರ್ಶನಗಳ ಪ್ರಶ್ನೆಗಳಿಗೆ ಉತ್ತರಿಸಿದ ಉತ್ತರಗಳಲ್ಲಿ ಕುವೆಂಪು ಅವರ ತೀವ್ರವಾದ ಪ್ರತಿಕ್ರಿಯೆಯನ್ನು ಕಾಣುತ್ತೇವೆ. ಲೇಖಕನೊಬ್ಬನು ಬರೆದ ಕೃತಿಯ ಬಗೆಗೆ ವಿಮರ್ಶಕರು ಆಕ್ಷೇಪಗಳನ್ನೆತ್ತಿ, ಹಾಗೆ ಬರೆದಿದ್ದರೆ ಅಥವಾ ಹೀಗೆ ಬರೆದಿದ್ದರೆ ಎಂಬ ಸಂದೇಹಗಳಿಗೆ ಈ ಮೇಲಿನ ಉದ್ಧರಣೆಗಳಲ್ಲಿ ಕುವೆಂಪು ಅವರ ಅಭಿಪ್ರಾಯ ಸ್ಪಷ್ಟವಾಗಿಯೇ ವ್ಯಕ್ತವಾಗಿದೆ. ಹಾಗೆಯೇ ೧೯೪೦ರ ದಶಕದ ನಂತರದ ಕುವೆಂಪು ಅವರ ಎರಡೂ ಕಾದಂಬರಿಗಳನ್ನು ಕುರಿತು ಈ ಹಿಂದಿನ ವಿಮರ್ಶಕರು ಎತ್ತಿದ ಆಕ್ಷೇಪಣೆಗಳನ್ನು ಬಿಟ್ಟು, ಎರಡೂ ಕಾದಂಬರಿಗಳ ಅಧ್ಯಯನದ ಸಾಧ್ಯತೆಗಳನ್ನು ಕುರಿತು ಪ್ರಕಟವಾಗಿರುವ ವಿಮರ್ಶೆಯನ್ನು ಗಮನಿಸಿದರೆ ಶ್ರೀ ಈಶ್ವರ ಸಣಕಲ್ಲ ಅವರಿಗೆ ಕುವೆಂಪು ಕೊಟ್ಟ ಉತ್ತರದ ಆಶಯ ಈಡೇರಿದೆ ಎನ್ನಬಹುದು.

ಸುಮಾರು ಇಪ್ಪತ್ತು ಮೂವತ್ತು ವರ್ಷಗಳಿಂದ ಈ ಮೇಲಿನ ಅನಾವಶ್ಯಕ ಜಿಜ್ಞಾಸೆಯಲ್ಲಿ ವಿಮರ್ಶಾಲೋಕ ಕಾಲ ಕಳೆದಿದೆ. ಇಂಥ ಬರಹಗಳನ್ನು ಗಮನಿಸಿದಾಗ, ಒಂದು ನೂರು ವರ್ಷಗಳಲ್ಲಿ ಕನ್ನಡ ಕಾದಂಬರಿ ನಡೆದು ಬಂದ ದಾರಿಯಲ್ಲಿ ಕುವೆಂಪು ಅವರ ಎರಡೂ ಕಾದಂಬರಿಗಳೂ ಇಂದು ಅತ್ಯಂತ ಉತ್ಕೃಷ್ಟ ರಚನೆಗಳಂತೆ ಕಾಣುತ್ತವೆ. ದೇವನೂರು ಮಹಾದೇವ, ರಾಜೇಂದ್ರ ಚೆನ್ನಿಯಂತಹ ಪ್ರಬುದ್ಧ ಸಂವೇದನೆಯುಳ್ಳ ಲೇಖಕ ಮತ್ತು ವಿಮರ್ಶಕರು ಎರಡೂ ಕಾದಂಬರಿಗಳನ್ನು ಕಳೆದ ಶತಮಾನದ ಶ್ರೇಷ್ಠ ರಚನೆಗಳೆಂದು ಗುರುತಿಸಿದ್ದಾರೆ. ಇಂಥ ರಚನೆಗಳನ್ನು, ಆ ರಚನೆಗಳ ಸಾಂಸ್ಕೃತಿಕ ಮಹತ್ವವನ್ನು ಅಧ್ಯಯನಕ್ಕೆ ಒಳಪಡಿಸದೆ 'ಕಾನೂರು ಹೆಗ್ಗಡಿತಿ'ಯ ಬಂಧ, ಶಿಲ್ಪ, ಹೂವಯ್ಯನ ಭಾವುಕತೆ, ಆದರ್ಶವಾದ ಇವುಗಳ ನೆಲೆಯಲ್ಲಿಯೇ ಕನ್ನಡ ವಿಮರ್ಶಾ ಸಂವೇದನೆ ಗಾಣದೆತ್ತಿನಂತೆ ಸುತ್ತುತ್ತಿರುವುದು ಈ ಮಹತ್ವ ಕೃತಿಗಳ ಬಹುಮುಖ್ಯ ಆಶಯಗಳನ್ನು ಗ್ರಹಿಸದೆ ಹೋಯಿತೆನ್ನಬಹುದು.

ಇದೂವರೆವಿಗೂ ಕುವೆಂಪು ಅವರ ಎರಡೂ ಕಥನಗಳನ್ನು ಕುರಿತು ಹಲವು ವಿಮರ್ಶಕರು ಎತ್ತಿದ ಆಕ್ಷೇಪಣೆಗಳು, ಅಂಥ ಆಕ್ಷೇಪಣೆಗಳಿಗೆ ಹಲವು ವಿಮರ್ಶಕರು ತೋರಿದ ಪ್ರತಿಕ್ರಿಯೆಗಳನ್ನು ಚರ್ಚಿಸಿದವು. ಕನ್ನಡ ವಿಮರ್ಶೆ, ಕುವೆಂಪು ಅವರ ಕಾದಂಬರಿಗಳ ಮೇಲೆ ಮೊದಲೇ ಹೇಳಿದಂತೆ ಸಾವಿರಕ್ಕೂ ಮಿಗಿಲಾದ ಪುಟಗಳಲ್ಲಿ ಪ್ರತಿಕ್ರಿಯಿಸಿದೆ. ಈ ಪ್ರತಿಕ್ರಿಯೆಯು ಯಾವ ಬಗೆಯದು ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸುವ ಕಾರ್ಯದಲ್ಲಿ ತೊಡಗಿದ್ದೇನೆ. ಈ ಚರ್ಚೆಯನ್ನು ಮುಖ್ಯವಾಗಿ ಎರಡು ನೆಲೆಗಳಲ್ಲಿ ನೋಡಬಹುದೆಂದು ಕಾಣುತ್ತದೆ. ಎರಡೂ ಕಾದಂಬರಿಗಳು ಪ್ರಕಟವಾದ ದಿನದಿಂದ ಇದೂವರೆಗೂ ಪ್ರಕಟವಾದ ವಿಮರ್ಶೆಯನ್ನು ಕಾಲಾನುಕ್ರಮದಲ್ಲಿ ಅಧ್ಯಯನ ಮಾಡುವುದು ಒಂದು ವಿಧವಾದರೆ, ಈ ಕಥನಗಳ ಸಾಂಸ್ಕೃತಿಕ ಮಹತ್ವವನ್ನು ಕುರಿತು ಭಿನ್ನ ದೃಷ್ಟಿಕೋನಗಳಿಂದ, ಸೈದ್ಧಾಂತಿಕ ನೆಲೆಗಳಿಂದ, ಅಥವಾ ವಸ್ತು ಆಧಾರಿತ ಅಧ್ಯಯನಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡುವುದು ಮತ್ತೊಂದು ವಿಧಾನ. ಅಂದರೆ ಕುವೆಂಪು ಕಾದಂಬರಿಗಳನ್ನು ಕುರಿತು ಸಮಕಾಲೀನರು ತೋರಿದ ಪ್ರತಿಕ್ರಿಯೆಯನ್ನು ಈ ಎರಡನೆಯ ದೃಷ್ಟಿಕೋನಗಳಲ್ಲಿ ನೋಡುವುದು ಹೆಚ್ಚು ಅರ್ಥಪೂರ್ಣ ಎನ್ನಿಸುತ್ತದೆ.

ಈಗಾಗಲೇ ಪ್ರಸ್ತಾಪಿಸಿದಂತೆ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ೧೯೭೭ರ ಜನವರಿಯಲ್ಲಿ ನಡೆಸಿದ, ಕುವೆಂಪು ಸಾಹಿತ್ಯ ಕುರಿತ ವಿಚಾರ ಸಂಕಿರಣದಲ್ಲಿ ಮಂಡಿತವಾದ ಅನೇಕ ಪ್ರಬಂಧಗಳಲ್ಲಿ ಕುವೆಂಪು ಸಾಹಿತ್ಯವನ್ನು ಕುರಿತಾದ ಚಿಂತನೆ ಹೊಸ ದಿಕ್ಕನ್ನು ಪಡೆಯಿತು ಎಂದು ಹೇಳಬಹುದು. ಈ ಸಂಕಿರಣದಲ್ಲಿ ಚರ್ಚಿತವಾದ ಅನೇಕ ಪ್ರಬಂಧಗಳು, ಕುವೆಂಪು ಸಾಹಿತ್ಯವನ್ನು ಕುರಿತು ಹೊಸ ಸಮಸ್ಯೆ ಮತ್ತು ಪ್ರಶ್ನೆಗಳನ್ನು ವಿಭಿನ್ನವಾದ ವಾಗ್ವಾದಕ್ಕೆ ಹಾಗೂ ಚಿಂತನೆಗೆ ಒಳಪಡಿಸುತ್ತವೆ. ಈ ಸಂಕಿರಣದಲ್ಲಿ ಮಂಡಿಸಿದ ಲೇಖನಗಳನ್ನು ಡಾ. ಜಿ.ಎಸ್ . ಶಿವರುದ್ರಪ್ಪನವರು 'ಶ್ರೀ ಕುವೆಂಪು' ಎಂಬ ಪುಸ್ತಕದಲ್ಲಿ ಸಂಕಲಿಸಿದ್ದಾರೆ. ಇಲ್ಲಿನ ಲೇಖನಗಳನ್ನು ಕುರಿತು ಅವರು "ಶ್ರೀ ಕುವೆಂಪು ಅವರ ಸಾಹಿತ್ಯ ನಿರ್ಮಿತಿಯ ಹಿನ್ನೆಲೆಯನ್ನೂ, ಹಲವು ಮಗ್ಗುಲಗಳನ್ನೂ, ಒಲವು ನಿಲುವುಗಳನ್ನೂ ಹೊಸ ನಿಟ್ಟಿನಿಂದ ಪರಿಶೀಲಿಸಿದವುಗಳಾಗಿವೆ. ಕುವೆಂಪು ಸಾಹಿತ್ಯವನ್ನು ಕುರಿತು ಇದುವರೆವಿಗೂ ಬಂದಿರುವ ವಿಮರ್ಶೆಯ ಹಿನ್ನೆಲೆಯಲ್ಲಿ ನೋಡಿದರೂ, ಇಲ್ಲಿರುವ ಲೇಖನಗಳು ಎಷ್ಟರ ಮಟ್ಟಿಗೆ ಬೇರೆಯ ಬಗೆಯವು ಎಂಬುದು ಓದುಗರಿಗೆ ಸ್ವಯಂ ಸ್ಪಷ್ಟವಾಗುತ್ತದೆ. ಮತ್ತು ಕುವೆಂಪು ಅವರ ಕೃತಿಗಳ ಅಧ್ಯಯನಕ್ಕೆ ಹೊಸ ನೆಲೆಗಳನ್ನು ಇವು ಒದಗಿಸುವಂಥವುಗಳಾಗಿವೆ."[೧] ಎಂದು ಅಭಿಪ್ರಾಯ ಪಡುತ್ತಾರೆ.

ಡಾ. ಜಿ.ಎಸ್. ಶಿವರುದ್ರಪ್ಪನವರ ಈ ಮೇಲಿನ ಮಾತುಗಳನ್ನು ಇಷ್ಟು ವರ್ಷಗಳ ನಂತರವು ಒಪ್ಪಿಕೊಳ್ಳಬೇಕಾಗುತ್ತದೆ. ಕುವೆಂಪು ಸಾಹಿತ್ಯವನ್ನು ಕುರಿತು ಹೊಸ ಜಿಜ್ಞಾಸೆಗೆ ಅನುವು ಮಾಡಿಕೊಟ್ಟ ಈ ಕೃತಿಯಲ್ಲಿನ ಬಹುಪಾಲು ಲೇಖನಗಳು ಇಂದಿಗೂ ಮಹತ್ವದ ಸಾಂಸ್ಕೃತಿಕ ದಾಖಲೆಗಳಾಗಿವೆ. ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ 'ಪರಂಪರೆ ಮತ್ತು ಕುವೆಂಪು', ಡಿ.ಆರ್. ನಾಗರಾಜ್ ರವರ 'ಕುವೆಂಪು ಕೃತಿಗಳಲ್ಲಿ ವರ್ಣ - ವರ್ಗ ಸಂಘರ್ಷ', ಬಿ. ಕೃಷ್ಣಪ್ಪನವರ 'ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರ', ಕೆ.ಎಸ್. ಭಗವಾನ್ ರವರ 'ಕುವೆಂಪು ಅವರ ಗದ್ಯ', ಕೆ.ವಿ. ನಾರಾಯಣರವರ 'ವಿಮರ್ಶಕರಾಗಿ ಕುವೆಂಪು', ಎಚ್.ಎಂ. ಚನ್ನಯ್ಯನವರ 'ಕುವೆಂಪು ಅವರ ವೈಚಾರಿಕತೆ', ಎಂ.ಡಿ. ನಂಜುಂಡ ಸ್ವಾಮಿಯರವ 'ಸಮಕಾಲೀನತೆಯಲ್ಲಿ ಕುವೆಂಪು - ಕ್ರಿಯೆ, ಪ್ರತಿಕ್ರಿಯೆ' ಈ ಲೇಖನಗಳಲ್ಲಿ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಎತ್ತಿದ ಬಹುಪಾಲು ಪ್ರಶ್ನೆಗಳು, ಸಂದೇಹಗಳು, ಸಮಸ್ಯೆಗಳು ಕುವೆಂಪು ಕೃತಿಗಳ ಅಧ್ಯಯನಕ್ಕೆ ಪ್ರೇರಕ ಶಕ್ತಿಗಳಾಗಿವೆ.

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ 'ಶ್ರೀ ಕುವೆಂಪು' ಪುಸ್ತಕದಲ್ಲಿನ ಲೇಖನ ಕುವೆಂಪು ವ್ಯಕ್ತಿತ್ವದ ಮತ್ತು ಸಾಹಿತ್ಯದ ನೆಲೆಯಲ್ಲಿ ಈ ಹಿಂದೆ ಇದ್ದ ಅನೇಕ ಟೀಕೆ ಅನುಮಾನಗಳಿಗೆ ಹೊಸ ಕಾಣ್ಕೆಗಳನ್ನೆ ಎದುರಾಗಿಸುತ್ತದೆ. ಅಷ್ಟೇ ಅಲ್ಲದೆ ಹಿಂದೂ ಧರ್ಮವನ್ನು ತಿರಸ್ಕರಿಸುವ ಮತ್ತು ವಿರೋಧಿಸುವ ಪ್ರವೃತ್ತಿಯೊಂದು ಕುವೆಂಪು ಸಾಹಿತ್ಯ ಸಂವೇದನೆಯಂತೆಯೇ ಪ್ರತಿ ಕನ್ನಡ ಸಾಹಿತ್ಯ ಕ್ರಾಂತಿಯಲ್ಲಿಯೂ ಅಂತರ್ಮುಖಿಯಾಗಿ ಕಾಣಿಸಿಕೊಳ್ಳುವ ಪ್ರಕ್ರಿಯೆಯನ್ನು ತೇಜಸ್ವಿಯವರು ನಿಚ್ಚಳವಾಗಿ ಗುರುತಿಸುತ್ತಾರೆ. ಈ ಹಿನ್ನೆಲೆಯಲ್ಲಿ ಕುವೆಂಪು ಕೃತಿಗಳನ್ನು ಪರಂಪರೆಯ ಜೊತೆ ಇಟ್ಟು ನೋಡಬೇಕಾದ ಬಗೆಯನ್ನು ಅವರು ಕಾಣಿಸುತ್ತಾರೆ.

ಕುವೆಂಪು ಕಾದಂಬರಿಗಳ ಅಧ್ಯಯನದ ದೃಷ್ಟಿಯಿಂದ ಇಲ್ಲಿ ಉಲ್ಲೇಖಿಸಬಹುದಾದ 'ಶ್ರೀ ಕುವೆಂಪು' ಕೃತಿಗಳಲ್ಲಿನ, ಚಾರಿತ್ರಿಕವಾಗಿಯೂ ಮತ್ತು ಸಾಂಸ್ಕೃತಿಕವಾಗಿಯೂ ಮುಖ್ಯವಾಗುವ ಲೇಖನವೆಂದರೆ ಡಿ.ಆರ್. ನಾಗರಾಜ್ ರವರ 'ಕುವೆಂಪು ಕೃತಿಗಳಲ್ಲಿ ವರ್ಣ - ವರ್ಗ ಸಂಘರ್ಷ'. ಕುವೆಂಪು ಕಾದಂಬರಿಗಳನ್ನು ಕುರಿತು ಸಾಂಸ್ಕೃತಿಕವಾಗಿ ಅಧ್ಯಯನಕ್ಕೆ ಮೊದಲು ಗುರಿಪಡಿಸಿದ ಕೀರ್ತಿ ಡಿ.ಆರ್. ನಾಗರಾಜ್ ರವರಿಗೆ ಸಲ್ಲಬೇಕು. ಏಕೆಂದರೆ ಕುವೆಂಪು ಅವರ ಕೃತಿಗಳ, ಅದರಲ್ಲಿಯೂ ಕಥನಗಳ ಅಧ್ಯಯನವನ್ನು ಮಾರ್ಕ್ಸ್‌ವಾದಿ ಧೋರಣೆಯಲ್ಲಿ ಮಂಡಿಸಿದ ಪ್ರಬಂಧವು ಇದಾಗಿದೆ. ಹಾಗೆಯೇ ವಸಾಹತುಶಾಹಿ ಅನುಭವ ದಕ್ಷಿಣಭಾರತದ ಬ್ರಾಹ್ಮಣೇತರ ಚಳುವಳಿಗಳ ಹಿನ್ನೆಲೆ ಮತ್ತು ಪ್ರಭಾವಗಳು, ರಾಷ್ಟ್ರೀಯ ಚಳುವಳಿಯ ಪ್ರೇರಣೆ ಪ್ರಭಾವಗಳು ಕುವೆಂಪು ಕೃತಿಗಳಲ್ಲಿ ಮೈಪಡೆದ ನೆಲೆಗಳನ್ನು ಈ ಲೇಖನ ಚರ್ಚೆಗೆ ಗುರಿಪಡಿಸುತ್ತದೆ. ಈ ಕೆಳಗಿನ ಉದ್ಧರಣೆ ಕುವೆಂಪು ಸಾಹಿತ್ಯದ ಅಧ್ಯಯನಕ್ಕೆ ಹೇಗೆ ಪೀಠಿಕೆಯಾಗಬಲ್ಲುದು ಎಂಬುದಕ್ಕೆ ಉದಾಹರಿಸಬಹುದು.

"ಕುವೆಂಪು ಅವರ ಜಾತಿಪದ್ಧತಿಯ ವಿರೋಧ ಸ್ವಲ್ಪಮಟ್ಟಿಗೆ ಕೇರಳದ ಬ್ರಾಹ್ಮಣೇತರ ಜಾತಿಗಳ ಹೋರಾಟದ ಸ್ವರೂಪವನ್ನು ಹೋಲುವಂಥದು. ಕೇರಳದ ಬ್ರಾಹ್ಮಣೇತರ ಜಾತಿಗಳ ಚಳುವಳಿ ತಮಿಳುನಾಡಿನಲ್ಲಿಯಂತೆ ಸಿಟ್ಟಿನ ಆಕ್ರೋಶದ, ಸಮಗ್ರ ತಿರಸ್ಕಾರದ ರೂಪವನ್ನು ಪಡೆಯಲಿಲ್ಲ. ಬದಲಾಗಿ ಇದು ಸಾಮಾಜಿಕ - ಧಾರ್ಮಿಕ ಸುಧಾರಣಾ ಚಳುವಳಿಯ ರೂಪವನ್ನು ಪಡೆಯಿತು. ಆದರೆ ಇದೆಲ್ಲವೂ ನಡೆದದ್ದು ಸಾಂಪ್ರದಾಯಿಕ, ಧಾರ್ಮಿಕ ಪರಿಭಾಷೆಯಲ್ಲಿಯೆ.

ನಾರಾಯಣ ಗುರುಗಳಿಗೂ ಪೆರಿಯಾರರಿಗೂ ಇರುವ ವ್ಯತ್ಯಾಸವನ್ನು ಗಮನಿಸಿದರೆ ನನ್ನ ಮಾತು ಸ್ಪಷ್ಟವಾಗುತ್ತದೆ. ವಿಶಾಲಾರ್ಥದಲ್ಲಿ ಹಿಂದೂ ಧರ್ಮದ ಸಂವಿಧಾನದೊಳಗಿದ್ದೇ ಜಾತಿಪದ್ಧತಿಯ ಕೊಳಕು ರೂಪವನ್ನು ನಾರಾಯಣ ಗುರು ವಿರೋಧಿಸಿದರು. ನಾರಾಯಣ ಗುರುಗಳ ಹಾಗೆ ಕುವೆಂಪು ಕೂಡಾ ಹಿಂದೂ ಧರ್ಮದ ಬಗ್ಗೆ ಸಮಗ್ರ ತಿರಸ್ಕಾರ, ದ್ವೇಷದಿಂದ ಹೊರಡಲಿಲ್ಲ. ಹಿಂದೂ ಧರ್ಮದ ಸಂವಿಧಾನದ ಚೌಕಟ್ಟಿನಲ್ಲೇ ಒಳಗಿನ ಬಂಡಾಯಗಾರರಾಗಿ ಉಳಿದದ್ದು ಕುವೆಂಪು ಅವರ ಸೃಜನಶೀಲ ಜೀವನದ ಅತ್ಯಂತ ಮುಖ್ಯ ಸಂಗತಿ. ವರ್ಣವ್ಯವಸ್ಥೆಯ ಕೆಲವು ಅಂಶಗಳನ್ನು ಧಿಕ್ಕರಿಸಿ, ಮತ್ತೆ ಕೆಲವನ್ನು ತಿರಸ್ಕರಿಸದೇ ಹೋದದ್ದು ನಮ್ಮ ಆಧುನಿಕ ಸಂಸ್ಕೃತಿಯ ಚರಿತ್ರೆಯಲ್ಲಿ ಗಮನಾರ್ಹ ಸಂಗತಿಯಾಗಿ ಉಳಿದಿದೆ."[೧೪]

ಈ ಉಲ್ಲೇಖದಲ್ಲಿ ಕುವೆಂಪು ಅವರು ವೈದಿಕತೆಯ ಬಗೆಗೆ ತೋರುವ ಬಂಡಾಯ ಪೆರಿಯಾರ್ , ನಾರಾಯಣ ಗುರುಗಳ ಬಂಡಾಯಕ್ಕಿಂತ ಸಾಂಸ್ಕೃತಿಕವಾಗಿ ಭಿನ್ನವಾಗುವ ಕ್ರಮವನ್ನು ಪರಿಚಯಿಸುತ್ತದೆ. ಹಾಗೆಯೇ ಕುವೆಂಪು ಅವರ ಪುರೋಹಿತಶಾಹಿಯ ಮೇಲಿನ ಪ್ರತಿಕ್ರಿಯೆ ತಮಿಳುನಾಡಿನ ಮತ್ತು ಕೇರಳದ ಪ್ರತಿರೋಧಕ್ಕಿಂತ ಭಿನ್ನವಾಗಿ ಹೇಗೆ ಸಾಂಸ್ಕೃತಿಕ ಮಹತ್ವ ಪಡೆಯುತ್ತದೆ ಎಂಬುದನ್ನು ಸೂಚಿಸುತ್ತದೆ. ಸುಮಾರು ಎಂಬತ್ತರ ದಶಕದಲ್ಲಿ ಇಂಥ ಹೊಸ ಅಧ್ಯಯನಗಳು ಆರಂಭಗೊಂಡ ಮೇಲೆ ಕುವೆಂಪು ಅವರ ಕಥನಗಳನ್ನು ಕನ್ನಡ ವಿಮರ್ಶೆ ಹೊಸ ಹೊಸ ಆಯಾಮಗಳಲ್ಲಿ ಚಿಂತಿಸಿರುವುದನ್ನು ಡಿ.ಆರ್.ನಾಗರಾಜ್ ಅವರ 'ಕುವೆಂಪು ಕಾದಂಬರಿಗಳಲ್ಲಿ ವರ್ಗ-ವರ್ಣ ಸಂಘರ್ಷ' ಹೆಚ್.ಎಂ. ಚನ್ನಯ್ಯನವರ 'ಕುವೆಂಪು ಸಾಹಿತ್ಯ - ಒಂದು ಪುನರ್ ವಿಮರ್ಶೆ.' ರಾಜೇಂದ್ರ ಚೆನ್ನಿಯವರ 'ಕುವೆಂಪು ಮತ್ತು ಕನ್ನಡ ಕಾದಂಬರಿ', ರಹಮತ್ ತರೀಕೆರೆಯವರ 'ಕುವೆಂಪು ಕಾದಂಬರಿಗಳಲ್ಲಿ ಸಂಘರ್ಷದ ಸ್ವರೂಪ', ರಾಜಾರಾಮ್ ಹೆಗಡೆಯವರ 'ಕುವೆಂಪು ಕಾದಂಬರಿಗಳಲ್ಲಿ ವಸಾಹತುಶಾಹಿ ಅನುಭವದ ಸ್ವರೂಪ', ಕೆ.ವಿ. ಸುಬ್ಬಣ್ಣನವರ 'ಕುವೆಂಪುಗೆ ಪುಟ್ಟಕನ್ನಡಿ', ಎಸ್. ಚಂದ್ರಶೇಖರರವರ 'ಕುವೆಂಪು ಕಾದಂಬರಿಗಳನ್ನು ಕುರಿತ ಲೇಖನಗಳು', ಕೆ.ಸಿ. ಶಿವಾರೆಡ್ಡಿಯವರ 'ಕುವೆಂಪು ಕಾದಂಬರಿಗಳು : ವಸಾಹತು ಸಂದರ್ಭ', ಎನ್.ಕೆ. ಕೋದಂಡರಾಮ ಅವರ 'ಕುವೆಂಪು ಕಾದಂಬರಿಗಳು' ಕೃತಿ / ಲೇಖನಗಳಲ್ಲಿ ಸಕಾರಣವಾಗಿ ವಿಶ್ಲೇಷಣೆ ಮಾಡಲಾಗಿದೆ. ಈ ಕಾದಂಬರಿಗಳನ್ನು ಆಸ್ವಾದನೆ, ವಿಶ್ಲೇಷಣೆ, ಮೌಲ್ಯವಿಧಾನದ ಹಂತಗಳನ್ನು ಸಾಕ್ಷಿಪ್ರಜ್ಞೆಯ ನೆಲೆಯಲ್ಲಿ ನಿಂತು ಈ ವಿಮರ್ಶಕರು ವ್ಯಾಖ್ಯಾನಿಸುವುದನ್ನು ಕಾಣಬಹುದು.

"ಇಂಥ ಒಬ್ಬ ಮಹಾಕವಿ, ನಮ್ಮ ಕಾಲದಲ್ಲಿ, ನಮ್ಮ ಜೀವಮಾನ ಕಾಲದಲ್ಲಿ, ಕನ್ನಡ ದೇಶದಲ್ಲಿ ಒಬ್ಬ. ಮಹೋನ್ನತ ಕೃತಿಗಳನ್ನು ಬರೆದು - ಬಹುಶಃ ಪುಟ್ಟಪ್ಪನವರು ಬರೆದಿರುವಷ್ಟು ಕಾವ್ಯಗಳನ್ನು, ಕಥೆಗಳನ್ನು, ಕಾದಂಬರಿಗಳನ್ನು ಬೇರೆ ಯಾರೂ ಬರೆದಿರಲಾರರು - ಕನ್ನಡ ದೇಶದ ಇನ್ನಾವ ಕವಿಯೂ ಇಷ್ಟು ಕಾವ್ಯವನ್ನು ಬರೆದಿರಲಾರ. ಕಾದಂಬರಿಗಳು, ಮಹಾಕಾವ್ಯ, ಹಾಗೆ ನೋಡುತ್ತಾ ಹೋದರೆ 'ಸಾಲದ ಮಗು' ಅಂತ ಒಂದು ಪುಟ್ಟಕಥೆ, ಪ್ರಬುದ್ಧ ಕರ್ನಾಟಕದಲ್ಲಿ ಮೊದಲು ಪ್ರಕಟವಾಯಿತು. ಓದಿದ್ದೇನೆ. ಅದನ್ನು ಓದಿದರೆ ಅವರ ಮನಸ್ಸು ಆರ್ತರ ವಿಷಯಕ್ಕೆ ಹೇಗೆ ಸ್ಪಂದಿಸುತ್ತದೆ. ಅವರ ಮನಸ್ಸು ಹೇಗೆ ಕರಗಿ ಹೋಗುತ್ತದೆ, ಅನ್ನುವುದನ್ನು ನಾವು ಆ ಕಥೆಯ ವರ್ಣನೆಯಲ್ಲಿ ಕಾಣುತ್ತೇವೆ. ಇಂಥ ಮಹಾಕವಿ, ವಿದ್ಯಾಭಿಮಾನಿ, ಶಿಕ್ಷಕ, ಯೋಜಕ, ಅನೇಕ ಶಿಷ್ಯರನ್ನು ಒಟ್ಟುಗೂಡಿಸಿ

ಅವರಿಂದ ಕೆಲಸ ಮಾಡಿಸುತ್ತಾ ಇರತಕ್ಕಂಥ ಈ ಮಹಾದೀಕ್ಷಿತ, ಕನ್ನಡ ನಾಡಿಯಲ್ಲಿ ಅನೇಕ ವರ್ಷ ಕಾಲ ಮಾರ್ಗದರ್ಶಕನಾಗಿ ತರುಣಕವಿ ಲೇಖಕರಿಗೆ ದಾರಿ ದೀಪವಾಗಿ, ಜೀವಜ್ಯೋತಿಯಾಗಿ ಬೆಳಗುತ್ತಿರಲಿ," ೧೫

"…..ಪುಟ್ಟಪ್ಪನವರು ನಮಗೆ ಮಲೆನಾಡಿನ ಅನುಭವಗಳನ್ನು ಸ್ವಾರಸ್ಯವಾಗಿ ವಿವರಿಸುತ್ತಿದ್ದರು. ಅವರ ಜತೆಯಲ್ಲಿ ಹೋಗುವಾಗ ಮಾತನಾಡುವುದನ್ನು ಕೇಳಬೇಕು. ಮಾತನಾಡುತ್ತಾ ವರ್ಣಿಸುತ್ತಾ ಅವರು ನಡೆಯುತ್ತಿರುತ್ತಾರೆ; ಏನಾದರೂ ಭಾವಾವೇಶ ಬಂದರೆ ತೋಳುಹಿಡಿದು ಜಗ್ಗಿ ನಿಲ್ಲಿಸಿ, ಅಲ್ಲೆ ಅದನ್ನು ರಸವತ್ತಾಗಿ ವರ್ಣಿಸುತ್ತಾರೆ. ಹೀಗೆ ಅವರ ಮಲೆನಾಡ ಅನುಭವಗಳನ್ನು ಕೇಳಿದ್ದ ಶ್ರೀಮಾನ್ ವೆಂಕಣ್ಣಯ್ಯನವರು 'ಬರಿದೇ ಹೀಗೆ ಮಾತನಾಡಿ ಬಿಟ್ಟರೇನಯ್ಯ; ಬರಿ' ಎಂದರು. ಹದಿನೈದೆ ದಿನಗಳಲ್ಲಿ ಒಂದು ಪುಸ್ತಕ ಸಿದ್ಧ. ಅಜ್ಜಯ್ಯನ ಅಭ್ಯಂಜನ, ಹುಲಿಬೇಟೆ ಮುಂತಾದ ಲೇಖನಗಳೆಲ್ಲ ಬಂದೆಬಿಟ್ಟವು! ಅವರ ಬರಹವೆ ಹಾಗೆ ! ಒಮ್ಮೆ ಅನುಭವ ಸಿದ್ಧವಾಗುತ್ತೆ : ಆಮೇಲೆ ಬರವಣಿಗೆಯೂ ಅನುಸ್ಯೂತವಾಗಿ ನಡೆಯುತ್ತಾ ಇರುತ್ತೆ. ಅವರಲ್ಲಿ ಅಗಾಧ ಶಕ್ತಿಯಿದೆ.....ಕನ್ನಡ ಸಾಹಿತ್ಯ ಒಂದು ಪರ್ವತದಂತೆ. ಅದರ ಒಂದು ಮುಖವನ್ನು ನಾನು ನೋಡಿದೆ; ಇನ್ನೊಂದು ಮುಖವನ್ನು ಪುಟ್ಟಪ್ಪನವರು ನೋಡಿದರು. ಉಳಿದವರು ಉಳಿದ ಮುಖಗಳನ್ನು ನೋಡಿದರು. ಆದರೆ ಪುಟ್ಟಪ್ಪನವರು ಎಲ್ಲರಿಗಿಂತ ಮುಂದೆ ಹೋದರು. ತೇನ್ ಸಿಂಗ್‌ನಂತೆ ಗೌರೀಶಂಕರಕ್ಕೇರಿ ನಿಂತರು. ನಾವೆಲ್ಲ ಕೆಳಗೆ ನಿಂತು ಆಶ್ಚರ್ಯದಿಂದ ಅವರನ್ನು ನೋಡುತ್ತಿದ್ದೇವೆ" ೧೬

ಕುವೆಂಪು ಸ್ವಭಾವದಿಂದ ನಮ್ರರು. ಸರ್ವ ಕುತೂಹಲಿ. ಭಾರತ ಸಂಸ್ಕೃತಿಯ ತೀವ್ರ ಭಕ್ತರು. ಕನ್ನಡ ಭಾಷೆಯ ಶಕ್ತಿ, ಪ್ರಾಚೀನ ಸತ್ವ, ಎಲ್ಲ ಜ್ಞಾನಕ್ಕೂ ತಕ್ಕ ವಾಹಕವಾಗಬಲ್ಲದೆಂಬ ನಂಬಿಕೆಯಿಟ್ಟು ಕನ್ನಡ ಭಾಷೆಯ ಸರ್ವತೋಮುಖವಾದ ಏಳಿಗೆಗಾಗಿ ಜೀವಮಾನವೆಲ್ಲ ಶ್ರಮಿಸಿದರು. ಸರಿಯಾದ ಅವಕಾಶ ಸಿದ್ಧತೆ ನಡೆಸಿದರೆ ಕನ್ನಡ ಕವಿಗಳು ಶೇಕ್ಸ್ ಪೀಯರ್ ನನ್ನು ಮೀರಿಸುವ ಕೃತಿಗಳನ್ನು ರಚಿಸಬಲ್ಲರೆಂಬುದು ಅವರ ದೃಢನಂಬಿಕೆ. ಅವರ ಭವ್ಯಕಲ್ಪನೆ. ಧೀಶಕ್ತಿ, ಉದಾತ್ತ ಚಿಂತನೆಗೆ ಮಾನಸಗಂಗೋತ್ರಿ ಉಜ್ವಲ ಉದಾಹರಣೆ. ಅವರು ಭಾರತ ಸಂಸ್ಕೃತಿಯ ಅತ್ಯುತ್ಕೃಷ್ಟ ಫಲ. ರಾಮಕೃಷ್ಣ ಪರಮಹಂಸರು, ವಿವೇಕಾನಂದ, ಅರವಿಂದ, ಗಾಂಧೀಜಿ, ಟಾಗೂರ್ ಎಲ್ಲರಿಗೂ ಭಕ್ತರು. ಭಕ್ತಿ, ಜ್ಞಾನ, ಆತ್ಮಾನುಭವ, ದ್ಯಾನ ತಪಸ್ಸು ಉಳ್ಳವರು. ಆಧ್ಯಾತ್ಮಕ್ಕಾಗಿ ಏನನ್ನೂ ತ್ಯಾಗ ಮಾಡಲು ಸಿದ್ದರು." ೧೭

"…..ಕನ್ನಡ ಜನಮನಕ್ಕೆ ಉತ್ತಮ ಸಂಸ್ಕಾರಗಳನ್ನು ಒದಗಿಸುವುದರಲ್ಲಿ ಹಾಗು ಜನತೆಯ ಸಂಸ್ಕೃತಿಯ ಮಟ್ಟವನ್ನು ಮೇಲಕ್ಕೆತ್ತುವುದರಲ್ಲಿ ಡಾಕ್ಟರ್ ಪುಟ್ಟಪ್ಪನವರ ಸಾಹಿತ್ಯ ಶ್ರೇಷ್ಠ ಪಾತ್ರವನ್ನು ವಹಿಸಿದೆ. ಶ್ರೀ ಸಾಮಾನ್ಯನ ಕಲ್ಯಾಣ ಚಿಂತನ, ಶಾಸ್ತ್ರ ಇಲ್ಲವೆ ನಿರ್ಜೀವ ಪರಂಪರೆಗಿಂತ ಹೃದಯವಂತಿಕೆಯಿಂದ ಬಂದ ನೀತಿ ಹಾಗೂ ಶಿಸ್ತಿನ ಸಮರ್ಥನೆ, ಅನಂತತೆ ಹಾಗು ನಿಸ್ಸೀಮತೆಯ ಬಗ್ಗೆ ಅವರು ತಳೆದ ಆಳವಾದ ಪ್ರೇಮ - ಅವರು ಕರುಣಿಸಿದ ಇವೇ ಮೊದಲಾದ ರತ್ನಪಾರಗಳಿಂದ ಜನಮನವು ಹಿಗ್ಗಿದೆ ಜನತೆಯ ಪ್ರಜ್ಞೆ ವಿಸ್ತಾರಗೊಂಡಿದೆ."೧೮

"…..ಈಶ ಶಕ್ತಿಯ ಅವಿರ್ಭಾವವೇ ಪ್ರಕೃತಿಯ ವಿವಿಧ ರೂಪ. ಇದನ್ನು ಅನುಭವಿಸಿ ಆರಾಧಿಸುವ ಈ ಕವಿಜೀವಕ್ಕೆ ಪ್ರಕೃತಿಯೋಗವೂ ಒಂದು ವಿಭೂತಿಯೋಗವೇ ಸರಿ. 'ಪ್ರಕೃತಿ ಸೌಂದರ್ಯಮಂ ಭಾವನೋಜ್ವಲವಾಗಿ ನೊಂದಿಹ ಬಾಳೊಂದು ಬಾಳಲ್ಲ': (ಪ.ಕಾ. ೨೩) ಎಂದು ನಂಬಿ ಜೀವನ ಯಾತ್ರೆಗೆ ಹೊರಟ ಕವಿ ವಿಹಂಗಮವಿದು. ಪ್ರಕೃತಿಯ ಮಡಿಲಲ್ಲಿ, ಮಲೆಗಳ ಉಡಿಯಲ್ಲಿ ಹುಟ್ಟಿ ಬೆಳೆದ ಭಾಗ್ಯವನ್ನು ಸ್ವಾಭಾವಿಕವಾಗಿ ಪುಟ್ಟಪ್ಪನವರು ಪಡೆದು

ಬಂದರೂ, ಸುತ್ತಲಿನ ಆವರಣವೇ ಅವರ, ಆರಾಧ್ಯ ವಸ್ತುವಾಯಿತು ಕಾವ್ಯವಸ್ತುವೂ ಆಯಿತು. 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಬರಲಿ 'ಮಲೆಗಳಲ್ಲಿ ಮದುಮಗಳು' ಇರಲಿ ಯಾವುದರಲ್ಲಿಯೂ ಅದೇ ಉದ್ದೇಶ ಸಾಧನೆಯು ಅವರಿಗಿದೆ. 'ಪರಮ ಪುರುಷಾರ್ಥ ಸಾಧನೆಯೇ ಸೃಷ್ಟಿಯ ಸರ್ವೋತ್ತಮೋದ್ದೇಶ' ಎಂಬುದನ್ನು ಅವರು ಅರಿತವರು, ವಿಶ್ವದ ಹೃದಯವನ್ನೇ ಬಲ್ಲವರು. ಅಂತಲೇ ಅವರ ವಾಣಿಯಲ್ಲಿ. 'ಆನಂದಮಯ ಈ ಜಗ ಹೃದಯ ಏತಕೆ ಭಯ? ಮಾಣೊ? ಸೂರ್ಯೋದಯ ಚಂದ್ರೋದಯ ದೇವರ ದಯೆ ಕಾಣೊ!' ಎಂಬ ಧ್ವನಿಯು ಮೂಡಿದೆ. ಯಾವ ಒಳಿತು - ಕೆಡುಕುಗಳಿಗೂ ಪರಮಾತ್ಮನ ಕೃಪೆಯೇ ಕಾರಣವೆಂದು ನಂಬಿದ ಸಾಧಕನ ನೆಲೆಯೇ ಬೇರೆ. ಅದು ಸರ್ವಾರ್ಪಣ ಭಾವ. ಭಕ್ತಿಯೋಗದಲ್ಲಿ ಒಂದು ಮಹತ್ವದ ಹೆಜ್ಜೆ. ಅಂಥ ಹೆಜ್ಜೆಯ ಹಲವು ಗುರುತುಗಳನ್ನು ಈ ಮಹಾಕವಿಯ ಕಾವ್ಯದಲ್ಲಿ ಎಲ್ಲೆಡೆಗೂ ಕಾಣುತ್ತೇವೆ." ೧೯

"ನಮ್ಮ ಪಾಲಿಗೆ ಕನ್ನಡದ ಮೊದಲನೆಯ ದೊಡ್ಡ ಕಾದಂಬರಿಯನ್ನು ಒದಗಿಸಿದವರು ನಮ್ಮ ಕವಿಗಳಾದ ಶ್ರೀಮಾನ್ ಕೆ.ವಿ. ಪುಟ್ಟಪ್ಪನವರು. ಅವರ "ಕಾನೂರು ಸುಬ್ಬಮ್ಮ ಹೆಗ್ಗಡಿತಿ" ಆರ್ನೂರು, ಎಂಟ್ನೂರು ಪುಟಗಳ ಉದ್ಗ್ರಂಥ. ಮಲೆನಾಡಿನ ಕಥಾವಸ್ತುವೊಂದನ್ನಾರಿಸಿಕೊಂಡು, "ಸುಬ್ಬಮ್ಮ ಹೆಗ್ಗಡಿತಿ" ಎಂಬ ಹೆಂಗಸಿನ ಮನೆತನದ ಚಿತ್ರವನ್ನು ಅವರು ಇದರಲ್ಲಿ ಚಿತ್ರಿಸಿದ್ದಾರೆ. ಮಲೆನಾಡಿನ ನಿಕಟ ಪರಿಚಯ, ಅಲ್ಲಿನ ಜನಸಾಮಾನ್ಯರ ಕಷ್ಟ ಸುಖಗಳ ಅರಿವು, ನಿಸರ್ಗದ ಮೋಹ, ಬೇಟೆ, ಕೋಳಿಯಂಕ, ಮೀನುಗಾರಿಕೆ ಇಂಥ ಗ್ರಾಮ್ಯ ವಿಲಾಸಗಳ ಮೇಲಿನ ಮಮತೆ ಅವರ ಈ ಬರವಣಿಗೆಯಲ್ಲಿ ಬಲು ಸುಂದರವಾಗಿ ಚಿತ್ರಿತವಾಗಿದೆ. ಶೀಲ ನಿರೂಪಣೆಯಲ್ಲಷ್ಟೆ ಅದರ ದೌರ್ಬಲ್ಯ. ಕಥೆಯಲ್ಲಿನ ಮುಖ್ಯ ವ್ಯಕ್ತಿಗಳಾದ ಹೂವಯ್ಯ, ಹೆಗ್ಗಡಿತಿಯರು ಶೀಲದ ಸ್ವಾಭಾವಿಕ ಬೆಳವಣಿಗೆಯ ಚಿತ್ರಗಳಲ್ಲ. ಲೇಖಕರು ಆದರ್ಶವಾದದ ಕಲ್ಪನೆಗೆ ಎಡೆಕೊಟ್ಟು, ವಾಸ್ತವಿಕತೆಯ ಸಾಧ್ಯಾ ಸಾಧ್ಯತೆಯ ಎಲ್ಲೆಯನ್ನು ಮೀರುವುದು ನಮಗೆ ಕಾಣುತ್ತದೆ." ೨೦

"…..ಸಾಹಿತ್ಯ ಗುರುಗಳಾಗಿದ್ದ 'ಶ್ರೀ'ಯವರ ಮತ್ತು ತಳುಕಿನ ವೆಂಕಣ್ಣಯ್ಯನವರ ಆಶೀರ್ವಾದದ ಬಲದಿಂದ ಪ್ರವೃದ್ಧಿಗೊಂಡ, ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶ ಮೊದಲಾದ ಪ್ರಾಚೀನ ಕನ್ನಡ ಕವಿವರೇಣ್ಯ ಕಾವ್ಯಗಳ ವ್ಯಾಸಂಗ, ವಾಲ್ಮೀಕಿ ವ್ಯಾಸಕವಿ ಋಷಿಗಳ ಕಾವ್ಯೇತಿಹಾಸಗಳ ಉಪಾಸನೆ, ಕಾಳಿದಾಸ ಭಾಸ ಭವಭೂತಿ ಮಹಾಕವಿಗಳ ಕಾವ್ಯರಸಧಿಯಲ್ಲಿ ಸ್ನಾನ, ಶೇಕ್ಸಪಿಯರ್ ಮಿಲ್ಟನ್ ಡ್ಯಾಂಟೆ ಮಹಾಕವಿಗಳ ಕಾವ್ಯಪ್ರಪಂಚ ಪರ್ಯಟನ, ಬಂಕಿಮ ರವೀಂದ್ರರ ಸಾಹಿತ್ಯ ಸ್ನೇಹ, ವರ್ಡ್ಸ್‌ವರ್ತ್‌ರ ಷೆಲ್ಲಿ ಕೀಟ್ಸ್ ಮ್ಯಾಥ್ಯೂ ಆರ್ನಾಲ್ಡ್ ಟೆನಿಸನ್ ಮೊದಲಾದ ಆಂಗ್ಲ ಕೋಕಿಲ ಕೂಜನ ಮನೋಹರವಾದ ಕಾವ್ಯೋದ್ಯಾನ ವಿಹಾರ ಇವುಗಳಿಂದ ಪಾವನ ಮಧುರವಾದ ರಸಜೀವನ; ಇವೆಲ್ಲವುಗಳ ರಸ ಯೋಗದಿಂದ ಸಿದ್ಧಿಸಿದ ಉದಾತ್ತ ಕಾವ್ಯ ಜೀವನ ಕುವೆಂಪು ಅವರದ್ದು. ಬಹುಮಂದಿ ಕವಿಗಳ ವಿಚಾರದಲ್ಲಿಯೂ ಈ ಮಾತನ್ನು ಹೇಳಲು ಸಾಧ್ಯವಾಗದು." ೨೧

"…..ದಟ್ಟವಾದ ಅರಣ್ಯ ಪರಿಸರದ, ಹಾಗೂ ನಾಗರೀಕ ಜಗತ್ತಿನಿಂದ ಬಹುಮಟ್ಟಿಗೆ ಪ್ರತ್ಯೇಕವೆಂಬಂತಹ ಪರಿಸರದ ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದ ಕವಿ ಕುವೆಂಪು ಅನ್ನುವುದು ಅವರನ್ನೂ, ಅವರ ಸಾಹಿತ್ಯವನ್ನೂ, ಅವರ ಸಮಕಾಲೀನರಿಂದ ಬೇರ್ಪಡಿಸುವ ಲಕ್ಷಣವಾಗಿದೆ. ಇನ್ನೂ ಬಿಡಿಸಿ ಹೇಳಬೇಕೆಂದರೆ, ಬಹುಮಟ್ಟಿಗೆ ಅನಕ್ಷರತೆ,

ಅಜ್ಞಾನ, ದಾರಿದ್ರ್ಯ, ಮೂಢನಂಬಿಕೆ ಇತ್ಯಾದಿಗಳಿಂದ ಇಡಿಕಿರಿದ ಜನಸಮುದಾಯ, ಅದರಲ್ಲೂ ಶೂದ್ರ ವರ್ಗದಿಂದ ಬಂದು ಮೊಟ್ಟಮೊದಲ ಪ್ರಮುಖ ಬರಹಗಾರರಾಗಿದ್ದಾರೆ ಕುವೆಂಪು ಅನ್ನುವುದು ಅದರ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಹಲವು ಒಳನೋಟಗಳನ್ನು ಒದಗಿಸುತ್ತದೆ. ಇಂಥ ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದ ಕಾರಣದಿಂದ, ಅವರು ತಮ್ಮ ಸಮಕಾಲೀನರಾದ ಕೆಲವು ಹಿರಿಯ ಬರಹಗಾರರಂತೆ ಯಾವುದೇ ಮತ - ಧರ್ಮಗಳ ಸಿದ್ಧ ಸಂಪ್ರದಾಯಕ್ಕೆ ಸೇರಿದವರಲ್ಲ ಮತ್ತು ಸಿದ್ಧ ಸಂಪ್ರದಾಯದ ಪೂರ್ವ ನಿಯಂತ್ರಣಗಳೂ ಉಪಾಧಿಗಳೂ ಇಲ್ಲದ ಒಂದು ಮುಕ್ತವೂ ಸ್ವತಂತ್ರವೂ ಆದ ಮನಃಸ್ಥಿತಿಯ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಅವರಿಗೆ ಸಾಧ್ಯವಾಯಿತು. ಜತೆಗೆ ತಾವು ಯಾವ ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದರೋ, ಆ ಸ್ತರದ ಮೇಲೆ ಪ್ರತಿಷ್ಠಿತ ವರ್ಗದವರಿಂದ ನಡೆದ ಹಾಗೂ ನಡೆಯುತ್ತಿದ್ದ ಶೋಷಣೆಗಳೂ, ಹಲ್ಲೆಗಳೂ, ಅವಮಾನಗಳೂ ಆ ಸಮಾಜದ ಒಬ್ಬ ವ್ಯಕ್ತಿಯಾಗಿ ತಮ್ಮ ಅನುಭವವೂ ಆದುದರಿಂದ ಆ ಮೇಲು ವರ್ಗದವರ ನಡವಳಿಕೆಗಳನ್ನು ಪ್ರತಿಭಟಿಸುತ್ತ ಅವರ ಶೋಷಕ ತಂತ್ರಗಳನ್ನು ಬಯಲಿಗೆಳೆಯುತ್ತ, ಈ ಶೋಷಣೆಯ ಪ್ರತಿನಿಧಿಯಾದ 'ಪುರೋಹಿತಶಾಹಿ'ಯನ್ನು ಅತ್ಯಂತ ಸೂಕ್ಷ್ಮವಾಗಿ ವಿಶ್ಲೇಷಿಸುತ್ತ ಅವುಗಳೆಲ್ಲದರ ವಿರುದ್ಧವಾಗಿ ಜನಸಮುದಾಯವನ್ನು ಎಚ್ಚರಿಸುವ ವೈಚಾರಿಕತೆಯನ್ನು ನಿರಂತರವಾಗಿ ಪ್ರತಿಪಾದಿಸುತ್ತ ಬಂದಿರುವುದು ಕುವೆಂಪು ಸಾಹಿತ್ಯದ ಮುಖ್ಯ ಲಕ್ಷಣಗಳಲ್ಲಿ ಒಂದಾಗಿದೆ."

"ಈ ದೇಶದ ವರ್ಣ - ವರ್ಗಗಳನ್ನು ಕುವೆಂಪು ಅವರಷ್ಟು ದಿಟ್ಟತನದಿಂದ ಅವರ ಸಮಕಾಲೀನರಿಗೆ ಪ್ರಶ್ನಿಸಲು ಸಾಧ್ಯವಾಗಲಿಲ್ಲ ಎನ್ನುವುದೇ 'ಯುಗದ ಕವಿ'ಯ ವೈಶಿಷ್ಟ್ಯಗಳಲ್ಲಿ ಒಂದಾಗಿದೆ....."

"......ಜಾತಿಪದ್ಧತಿ, ವರ್ಣವ್ಯವಸ್ಥೆ, ಮೂಢನಂಬಿಕೆಗಳು, ಸಾಂಸ್ಥಿಕ ಧರ್ಮದ ಪ್ರತಿನಿಧಿಗಳಾದ ದೇವಸ್ಥಾನಗಳು ಹಾಗೂ ಈ ಎಲ್ಲವನ್ನೂ ಬಂಡವಾಳವನ್ನಾಗಿ ಮಾಡಿಕೊಂಡು ಪುರೋಹಿತಶಾಹಿ ಚಾತುರ್ಯಗಳು ಇತ್ಯಾದಿಗಳನ್ನು ನಿರ್ದಾಕ್ಷಿಣ್ಯವಾಗಿ ಹಾಗೂ ಉಗ್ರವಾಗಿ ಚಿಕಿತ್ಸೆಗೊಳಪಡಿಸುವ ಕುವೆಂಪು ಅವರ ವೈಚಾರಿಕತೆಗೆ ಇರುವ ಬಂಡಾಯದ ಮನೋಧರ್ಮ, ಕ್ರಾಂತಿಕಾರಕ ಲಕ್ಷಣ, ಬೇರೆ ಯಾರಲ್ಲಿಯೂ ಈ ಪ್ರಮಾಣದಲ್ಲಿ ಕಾಣಿಸಿಕೊಳ್ಳುವುದಿಲ್ಲ....." [೨೨]

ಹಿರಿಯ ವಿದ್ವಾಂಸರಾದ ಕೆ. ವೆಂಕಟರಾಮಪ್ಪನವರು ತಮ್ಮ ಸಮಕಾಲೀನ ಜೀವನಕ್ರಮವನ್ನು ವಿವಿಧ ಸಾಹಿತ್ಯಪ್ರಕಾರಗಳಲ್ಲಿ ಕುವೆಂಪು ಹಿಡಿದಿರುವುದನ್ನು ಶ್ಲಾಘಿಸಿ, ಅವರ 'ಸಾಲದ ಮಗು' ಕಥೆಯ ವಸ್ತುವಿನಲ್ಲಿ ಕಂಡುಬರುವ ಕಥನದ ವರ್ಣನೆ, ನಿರೂಪಣೆ ಮತ್ತು ಮಾನವೀಯತೆಯ ನೆಲೆಗಳನ್ನು ಗುರುತಿಸಿದ್ದಾರೆ. 'ಆರ್ತರ ವಿಷಯ'ಕ್ಕೆ ಕುವೆಂಪು ಅವರ ಮನಸ್ಸು ಸ್ಪಂದಿಸುವ ವಿಶಿಷ್ಟ ಕ್ರಮವನ್ನು ಮೆಚ್ಚಿದ್ದಾರೆ. ಕುವೆಂಪು ಅವರು ಮಲೆನಾಡಿನ ಅನುಭವಗಳನ್ನು ಸ್ವಾರಸ್ಯವಾಗಿ ಹಾಗೂ ಮನೋಜ್ಞವಾಗಿ ಚಿತ್ರಿಸುವ ಚಿತ್ರಕ ಕಾವ್ಯ ಶಕ್ತಿಯನ್ನು ಅವರ ಸಮಕಾಲೀನ ಮತ್ತೊಬ್ಬ ಹಿರಿಯ ವಿದ್ವಾಂಸರಾದ ಡಿ.ಎಲ್. ನರಸಿಂಹಚಾರ್ ಅವರು ಮನಗಂಡಿದ್ದಾರೆ. ಕುವೆಂಪು ಅವರಲ್ಲಿರುವ 'ಅಗಾಧ ಶಕ್ತಿ'ಯನ್ನು ಡಿ.ಎಲ್. ನರಸಿಂಹಚಾರ್ ಅವರು ಗುರುತಿಸಿ 'ಕುವೆಂಪು ಅವರು ತೇನ್ ಸಿಂಗ್ ನಂತೆ ಗೌರಿಶಂಕರಕ್ಕೇರಿ ನಿಂತರು' ಎಂಬ ಹೋಲಿಕೆಯ ಮೂಲಕ ಕುವೆಂಪು ಅವರ ಸೃಜನಶೀಲತೆಯ ಮುಖವನ್ನು ವಿವರಿಸಿದ್ದಾರೆ.

ಕನ್ನಡದ ಹಿರಿಯ ಲೇಖಕರಲ್ಲಿ ಒಬ್ಬರಾದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಕುವೆಂಪು ಅವರಲ್ಲಿರುವ ಬಹುಮುಖ ಪ್ರತಿಭೆಯನ್ನು ಗುರುತಿಸಿ, 'ಪ್ರಾಚೀನ ಸತ್ವ ಮತ್ತು ಕನ್ನಡ ಭಾಷೆಯ ಶಕ್ತಿ ಎರಡನ್ನೂ ಕನ್ನಡ ಭಾಷೆಯ ಸರ್ವತೋಮುಖವಾದ ಏಳಿಗಾಗಿ ಜೀವಮಾನವನ್ನೆಲ್ಲಾ ಶ್ರಮಿಸಿದ ಪ್ರತಿಭೆ' ಎಂದು ತಮ್ಮ ಮೆಚ್ಚಿಗೆಯನ್ನು ವ್ಯಕ್ತ ಪಡಿಸಿದ್ದಾರೆ. ಹಾಗೆಯೇ ಹಿರಿಯ ವಿಮರ್ಶಕರಾದ ವಿ.ಕೃ. ಗೋಕಾಕ್ 'ಕುವೆಂಪು ಜನತೆಯ ಸಂಸ್ಕೃತಿಯ ಮಟ್ಟವನ್ನು ಮೇಲಕ್ಕೆ ಎತ್ತುವುದರಲ್ಲಿ ಶ್ರೇಷ್ಠ ಪಾತ್ರವನ್ನು ವಹಿಸಿದವರು' ಎಂದು ಸಹಜವಾಗಿಯೇ ಪ್ರಶಂಸಿದ್ದಾರೆ. ಕುವೆಂಪು ಅವರ ಕಥೆ, ಕಾದಂಬರಿ, ಕಾವ್ಯಗಳಲ್ಲಿ ಕಂಡುಬರುವ 'ಪ್ರಕೃತಿ ಕೇಂದ್ರಿತ' ವ್ಯಾಪಾರಗಳನ್ನು ಮಿರ್ಜಿ ಅಣ್ಣಾರಾಯರು ಗುರುತಿಸಿದ್ದಾರೆ. "ಪ್ರಕೃತಿಯಾರಾಧನೆಯೇ ಪರಮಾರಾಧನೆ, ಪ್ರಕೃತಿಯೊಲುಮೆಯೇ ಮುಕ್ತಿಯ ಆನಂದ ಸಾಧನೆ" ಎಂಬ ಕುವೆಂಪು ಅವರ ನಿಲುವನ್ನು ಅವರ ಕೃತಿಗಳಿಂದ ಸಮರ್ಥಿಸಿದ್ದಾರೆ. ಕನ್ನಡದ ಹಿರಿಯ ಹಾಗೂ ಕುವೆಂಪು ಅವರ ಸಮಕಾಲೀನ ಲೇಖಕರಾದ ಶಿವರಾಮಕಾರಂತರು 'ಹೆಗ್ಗಡಿತಿ' ಕಾದಂಬರಿಯ ಬಗ್ಗೆ ವಿಮರ್ಶಿಸುತ್ತಾ 'ಕುವೆಂಪು ಅವರು ಆದರ್ಶವಾದದ ಕಲ್ಪನೆಗೆ ಎಡೆಕೊಟ್ಟು, ವಾಸ್ತವಿಕತೆಯ ಸಾಧ್ಯಾಸಾಧ್ಯತೆಯ ಎಲ್ಲೆಯನ್ನು ಮೀರುವುದು ನಮಗೆ ಕಾಣುತ್ತದೆ' ಎಂದಿದ್ದಾರೆ. ಕುವೆಂಪು ಅನೇಕ ವಿಷಯಗಳನ್ನು ಅತಿ ಅಂಚಿಗೆ ಕೊಂಡೊಯ್ದು ಅದರ ಎಲ್ಲೆಗಳನ್ನು ಮೀರಿ ಹೊಸ ತತ್ವವೊಂದನ್ನು ಹುಟ್ಟಿಹಾಕಲು ಯತ್ನಿಸುವ ಕ್ರಿಯೆ ಅವರಿಗೆ ಸ್ವಾಭಾವಿಕವಾದುದು. ಹೊಸ ದರ್ಶನವನ್ನು ಕಾಣಿಸುವುದು ಅವರ ಸೃಜನಶೀಲ ಮನೋಧರ್ಮದಲ್ಲಿರುವ ಮುಖ್ಯ ಅಂಶವಾಗಿದೆ.

ಎಂ.ವಿ. ಸೀತಾರಾಮಯ್ಯನವರು ಕುವೆಂಪು ಅವರ ಸಾಹಿತ್ಯದ ವೈಶಿಷ್ಟ್ಯವನ್ನು ಹೇಳಿ ಅವರು ಪಡೆದ ವಿವಿಧ ಕವಿಗಳ, ಕೃತಿಗಳ ಪ್ರೇರಣೆಯನ್ನು ಸಕಾಲಿಕವಾಗಿ ಗುರುತಿಸಿದ್ದಾರೆ. 'ರಸಯೋಗದಿಂದ ಸಿದ್ಧಿಸಿದ ಉದಾತ್ತ ಕಾವ್ಯ ಜೀವನ ಕುವೆಂಪು ಅವರದ್ದು' - ಎಂದು ಅವರು ಹೇಳಿ ಕನ್ನಡದ ಎಲ್ಲಾ ಕವಿಗಳ ವಿಚಾರದಲ್ಲಿ ಈ ಮಾತನ್ನು ಹೇಳುವುದು ಕಷ್ಟ ಎಂದು ಹೇಳಿರುವ ಮಾತು ಅರ್ಥಪೂರ್ಣವಾಗಿದೆ. ಕುವೆಂಪು ಅವರ ಶಿಷ್ಯರಲ್ಲಿ ಒಬ್ಬರಾದ ಮತ್ತು ಕವಿ - ವಿಮರ್ಶಕರಾದ ಜಿ.ಎಸ್. ಶಿವರುದ್ರಪ್ಪನವರು ಕುವೆಂಪು ಸಾಹಿತ್ಯವನ್ನು ಸಮರ್ಥವಾಗಿ ವಿಶ್ಲೇಷಣೆಗೆ ಒಳಗು ಪಡಿಸಿದವರು. ಶಿವರುದ್ರಪ್ಪನವರು ಕುವೆಂಪು ಅವರ ಭಾಷಿಕ ನೆಲೆಗಳನ್ನು 'ಪ್ರತಿಷ್ಠಿತ ಹಾಗೂ ಅಪ್ರತಿಷ್ಠಿತ' ಎಂಬ ಎರಡು ಸಾಮಾಜಿಕ ಸ್ತರಗಳಲ್ಲಿ ಗುರುತಿಸುತ್ತಾರೆ. ಕುವೆಂಪು ಅವರ ತಮ್ಮ ಕಾದಂಬರಿಗಳಲ್ಲಿ ನಿರ್ವಹಿಸುವ ವರ್ಣ, ವರ್ಗ, ಜಾತಿಪದ್ಧತಿ, ಪರೋಹಿತಶಾಹಿ, ವೈಚಾರಿಕತೆ, ಶೋಷಣೆಯ ಮುಖಗಳನ್ನು ಜಿ.ಎಸ್. ಶಿವರುದ್ರಪ್ಪ ಅವರು ಎಲ್ಲರಿಗೂ ಒಪ್ಪಿತವಾಗುವ ರೀತಿಯಲ್ಲಿ ವಸ್ತುನಿಷ್ಠವಾಗಿ ವಿವೇಚಿಸಿದ್ದಾರೆ. ಕುವೆಂಪು ಅವರಲ್ಲಿರುವ ಬಂಡಾಯದ ಪ್ರವೃತ್ತಿ ಹಾಗೂ ವೈಚಾರಿಕ ಮನಸ್ಸುಗಳನ್ನು ಜಿ.ಎಸ್. ಶಿವರುದ್ರಪ್ಪ ಅವರು ಸಮರ್ಪಕವಾಗಿಯೇ ಗುರುತಿಸಿದ್ದಾರೆ.

ಕುವೆಂಪು ಅವರ ಈ ಎರಡು 'ಬೃಹತ್ ಹಾಗೂ ಮಹತ್ ' ಕಾದಂಬರಿಗಳ ಬಗ್ಗೆ ಕನ್ನಡ ವಿಮರ್ಶೆ ಅರ್ಧ ಶತಮಾನಕಾಲ ಪ್ರತಿಕ್ರಿಯಿಸಿದೆ. ಆರಂಭದಲ್ಲಿ ವಿಮರ್ಶೆ ಎಂದರೆ ರಸಾನುಭಾವ, ರಸವಿಮರ್ಶೆ ಎಂಬ ಕಲ್ಪನೆ ಇದ್ದ ಕಾಲದಲ್ಲಿ ಈ ಕಾದಂಬರಿಗಳ ಬಗ್ಗೆ 'ವಿಮರ್ಶೆ' ಎಂಬ ಪರಿಕಲ್ಪನೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದು ಕಡಿಮೆ. 'ಹೆಗ್ಗಡಿತಿ' ಕಾದಂಬರಿ ಪ್ರಕಟವಾದ ಹದಿನೈದು ವರ್ಷಗಳ ನಂತರ ಅದರ ಒಂದು ಅಂಶವನ್ನು ಕುರಿತು ವಿವರಿಸಿದ

ಒಂದು ಲೇಖನ ೧೯೫೦ ರಲ್ಲಿ ಪ್ರಕಟವಾಗಿರುವುದು ಕಂಡುಬರುತ್ತದೆ. ಅಲ್ಲಿಂದ ಇಲ್ಲಿ ತನಕ ಅಂದರೆ, ಈ ಐವತ್ತು ವರ್ಷಗಳಲ್ಲಿ 'ಹೆಗ್ಗಡಿತಿ' ನಂತರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳ ಬಗ್ಗೆ ಕನ್ನಡ ವಿಮರ್ಶೆ ಗಮನಿಸುತ್ತ ಬಂದಿದೆ. ನಮ್ಮ ಕಣ್ಣಿಗೆ ಬಿದ್ದ ಅಂತಹ ಕೆಲವು ವಿಮರ್ಶಕರ ಪಟ್ಟಿಯನ್ನು ಇಲ್ಲಿ ಕೊಡಲಾಗಿದೆ.[೨೩]

ಹೀಗೆ ಈ ಎರಡು ಕಾದಂಬರಿಗಳು ಕಳೆದ ಅರ್ಧ ಶತಮಾನದಲ್ಲಿ ಅನೇಕ ವಿದ್ವಾಂಸರ, ವಿಮರ್ಶಕರ ವಾದ ವಾಗ್ವಾದಗಳಿಗೆ ಚರ್ಚೆಯ, ಸಂವಾದದ, ಸಂದರ್ಭದ ವಸ್ತುವಾಗಿರುವುದು ಈ ಶತಮಾನದ ಅದ್ಭುತ ಘಟನೆಗಳಲ್ಲಿ ಬಹುಮುಖ್ಯವಾದ ಸಂಗತಿಯಾಗಿದೆ.



# ಅಡಿಟಿಪ್ಪಣಿ

೧. ಕುವೆಂಪು ಕಾದಂಬರಿಗಳು (ಮೂರು ಉಪನ್ಯಾಸಗಳು), ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೯, ಪು : ೮೩

೨. ಆರ್ಯ ಮಣಿಪಾಲ, ಕುವೆಂಪು ಜೀವನ ದರ್ಶನ : ಎಷ್ಟು ಪ್ರಸ್ತುತ? ಲೋಕಗ್ರಹಿಕೆ ಮತ್ತು ಅಭಿವ್ಯಕ್ತಿ, ಸಂಕ್ರಮಣ ಪ್ರಕಾಶನ, ಧಾರವಾಡ, ೧೯೯೫, ಪು : ೯೩

೩. ಅನಂತಮೂರ್ತಿ ಯು.ಆರ್, ಭಾರತೀಯ ಸಂಸ್ಕೃತಿ ಮತ್ತು ಲೇಖಕ, ಪ್ರಜ್ಞೆ ಮತ್ತು ಪರಿಸರ, ಅಕ್ಷರ ಪ್ರಕಾಶನ, ಸಾಗರ, ೧೯೯೨, ಪು : ೧೪೩ - ೧೪೪

೪. ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೩, ಪು: ३೦೯

೫. ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೩, ಪು: ೩೧೦

೬. ಕೀರ್ತಿನಾಥ ಕುರ್ತಕೋಟಿ, ಕುವೆಂಪುರವರ ಕಾದಂಬರಿಗಳು, ನೂರುಮರ ನೂರು ಸ್ವರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪು: ೧೯೭

೭. ಗಿರಡ್ಡಿ ಗೋವಿಂದರಾಜು, ಕಾದಂಬರಿಗಳಲ್ಲಿ ವೈಚಾರಿಕತೆ, ಮನ್ವಂತರ (ವಿಚಾರ ಸಂಕಿರಣ ವಿಶೇಷಾಂಕ), ಪು : ೪೭

೮. ಸುಬ್ಬಣ್ಣ ಕೆ.ವಿ, ಕುವೆಂಪುಗೆ ಪುಟ್ಟ ಕನ್ನಡಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯, ಪು : ೪೦, ೬೫

೯. ಸುಬ್ಬಣ್ಣ ಕೆ.ವಿ, ಕುವೆಂಪುಗೆ ಪುಟ್ಟ ಕನ್ನಡಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯, ಪು : ೭೬ - ೭೭

೧೦. ರಾಜೇಂದ್ರ ಚೆನ್ನಿ, ಕುವೆಂಪು ಮತ್ತು ಕನ್ನಡ ಕಾದಂಬರಿ, ಅಧ್ಯಯನ, (ವಿಮರ್ಶಾ - ಲೇಖನಗಳು) ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ, ೧೯೮೭, ಪು : ೫೨ - ೫೩

೧೧. ಪೂರ್ಣಚಂದ್ರ ತೇಜಸ್ವಿ ಕೆ.ಪಿ, ಅಣ್ಣನ ನೆನಪು, ಪುಸ್ತಕ ಪ್ರಕಾಶನ, ಮೈಸೂರು, ೧೯೯೬, ಪು : ೧೪೦

೧೨. ಈಶ್ವರ ಸಣಕಲ್ಲ, ನಾಕಂಡ ಕುವೆಂಪು ಕವಿದರ್ಶನ, (ಸಂ) ದೇ.ಜವರೇಗೌಡ, ಚೇತನ ಪುಸ್ತಕಾಲಯ, ಲಕ್ಷ್ಮೀ ವಿಲಾಸ ಅಗ್ರಹಾರ, ಮೈಸೂರು, ೧೯೫೨, ಪು : ೭

೧೩. ಕುವೆಂಪು, (ಸಂ) ಜಿ.ಎಸ್.ಶಿವರುದ್ರಪ್ಪ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ

೧೪. ನಾಗರಾಜ್ ಡಿ.ಆರ್, ಕುವೆಂಪು ಕೃತಿಗಳಲ್ಲಿ ವರ್ಣ - ವರ್ಗ ಸಂಘರ್ಷ, ಅಮೃತ ಮತ್ತು ಗರುಡ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೦, ಪು : ೧೯

೧೫. ವೆಂಕಟರಾಮಪ್ಪ ಕೆ, ಕವಿಸನ್ಮಾನ, ಕುವೆಂಪು ದರ್ಶನಂ, (ಸಂ) ಹೊ.ಶ್ರೀನಿವಾಸಯ್ಯ, ಶಕ್ತಿ ಪ್ರಕಾಶನ, ಬೆಂಗಳೂರು, ೧೯೯೯, ಪು : ೨೭

೧೬. ನರಸಿಂಹಾಚಾರ್ ಡಿ.ಎಲ್, ಕೇಶಿರಾಜನ ಗರಡಿಯಲ್ಲಿ ಕುವೆಂಪು ದರ್ಶನಂ, (ಸಂ) ಹೊ.ಶ್ರೀನಿವಾಸಯ್ಯ, ಶಕ್ತಿ ಪ್ರಕಾಶನ, ಬೆಂಗಳೂರು, ೧೯೯೯, ಪು : ೭ - ೮

೧೭. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕವಿ ಚಿರಾಯುವಾಗಲಿ, ಕುವೆಂಪು ದರ್ಶನಂ, (ಸಂ) ಹೊ.ಶ್ರೀನಿವಾಸಯ್ಯ, ೧೯೯೦, ಪು : ೧೪ - ೧೫

೧೮. ಗೋಕಾಕ್ ವಿ.ಕೃ, ಡಾ. ಕೆ.ವಿ.ಪುಟ್ಟಪ್ಪನವರು, (ಸಂ) ಕಾಶಿನಾಥಶೆಟ್ಟಿ, ಉಪಾಯನ ಕೃತಿ ಕರಂಡ, ಶ್ರೀ ಕುವೆಂಪು ಸನ್ಮಾನ ಸಮಿತಿ, ಚಿಕ್ಕಮಗಳೂರು, ೧೯೭೯, ಪು : ೩೪

೧೯. ಮಿರ್ಜಿ ಅಣ್ಣಾರಾಯ, ಶ್ರೀ ಪುಟ್ಟಪ್ಪನವರು, ವಿಭೂತಿಯೋಗ ಉಪಾಯನ ಕೃತಿ ಕರಂಡ, ಶ್ರೀ ಕುವೆಂಪು ಸನ್ಮಾನ ಸಮಿತಿ, ಚಿಕ್ಕಮಗಳೂರು, ೧೯೭೯, ಪು : ೫೪ - ೫೫

೨೦. ಶಿವರಾಮ ಕಾರಂತ, ಕುವೆಂಪು ದರ್ಶನ, (ಸಂ) ಹರಿಹರಪ್ರಿಯ ಸಂಪುಟ - ೧, ೧೯೭೭, ಪುಟ : ೨೪

೨೧. ಸೀತಾರಾಮಯ್ಯ ಎಂ.ವಿ, ಕನ್ನಡಕ್ಕೆ ಶ್ರೀ ಕುವೆಂಪು ಕಾಣಿಕೆ, (ಸಂ) ಕಾಶಿನಾಥಶೆಟ್ಟಿ, ಉಪಾಯನ ಕೃತಿ ಕರಂಡ, ಶ್ರೀ ಕುವೆಂಪು ಸನ್ಮಾನ ಸಮಿತಿ, ಚಿಕ್ಕಮಗಳೂರು, ೧೯೭೯, ಪು : ೧೨೮

೨೨. ಶಿವರುದ್ರಪ್ಪ ಜಿ.ಎಸ್, ಕಾಡಿನ ಕವಿ ಕುವೆಂಪು, ಕೆಲವು ಪ್ರಸಂಗಗಳು, ಕಸ್ತೂರಿ ಮಾಸಿಕ ಪತ್ರಿಕೆ, ಜನವರಿ ೧೯೯೫, ಪುಟ ೧೧ - ೧೩

೨೩. ಕಮಲಾಪುರ ಜ.ನಾ. (೧೯೫೦), ರಂ. ಶ್ರೀ, ಮುಗುಳಿ (೧೯೫೫), ಕುರ್ತುಕೋಟಿ ಕೆ.ಡಿ. (೧೯೬೦), ಎಂ.ಜಿ. ಕೃಷ್ಣಮೂರ್ತಿ (೧೯೬೨), ಸುಜನಾ (೧೯೬೫), ಜವರೇಗೌಡ ದೇ. (೧೯೬೮), ಕುಪ್ಪುಸ್ವಾಮಿ (೧೯೬೮), ಕಾಶಿವಿಶ್ವನಾಥ ಶೆಟ್ಟಿ (೧೯೭೯), ಸಾವಿತ್ರಿ ಕೆ. (೧೯೭೯), ಬಸವರಾಜ್ ಕಟ್ಟೀಮನಿ (೧೯೭೦), ಗೋವಿಂದರಾವ್ ಸಿ.ಡಿ. (೧೯೭೦), ರಾಮಣ್ಣ ಸೋ.ಕೆಂ. (೧೯೭೦) ತಪಸ್ವೀಕುಮಾರ್ ನಂ. (೧೯೭೦), ಅನಂತಮೂರ್ತಿ ಯು.ಆರ್. (೧೯೭೧), ಲಕ್ಷ್ಮೀನಾರಾಯಣ (೧೯೭೨), ಶ್ರೀ ಕೃಷ್ಣ ಆಲನಹಳ್ಳಿ

(೧೯೭೨), ಎನ್. ಬೋರಲಿಂಗಯ್ಯ (೧೯೭೨), ಸಿ.ಪಿ. ಕೃಷ್ಣಕುಮಾರ್ (೧೯೭೪), ಶಿವನಂಜಯ್ಯ ಮು. (೧೯೭೪), ವಿಜಯಕುಮಾರ್ ಹ.ನಂ. (೧೯೭೭), ಲಕ್ಕಪ್ಪಗೌಡ ಹೆಚ್.ಜೆ. (೧೯೭೮), ಯಶೋಧರಾ ಹೆಚ್.ಬಿ. (೧೯೭೯), ಸುಬ್ಬರಾಯಚಾರ್ ಉ.ಕಾ. (೧೯೭೯), ಇನಾಂದಾರ್ ವಿ.ಎಂ. (೧೯೭೯), ಸುಬ್ಬರಾಯಚಾರ್ ಉ.ಕಾ. (೧೯೭೯), ಕೆ.ಪಿ. ಪೂರ್ಣಚಂದ್ರ ತೇಜಸ್ವಿ (೧೯೮೦), ಚನ್ನಯ್ಯ ಎಚ್.ಎಂ. (೧೯೮೦), ನಾರಾಯಣ ಕೆ.ವಿ. (೧೯೮೦), ನಾಗರಾಜ್ ಡಿ.ಆರ್. (೧೯೮೦), ಕೃಷ್ಣಪ್ಪ ಬಿ. (೧೯೮೦), ನಂಜುಂಡೇಗೌಡ ಜೆ.ಆರ್. (೧೯೮೧), ಶ್ರೀಕಂಠ ಕೂಡಿಗೆ (೧೯೮೨), ಗಿರಿಜಾ ಎಲ್. (೧೯೮೪), ವೇಣುಗೋಪಾಲರಾವ್ (೧೯೮೪), ಭಗವಾನ್ (೧೯೮೪), ರಾಜೇಂದ್ರ ಚನ್ನಿ (೧೯೮೭), ಸಿದ್ಧಾಶ್ರಮ (೧೯೮೭), ಪ್ರಧಾನ ಗುರುದತ್ತ (೧೯೮೭), ಸುಧಾಕರ (೧೯೮೮), ಕೃಷ್ಣಯ್ಯ ಎಂ.ಹೆಚ್. (೧೯೮೯), ಹಿ.ಚಿ. ಬೋರಲಿಂಗಯ್ಯ (೧೯೮೯), ರಾಮಚಂದ್ರನ್ ಸಿ.ಎನ್. (೧೯೮೯), ಶ್ರೀಮತಿ ಪ್ರೇಮ ಸಿರ್ಸೆ (೧೯೮೯), ಗುರುಪಾದ ಮರಿಗುದ್ದಿ (೧೯೮೯), ವೇಣುಗೋಪಾಲ ಸೊರಬ (೧೯೯೦), ನಾಗಭೂಷಣ ಡಿ.ಎಸ್. (೧೯೯೦), ಬಸವರಾಜ ಕಲ್ಗುಡಿ (೧೯೯೦), ರಹಮತ್ ತರೀಕೆರೆ (೧೯೯೦), ಶಿವರಾಮು ಕಾಡನಕುಪ್ಪೆ (೧೯೯೦), ಶ್ರೀನಿವಾಸ ಉಡುಪ (೧೯೯೧), ಶಿವಾರೆಡ್ಡಿ ಕೆ.ಸಿ. (೧೯೯೨), ನಾಗಣ್ಣ ಸಿ. (೧೯೯೪), ಸುಮಿತ್ರಾಬಾಯಿ ಎನ್. (೧೯೯೪), ಆರ್ಕೆ ಮಣಿಪಾಲ (೧೯೯೪), ಕೆ.ವಿ. ಸುಬ್ಬಣ್ಣ (೧೯೯೫), ಕೋದಂಡರಾಮ ಎನ್.ಕೆ. (೧೯೯೬), ವಿಠಲ್‌ರಾವ್ ಗಾಯಕ್ವಾಡ್ (೧೯೯೭), ಶಿವಶಂಕರ್ ಜಿ.ಎಸ್. (೧೯೯೮), ಹರಿಹರಪ್ರಿಯ (೧೯೯೮), ಜಯದೇವ್ ಹು.ಕಾ. (೧೯೯೯), ದೇವನೂರು ಮಹಾದೇವ (ಪ್ರಜಾವಾಣಿ ದಿನಪತ್ರಿಕೆ, ಮಾರ್ಚ್, ೫ - ೧೯೯೯), ಚಂದ್ರಶೇಖರ್ ಎಸ್. (೧೯೯೯), ಪುಟ್ಟಯ್ಯ ಬಿ.ಎಂ. (೨೦೦೨).



೬

# ಕುವೆಂಪು ಕಾದಂಬರಿಗಳಲ್ಲಿನ ಪಾತ್ರಗಳು

ಈ ಅಧ್ಯಾಯದಲ್ಲಿ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳ ಎಲ್ಲಾ ಪಾತ್ರಗಳ ಪರಿಚಯವನ್ನು ಸಂಕ್ಷಿಪ್ತವಾಗಿ ಮಾಡಿಕೊಡಲು ಪ್ರಯತ್ನಿಸಿದ್ದೇನೆ. ಈ ಬಗೆಯ ಪರಿಚಯ ಮಹಾಪ್ರಬಂಧದ ಸಂದರ್ಭದಲ್ಲಿ ಅಗತ್ಯವೇ ಎಂಬ ಪ್ರಶ್ನೆ ಸಹಜವಾಗಿಯೇ ಎದುರಾಗುತ್ತದೆ. ಆದರೂ ಕಾದಂಬರಿಗಳ ಗಾತ್ರ, ಪುಟಗಳ ಸಂಖ್ಯೆ, ಪಾತ್ರ ಮತ್ತು ಮನುಷ್ಯ ಸಂಬಂಧಗಳ ವಿಸ್ತಾರವಾದ ಸಂವಿಧಾನವನ್ನು ನೋಡಿದರೆ ಅದರ ಅಗತ್ಯತೆ ಇದೆಯೆನ್ನಿಸುತ್ತದೆ. ಕಾದಂಬರಿಗಳ ಗಾತ್ರ ಮತ್ತು ಸಂವಿಧಾನದ ವ್ಯಾಪ್ತಿಯ ವಿಶಾಲತೆಯನ್ನು ಕಂಡ ಕಾದಂಬರಿಗಳ ಲೇಖಕರಾದ ಕುವೆಂಪುರವರೇ ಈ ಕೃತಿಗಳನ್ನು ಗ್ರಹಿಸಬೇಕಾದ, ಓದಬೇಕಾದ ಮಾದರಿಯನ್ನು ತಮ್ಮ 'ಅರಿಕೆ'ಯಲ್ಲಿ "ಇಲ್ಲಿ ಯಾರೂ ಮುಖ್ಯರಲ್ಲ, ಅಮುಖ್ಯರಲ್ಲ; ಯಾವುದೂ ಯಃಕಶ್ಚಿತವಲ್ಲ. ಇಲ್ಲಿ ಯಾವುದಕ್ಕೂ ಮೊದಲಿಲ್ಲ; ಯಾವುದಕ್ಕೂ ತುದಿಯಿಲ್ಲ; ಯಾವುದೂ ಎಲ್ಲಿಯೂ ನಿಲ್ಲುವುದಿಲ್ಲ; ಕೊನೆ ಮುಟ್ಟುವುದೂ ಇಲ್ಲ" ಎಂದು ಹೇಳಿದ ಅವರು ಕಾದಂಬರಿ ಎನ್ನುವುದು ಒಂದು 'ಕರತಲರಂಗಭೂಮಿ' ಎಂದು ಓದಿನ ಕಲ್ಪನೆಯ ಬಗ್ಗೆ ಸ್ಪಷ್ಟಪಡಿಸುತ್ತಾರೆ.

ಅವರ 'ಅರಿಕೆ'ಯ ಈ ಮಾತುಗಳನ್ನು ಸೂಕ್ಷ್ಮವಾಗಿ ಮನನ ಮಾಡಿದರೆ ಈ ಅಧ್ಯಾಯದಲ್ಲಿ ನಾನು ಪರಿಚಯಿಸಲು ಹೊರಟಿರುವ ಪಾತ್ರಗಳ ಪರಿಚಯ ಅಗತ್ಯವೆಂದೇ ನನಗನ್ನಿಸುತ್ತದೆ. ಲೇಖಕರು ತಮ್ಮ ಅರಿಕೆಯಲ್ಲಿ ಬೃಹತ್ತಾದ ಕಾದಂಬರಿಗಳನ್ನು ಓದುವಾಗ ಓದುಗನ ಕಲ್ಪನೆ ಸದಾ ಎಚ್ಚೆತ್ತಿರಬೇಕೆಂದು ಸೂಚಿಸುತ್ತಾರೆ. ಹಾಗೆ ಎಚ್ಚೆತ್ತಿರಬೇಕಾದ ಅಗತ್ಯತೆಯನ್ನು ಒತ್ತಿ ಹೇಳುತ್ತಾರೆ. ಅದಕ್ಕೆ ಕಾರಣ ಯಾವುದೇ ಒಂದು ಮಹತ್ವವಾದ ಕೃತಿಯಿಂದ ದೊರಕಬಹುದಾದ ರಸಾಸ್ವಾದನೆಗೆ ಭಂಗವಾಗಬಾರದೆಂಬ ಆಶಯದಿಂದ ಓದುಗನ ಕಲ್ಪನೆ ಎಚ್ಚರದಿಂದ ಇರಬೇಕಾದ ಅಗತ್ಯತೆಯನ್ನೇ ಹೇಳುತ್ತದೆ. ಇಲ್ಲದಿದ್ದರೆ ಅಂಥ ಓದು ಸಾರ್ಥಕವಾಗಲಾರದೆಂದು ಸೂಚಿಸುತ್ತಾರೆ.

"ಸನ್ನಿವೇಶಗಳನ್ನು ಕಲ್ಪಿಸಿಕೊಳ್ಳುವಾಗ, ದೃಶ್ಯಗಳನ್ನು ಚಿತ್ರಿಸಿಕೊಳ್ಳುವಾಗ, ವ್ಯಕ್ತಿಗಳನ್ನು ಪರಿಚಯ ಮಾಡಿಕೊಳ್ಳುವಾಗ, ಅವರ ಸಂಭಾಷಣೆಗಳನ್ನು ಅವರವರ ಬೇರೆ ಬೇರೆಯ ವಾಣಿಗಳೊಡನೆ ಆಲಿಸುವಾಗ ವಾಚಕರು ಸಿನಿಮಾ ವಾಕ್ಚಿತ್ರವನ್ನು ತತ್ಪರತೆಯಿಂದ ನೋಡುತ್ತಿರುವ ಪ್ರೇಕ್ಷಕರಂತಾಗಬೇಕಾಗುತ್ತದೆ." - ಎಂಬ ಲೇಖಕರ 'ಅರಿಕೆ'ಯ

ಮಾತುಗಳಲ್ಲಿ ಇಡೀ ಕಥಾ ಸಂವಿಧಾನದ ಸನ್ನಿವೇಶ, ದೃಶ್ಯ, ವ್ಯಕ್ತಿ, ಆ ವ್ಯಕ್ತಿಗಳ ಸಂಭಾಷಣೆಯು ಅತ್ಯಂತ ಪರಿಣಾಮಕಾರಿಯಾಗಿ ಆಗಬೇಕಾದರೆ ಈ ಕೃತಿಗಳಲ್ಲಿ ಪರಿಚಯಿಸಿರುವ ವ್ಯಕ್ತಿಗಳು - ಆ ವ್ಯಕ್ತಿಗಳು ಬೇರೊಬ್ಬ ವ್ಯಕ್ತಿಯೊಡನೆ ಪಡೆದ ಸಂಬಂಧಗಳು, ಆ ಸಂಬಂಧಗಳು ನಡೆಯುವ ಸನ್ನಿವೇಶಗಳ ಪರಿಚಯ ಇರಲೇ ಬೇಕಾಗುತ್ತದೆ - ಎಂಬ ಕಾರಣದಿಂದ ಈ ಅಧ್ಯಾಯವನ್ನು ರೂಪಿಸಲಾಗಿದೆ.

ಈ ಎರಡು ಕಾದಂಬರಿಗಳ ಓದಿನ ಬಗೆ ವಾಚಕರಲ್ಲಿ ಕುವೆಂಪುರವರು ಮಾಡಿಕೊಳ್ಳುವ ವಿಜ್ಞಾಪನೆಯು ತುಂಬಾ ಮಹತ್ವವಾಗಿ ಕಾಣುತ್ತದೆ. ಏಕೆಂದರೆ ಸುಮಾರು ಆರುನೂರರಿಂದ ಏಳುನೂರರಷ್ಟು ಪುಟಗಳನ್ನು ಹೊಂದಿರುವ ದೊಡ್ಡ ಕಾದಂಬರಿಗಳನ್ನು ಓದುವಾಗ ಮತ್ತು ಅನೇಕರಿಗೆ ಅಪರಿಚಿತವಾದ ಮಲೆನಾಡಿನ ಬದುಕನ್ನು ಹಾಗೂ ಮಲೆನಾಡಿನ ಪ್ರಾಕೃತಿಕ ಪರಿಸರವನ್ನು ಪ್ರವೇಶಿಸುವಾಗ ವಾಚಕರು ವರ್ತಿಸಬೇಕಾದ ಬಗೆಯನ್ನು ಸೂಚಿಸುವಲ್ಲಿಯೂ ಕಾದಂಬರಿಯಲ್ಲಿಯ ಪ್ರತಿಯೊಂದು ಘಟನೆಯ ವಿವರಗಳನ್ನು ತಿಳಿದಿರುವುದು ಅಗತ್ಯವೆಂದೇ ಕಾಣುತ್ತದೆ. ಅಷ್ಟೇ ಅಲ್ಲದೆ ಇಂಥ ಬೃಹತ್ತಾದ ಕೃತಿಗಳನ್ನು, ಆ ಕೃತಿಗಳಲ್ಲಿ ಚಿತ್ರಿತವಾಗಿರುವ ಬದುಕನ್ನು, ಆ ಬದುಕಿನ ವ್ಯಾಪ್ತಿಯಲ್ಲಿ ಬರುವ ಅಸಂಖ್ಯ ಜೀವ ಸಂಬಂಧಗಳನ್ನು ಲೇಖಕನಷ್ಟೇ ಓದುಗನು ತಿಳಿಯಬೇಕಾದರೆ, ಅಂಥ ಕೃತಿಗಳ ಪ್ರವೇಶ ಸಾರ್ಥಕಗೊಳ್ಳಬೇಕಾದರೆ ಅನೇಕ ಓದುಗಳ ಅಗತ್ಯತೆ ಇಂಥ ಕೃತಿಗಳಿಗೆ ಬೇಕೆನ್ನುಸುತ್ತದೆ.

"ಮೊದಲನೆಯ ಸಾರಿ ಓದಿದೊಡನೆ ಎಲ್ಲವನ್ನು ಪೂರೈಸಿದೆವು ಎಂದುಕೊಳ್ಳುವವರು, ಮೋಟಾರಿನಲ್ಲಿ ಕುಳಿತು ಒಂದೂರಿನ ಪೂರ್ವದ್ವಾರದಿಂದ ಒಳನುಗ್ಗಿ, ಅದರ ಬೀದಿಗಳಲ್ಲಿ ಸರ್ರನೆ ಸಂಚರಿಸಿ, ಪಶ್ಚಿಮ ದ್ವಾರದಿಂದ ಹೊರಹೊರಟು, ಆ ಊರಿನ ಪೂರ್ಣ ಪರಿಚಯ ಮಾಡಿಕೊಂಡಿದ್ದೇವೆ ಎನ್ನುವವರಂತೆ ಹಾಸ್ಯಾಸ್ಪದರಾಗುತ್ತಾರೆ. ಈ ಕಾದಂಬರಿಯನ್ನು ರಚಿಸುವಾಗಲೂ, ತರುವಾಯ ಮತ್ತೆ ಮತ್ತೆ ಓದುವಾಗಲೂ ನನಗೆ ಬಹುವಾಗಿ ಬಂದಿರುವ ರಸ ಸುಖದಲ್ಲಿ ಒಂದಿನಿತನ್ನಾದರೂ ಇದನ್ನು ಓದುವವರು ಸವಿಯುತ್ತಾರೆಂದು ಗೊತ್ತಾದರೆ ಕೃತಿ ಸಾರ್ಥಕವಾಯಿತೆಂದು ಭಾವಿಸುತ್ತೇನೆ."

ಈ ಮೇಲಿನ ಉದ್ಧರಣೆಯನ್ನು ಗಮನಿಸಿದರೆ ಒಟ್ಟು ಕೃತಿಗಳ ಸೃಷ್ಟಿಕಾರ್ಯದ ಉದ್ದೇಶ ಸಾರ್ಥಕಗೊಳ್ಳಬೇಕಾದರೆ ಈ ಕೃತಿಗಳ ಕಥಾ ಸಂವಿಧಾನದ ಮೂಲೆ ಮುಡುಕುಗಳು ಓದುಗನಿಗೆ ಹೇಗೆ ಅಗತ್ಯವೋ ಹಾಗೆಯೇ ಬೇರೆ ಬೇರೆ ನೆಲೆಗಳಿಂದ, ದೃಷ್ಟಿಕೋನಗಳಿಂದ, ಉದ್ದೇಶಗಳಿಂದ ಸಾಂಸ್ಕೃತಿಕ ಅಧ್ಯಯನಕ್ಕೆ ತೊಡುಗುವವರಿಗೆ ಪರಿಚಯ ಇರಬೇಕಾಗುತ್ತದೆ. ಹಾಗಾಗಿ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವ ಪಾತ್ರಗಳನ್ನು, ಕಾದಂಬರಿಯಲ್ಲಿ ಬರುವ ಅನುಕ್ರಮದಲ್ಲಿ ಪರಿಚಯಿಸಲು ಇಲ್ಲಿ ಪ್ರಯತ್ನಿಸಿದ್ದೇನೆ.

'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳ ಓದುಗರಲ್ಲಿ ಕುವೆಂಪು ಮಾಡಿಕೊಳ್ಳುವ 'ಅರಿಕೆ'ಯ ಹಿಂದೆ ಒಂದು ಕಾಲದ ಸಾಂಸ್ಕೃತಿಕ ಪ್ರಜ್ಞೆ ಪ್ರಜ್ಞಾಪೂರ್ವಕವಾಗಿಯೇ ಕೆಲಸ ಮಾಡುತ್ತಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ಮಧ್ಯಮ ವರ್ಗದವರ ಮಹಾಕಾವ್ಯವೆಂಬ ಹೆಗ್ಗಳಿಕೆಗೆ ಒಳಗಾದ ಇಪ್ಪತ್ತನೆಯ ಶತಮಾನದ ಬಹುದೊಡ್ಡ ಕೊಡುಗೆಯಾದ ಕಾದಂಬರಿ ಪ್ರಕಾರದ ಮಹತ್ವವನ್ನೇ ಈ 'ಅರಿಕೆ'ಗಳು ಪ್ರಕಟಪಡಿಸುತ್ತವೆ. ಅಂಥ ಮಹತ್ವ ಕೃತಿಗಳ ಓದು ಆ ಓದಿನ ಮನೋಭೂಮಿಕೆಗಳು ಸನ್ನದ್ಧುಗೊಳ್ಳಬೇಕಾದ ಬಗೆಯನ್ನು, ಬೃಹತ್ತಾದುದ್ದನ್ನು

ಪ್ರವೇಶಿಸುವಾಗ ಅವಸರದ ನಡುವೆಯೂ ಸಾವಧಾನದ ಬೆನ್ನೇರಬೇಕಾದ ಅಗತ್ಯತೆಯನ್ನು ಈ ಕೃತಿಗಳ ಅರಿಕೆಗಳು ಸೂಚಿಸುತ್ತವೆ. ಹಾಗಾಗಿ ಇಲ್ಲಿನ ಎಲ್ಲಕ್ಕೂ ಅರ್ಥಗಳನ್ನು ಕಂಡುಕೊಳ್ಳಬೇಕಾದ ಓದುಗ ಎಲ್ಲವನ್ನು ಕೂಲಂಕಷವಾಗಿ, ವಿವರವಾಗಿ ಗೊಂದಲಗಳಿಲ್ಲದೆ ಪರಿಚಯಿಸಿಕೊಳ್ಳಬೇಕಾದ ಅಗತ್ಯವಿದೆ ಎಂದು ಕಾಣುತ್ತದೆ. ಈ ಎರಡು ಕಥಾನಕಗಳು ನಡೆಯುವ ಭೌಗೋಳಿಕ - ಪ್ರಾಕೃತಿಕ ವಿವರಗಳ ಪರಿಚಯವು, ಮನುಷ್ಯ ಜೀವಜಾಲಗಳ ಪರಿಚಯವು ಚೆನ್ನಾಗಿ ಆಗಿದ್ದಾದರೆ, ಅಧ್ಯಯನಕ್ಕೆ ತೊಡುಗುವವರಿಗೆ ತಾನು ಶೋಧಿಸಿಕೊಳ್ಳಬೇಕಾಗಿರುವ ಅನೇಕ ಸತ್ಯಗಳನ್ನು ಕಂಡುಕೊಳ್ಳಬೇಕಾದ ಕಾಣ್ಕೆಗಳನ್ನು ಕಾಣಲು ಸುಲಭವಾಗುತ್ತದೆ ಎಂದು ಭಾವಿಸಲಾಗಿದೆ.

## ೧. ಕಾನೂರು ಹೆಗ್ಗಡಿತಿ

### ಕಾದಂಬರಿಯ ಪಾತ್ರಗಳ ಪರಿಚಯ

❒ **ಹೂವಯ್ಯ :** ಕಾನೂರು ಚಂದ್ರಯ್ಯಗೌಡರ ಅಣ್ಣ ದಿವಂಗತ ಸುಬ್ಬಯ್ಯಗೌಡರು ಮತ್ತು ನಾಗಮ್ಮನವರ ಏಕೈಕ ಪುತ್ರ. ಮೈಸೂರಿನಲ್ಲಿ ಓದುತ್ತಿದ್ದ ಹೂವಯ್ಯ ಬೇಸಿಗೆ ರಜೆಗೆ ಕಾನೂರಿಗೆ ಬಂದ ನಂತರ ಬದಲಾದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಓದನ್ನು ಅರ್ಧಕ್ಕೇ ನಿಲ್ಲಿಸಿ ಕಾನೂರಿನಲ್ಲೇ ನಿಲ್ಲಬೇಕಾಗುತ್ತದೆ. ಚಿಕ್ಕಪ್ಪ ಚಂದ್ರಯ್ಯಗೌಡನ ಈರ್ಷ್ಯೆ ತಾಳಲಾರದೆ ಪಾಲು ತೆಗೆದುಕೊಂಡು ಕೆಳಕಾನೂರಿನಲ್ಲಿ ನೆಲೆಯೂರುತ್ತಾನೆ. ತನ್ನ ಮನೋವೃತ್ತಿಯಿಂದಾಗಿ ಆತ ಕಾದಂಬರಿಯ ಉಳಿದೆಲ್ಲ ಪಾತ್ರಗಳಿಗಿಂತ ಭಿನ್ನವಾಗಿ ನಿಲ್ಲುತ್ತಾನೆ. ಹೂವಯ್ಯ ತನ್ನ ಸುಶಿಕ್ಷಿತತೆ, ಆಧ್ಯಾತ್ಮಿಕತೆ ಮತ್ತು ಕ್ರಿಯಾಶೀಲತೆಯಿಂದ ಸುತ್ತಲಿನವರ ಬದುಕನ್ನು ಉತ್ತಮಗೊಳಿಸಲು ಪ್ರಭಾವ ಬೀರುತ್ತಾನೆ. ತಾನು ಪ್ರೀತಿಸಿದ ಮುತ್ತಳ್ಳಿ ಶ್ಯಾಮೇಗೌಡರ ಮಗಳು ಸೀತೆಯನ್ನು ಮದುವೆಯಾಗಲಾರದೆ ನಿರಾಶೆಗೊಂಡರೂ ಕೊನೆಗೆ ಜೀವನ ಪ್ರೀತಿ ಆತನನ್ನು ಎತ್ತರಕ್ಕೆ ಕೊಂಡೊಯ್ಯುತ್ತದೆ. ಹೂವಯ್ಯನ ಪ್ರಯತ್ನದಿಂದ ಮಲೆನಾಡಿನ ಅನೇಕ ಹಳ್ಳಿಗಳು ನಾಗರಿಕತೆಯೆಡೆಗೆ ಹೆಜ್ಜೆ ಹಾಕುತ್ತವೆ. ಆಳುಗಳು ತಮ್ಮ ಅನಾಗರಿಕ ಬದುಕಿನಿಂದ ನಾಗರಿಕ ಬದುಕಿನೆಡೆಗೆ ಮುನ್ನಡೆಯುತ್ತಾರೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯ ನಾಯಕ ನಿಸ್ಸಂದೇಹವಾಗಿ ಹೂವಯ್ಯನೇ ಆಗಿದ್ದಾನೆ.

❒ **ರಾಮಯ್ಯ :** ಕಾನೂರು ಚಂದ್ರೇಗೌಡರ ಮೊದಲನೇ ಹೆಂಡತಿಯ ಮಗ. ಹೂವಯ್ಯನೊಡನೆ ಮೈಸೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದವನು ಅವನ ಜೊತೆಗೇ ಕಾನೂರಿಗೆ ಬರುತ್ತಾನೆ. ರಾಮಯ್ಯನೂ ತಂದೆಯ ಇಚ್ಛೆಯಂತೆ ವಿದ್ಯಾಭ್ಯಾಸ ಬಿಡಬೇಕಾಗುತ್ತದೆ. ತಂದೆಯ ತಂತ್ರದಿಂದ ಹೂವಯ್ಯನನ್ನು ದ್ವೇಷಿಸುವ ರಾಮಯ್ಯ ಸೀತೆಯನ್ನು ಮದುವೆಯಾಗುತ್ತಾನೆ. ಆದರೆ ಮದುವೆ ತಂದೊದಗಿಸುವ ಕಾರ್ಪಣ್ಯಗಳಿಂದ ಜರ್ಜರಿತನಾಗುತ್ತಾನೆ. ತನ್ನ ಕಣ್ಣುಮುಂದೆಯೇ ಕಾನೂರು ಮನೆತನ

ಪತನವಾಗುತ್ತಿರುವುದನ್ನು ಕಂಡ ದುರ್ಬಲ ಮನಸ್ಸಿನ ರಾಮಯ್ಯ ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

❒ **ನಿಂಗ :** ಕಾನೂರು ಮನೆತನದ ಆಳು. ಗಾಡಿಯನ್ನು ಒಡೆಯುವವನು. ಗಾಡಿಯಾಳು ನಿಂಗ ಎಂದೇ ಪರಿಚಿತ. ರಾಮಯ್ಯ ಮತ್ತು ಹೂವಯ್ಯನನ್ನು ಕಾನೂರಿಗೆ ಕರೆತರುವ ಹಾದಿಯಲ್ಲಿ ಎತ್ತುಗಳು ಕೆರೆಗೆ ಎಳೆದಾಗ ಆತ ಗಾಡಿ ನಿಲ್ಲಿಸಲು ವಿಫಲನಾಗಿ ಗಾಡಿ ಉರುಳುತ್ತದೆ. ಈ ಘಟನೆ ಕಾದಂಬರಿಯ ಮುಂದಿನ ಎಲ್ಲಾ ಅಲ್ಲೋಲ - ಕಲ್ಲೋಲಗಳಿಗೆ ಮುನ್ನುಡಿಯಂತಿದೆ. ಚಂದ್ರಯ್ಯಗೌಡರನ್ನು ಧರ್ಮಸ್ಥಳಕ್ಕೆ ಕರೆದೊಯ್ಯುವ ನಿಂಗ ವಾಪಸ್ಸು ಬರುವಾಗ ಕಾಯಿಲೆಯಿಂದ ಸಾಯುತ್ತಾನೆ. ನಿಂಗನ ಮಗ ಪುಟ್ಟನನ್ನು ಓಬಯ್ಯ ಆದರಿಸುತ್ತಾನೆ.

❒ **ಪುಟ್ಟಣ್ಣ :** ಕಾನೂರು ಚಂದ್ರಯ್ಯಗೌಡರ ಮನೆಯಲ್ಲಿದ್ದ ಪುಟ್ಟಣ್ಣ ಅವರಿಗೆ ಸಂಬಂಧಿಯಲ್ಲ, ಆದರೆ ಒಕ್ಕಲಿನವನು, ಕಾದಂಬರಿಯ ಬಹುಮುಖ್ಯ ಪಾತ್ರಗಳಲ್ಲೊಬ್ಬ. ಮದುವೆಯಾಗದೆ, ಮನೆ ಮಠ ಯಾವುದರ ಹಂಗಿಲ್ಲದೆ ತನ್ನ ನಾಯಿ - ಟೈಗರ್ ಜೊತೆ ಕಾಡು ಮೇಡು ಅಲೆಯುತ್ತಾ ಬೇಟೆಯಲ್ಲಿ ಪಳಗಿದ್ದವನು. ಕೋವಿ ಕೆಲಸ, ಕಬ್ಬಿಣದ ಕೆಲಸ, ಬಡಗಿ ಕೆಲಸ, ಬೆತ್ತದ ಕೆಲಸ - ಹೀಗೆ ಹತ್ತಾರು ಕಸುಬು ತಿಳಿದಿದ್ದರೂ ಎಂದಿಗೂ ಅವುಗಳನ್ನು ಸಂಪಾದನೆಗೆ ಬಳಸಿಕೊಂಡವನಲ್ಲ. ಹೂವಯ್ಯನಿಂದ 'ಕಾಡು ಫಕೀರ' ಎಂದು ಕರೆಸಿಕೊಂಡವನು. ಎಲ್ಲಾ ಘಟನೆಗಳನ್ನು ನಿರ್ಲಿಪ್ತವಾಗಿ ಕಾಣುವ ಪುಟ್ಟಣ್ಣ ತನ್ನ ನಾಯಿ ಸತ್ತಾಗ ದುಃಖಿಸುತ್ತಾನೆ. ಕಾನೂರು ಮನೆ ಪಾಲಾದಾಗ ಹೂವಯ್ಯನ ಜೊತೆಯಲ್ಲಿಯೇ ನೆಲೆ ನಿಲ್ಲುತ್ತಾನೆ. ಅಂತಿಮವಾಗಿ ಹೂವಯ್ಯನ ಪ್ರಭಾವದಿಂದ ಬೇಟೆಯನ್ನು ಬಿಡಲು ಯತ್ನಿಸಿದರೂ ಸಫಲನಾಗದೆ ಕೊನೆಗೆ ಕಾನೂರು ವಾಸಪ್ಪಗೌಡ (ವಾಸು) ರಲ್ಲಿ ನೆಲೆಯಾಗುತ್ತಾನೆ.

❒ **ಸಿಂಗಪ್ಪಗೌಡ :** ಸೀತೆ ಮನೆಯ ಸಿಂಗಪ್ಪಗೌಡರು ಹೂವಯ್ಯನ ಸಂಬಂಧಿ. ಹೂವಯ್ಯನ ತಾಯಿಯ ತಂಗಿಯನ್ನು ಮದುವೆಯಾಗಿರುವ ಸಿಂಗಪ್ಪಗೌಡರು ಹೂವಯ್ಯನಿಗೆ ಕಕ್ಕಯ್ಯ. ಚಂದ್ರೇಗೌಡ ಮತ್ತು ಸಿಂಗಪ್ಪಗೌಡರಿಗೆ ಒಂದು ಕಾಲಕ್ಕೆ ನೆಂಟಸ್ತಿಕೆ - ಗೆಳೆತನವಿದ್ದರೂ, ಕಾದಂಬರಿಯ ಆರಂಭದ ಹೊತ್ತಿಗೆ ಇಬ್ಬರಿಗೂ ಕೂಲಿಯಾಳಿನ ಸಂಬಂಧದಲ್ಲಿ ಮನಸ್ತಾಪವೇರ್ಪಟ್ಟಿರುತ್ತದೆ. ಹಾಗಾಗಿ ಅವರಿಬ್ಬರೂ ಆಗಾಗ್ಗೆ ಘರ್ಷಣೆಗೆ ಇಳಿಯುತ್ತಾರೆ. ಚಂದ್ರೇಗೌಡರ ಇಚ್ಛೆಗೆ ವಿರುದ್ಧ ತಮ್ಮ ಮಗ ಕೃಷ್ಣಪ್ಪನಿಗೆ ಮುತ್ತಳ್ಳಿಯ ಸೀತೆಯನ್ನು ತಂದುಕೊಳ್ಳಲು ತಂತ್ರ ಹೆಣೆಯುತ್ತಾರೆ. ಮಗನ ಸಾವಿನ ನಂತರ ಹೂವಯ್ಯನ ಪರವಾಗಿ ನಿಲ್ಲುತ್ತಾರೆ. ಭಾರತ, ರಾಮಾಯಣವನ್ನು ಓದುವ ಸರಸ

ಪ್ರಕೃತಿಯವರಾದ ಸಿಂಗಪ್ಪಗೌಡರಿಗೆ ಹೂವಯ್ಯ, ರಾಮಯ್ಯನನ್ನು ಕಂಡರೆ ವಿಶೇಷವಾದ ಅಕ್ಕರೆಯಿದ್ದರೂ, ಚಂದ್ರೇಗೌಡನ ವಿರುದ್ಧ ಸಮಯಾವಕಾಶ ಸಿಕ್ಕಾಗಲೆಲ್ಲ ಇಕ್ಕಟ್ಟಿಗೆ ಸಿಕ್ಕಿಸಲು ಪ್ರಯತ್ನಿಸುತ್ತಾರೆ.

❒ **ಚಿನ್ನಯ್ಯ :** ಮುತ್ತಳ್ಳಿ ಶ್ಯಾಮೇಗೌಡರ ಮಗ ಚಿನ್ನಯ್ಯ ಸ್ವಲ್ಪಮಟ್ಟಿಗೆ ಓದಿದವನು. ಸರಳಸ್ವಭಾವದವನಾದ ಆತನಿಗೆ ಹೂವಯ್ಯ - ರಾಮಯ್ಯರಲ್ಲಿ ಗಾಢ ಸ್ನೇಹ. ಹೂವಯ್ಯ - ರಾಮಯ್ಯನವರು ಮೈಸೂರಿನಿಂದ ಬರುತ್ತಾರೆಂದು ತಿಳಿದು ಬೈಲುಕೆರೆಯಲ್ಲಿ ಮೀನು ಶಿಕಾರಿಗೆ ಹೊರಡುತ್ತಾನೆ. ಕಾದಂಬರಿಯಲ್ಲಿ ಚಿನ್ನಯ್ಯನ ಮೀನು ಶಿಕಾರಿ ಚಿತ್ರವತ್ತಾಗಿ ಮೂಡಿಬಂದಿದೆ. ಈತ ಸ್ವಲ್ಪ ಪಟ್ಟಣದ ನಾಗರಿಕತೆಯನ್ನು ಮೈಗೂಡಿಸಿಕೊಂಡ ಚಿನ್ನಯ್ಯ ಕಾನೂರು ಚಂದ್ರೇಗೌಡರ ಎರಡನೆಯ ಹೆಂಡತಿಯ ಮಗಳು ಪುಟ್ಟಮ್ಮನನ್ನು ಮದುವೆಯಾಗುತ್ತಾನೆ.

❒ **ಕುಂಬಾರ ನಂಜ :** ಚಿನ್ನಯ್ಯನ ಮೀನು ಶಿಕಾರಿಯ ಜೊತೆಗಾರ, ಆಳು. ಕಳ್ಳುಕುಡಿಯಲು ತನ್ನ ಹೆಂಡತಿಯ ಕಿವಿಯ ಆಭರಣವನ್ನೂ ಕಿತ್ತು ಕಳ್ಳಂಗಡಿಗೆ ಕೊಡುವ ಮದ್ಯವ್ಯಸನಿ.

❒ **ಗೌರಮ್ಮ :** ಮುತ್ತಳ್ಳಿ ಶ್ಯಾಮೇಗೌಡರ ಧರ್ಮಪತ್ನಿ. ಚಿನ್ನಯ್ಯ, ಸೀತೆ ಮತ್ತು ಲಕ್ಷ್ಮಿಯರ ತಾಯಿ. ಸುಸಂಸ್ಕೃತಳಾದ ಗೌರಮ್ಮನವರು ಚಿನ್ನಯ್ಯನ ಮನಸ್ಸಿಗೆ ಆಕೆಯ ಗರತಿಯ ಗಾಂಭೀರ್ಯ, ತಾಯಿಯ ಪವಿತ್ರತೆ, ನಿಸ್ವಾರ್ಥತೆ, ಸಹಿಷ್ಣುತೆ ಓಡಿಸುತ್ತಿದ್ದವು. ತನ್ನ ಮಗಳು ಸೀತೆಯ ಮದುವೆಗೆ ಸಂಬಂಧಿಸಿದಂತೆ ಯಾವುದೇ ಅಭಿಪ್ರಾಯವನ್ನು ಹೇಳಲಾರದಂತೆ ಆಕೆಯ ಸುಸಂಸ್ಕೃತ ಗುಣ ತಡೆದಿತ್ತು.

❒ **ಸೀತೆ :** ಮುತ್ತಳ್ಳಿ ಶ್ಯಾಮೇಗೌಡ ಮತ್ತು ಗೌರಮ್ಮನವರ ಮಗಳು. ಹೂವಯ್ಯನಿಗಿಂತಲೂ ಐದಾರು ವರ್ಷ ಚಿಕ್ಕವಳಾದ ಸೀತೆಗೆ ಹೂವಯ್ಯ ಆರಾಧ್ಯಮೂರ್ತಿ. 'ಹೂವಯ್ಯ ಭಾವನನ್ನೇ ಮದುವೆಯಾಗುತ್ತೇನೆ' ಎಂದು ಗೋಡೆಯ ಮೇಲೆ ಬರೆದಿದ್ದ ಸೀತೆಯನ್ನು ಹೂವಯ್ಯ ಸಹ ಮೆಚ್ಚಿಕೊಂಡಿದ್ದನು. ಗಾಡಿಯಿಂದ ಉರುಳಿ ಪೆಟ್ಟಾದಾಗ ಸೀತೆಯ ಸನಿಹದಲ್ಲೇ ಕಾಲಕಳೆದ ಹೂವಯ್ಯ ಆಕೆಯನ್ನು ತೀವ್ರವಾಗಿ ಪ್ರೀತಿಸತೊಡಗಿದ. ಸನ್ನಿವೇಶದ ಒತ್ತಡದಿಂದ ಆಕೆಗೆ ಸೀತಮನೆ ಸಿಂಗಪ್ಪಗೌಡರ ಮಗ ಕೃಷ್ಣಪ್ಪನ ಜೊತೆ ಮದುವೆ ನಿಶ್ಚಿಯವಾಗುತ್ತದೆ. ಆದರೆ ಹುಲಿಗೆ ಸಿಕ್ಕು ಕೃಷ್ಣಪ್ಪ ಮೃತನಾದನಂತರ ಚಂದ್ರೇಗೌಡರ ಸಂಚಿನಿಂದ ಅವರ ಮಗ ರಾಮಯ್ಯನ ಜೊತೆ ವಿವಾಹವಾಗುತ್ತದೆ. ತಾನು ಮನಸಾರೆ ಪ್ರೀತಿಸಿದ ಹೂವಯ್ಯನನ್ನು ಮದುವೆಯಾಗಲಾರದೆ ಮಾನಸಿಕ ವೇದನೆಯಿಂದ ತೊಳಲುವ ಸೀತೆ ಅನೇಕ ಕಷ್ಟ ಕಾರ್ಪಣ್ಯಗಳನ್ನು ಎದುರಿಸಬೇಕಾಗುತ್ತದೆ. ರಾಮಯ್ಯನ ಸಾವಿನ ನಂತರ ಸೀತೆ ತನ್ನ ತಂಗಿಯ ಜೊತೆಯಲ್ಲೆ ಕಾನೂರಿನಲ್ಲಿ ನೆಲೆಸಿ ಹೂವಯ್ಯನ ಆಧ್ಯಾತ್ಮಿಕ ಸಂಗಾತಿಯಾಗುತ್ತಾಳೆ.

- **ಲಕ್ಷ್ಮಿ :** ಸೀತೆಯ ತಂಗಿ. ಕಾನೂರು ಚಂದ್ರಯ್ಯಗೌಡರ ಮಗ ವಾಸುವನ್ನು ಮದುವೆಯಾಗಿ ಕಾನೂರಿನಲ್ಲೇ ನೆಲೆಸುತ್ತಾಳೆ. ಬಾಲಕಿಯರಲ್ಲಿ ಕಾಣುವ ಸಹಜ ತುಂಟತನ, ಮುಗ್ಧತೆಯಿಂದ ಲಕ್ಷ್ಮಿ ಓದುಗರನ್ನು ಸೆಳೆಯುತ್ತಾಳೆ.
- **ಚಂದ್ರಯ್ಯಗೌಡ :** ಕಾನೂರು ಮನೆತನದ ಯಜಮಾನ. ಅಣ್ಣ ಸುಬ್ಬಯ್ಯಗೌಡರು ಗತಿಸಿದ ಮೇಲೆ ಈತನೇ ಮನೆಯ ಯಜಮಾನ. ಅಣ್ಣ ಸುಬ್ಬಯ್ಯಗೌಡರು ಸಾಯುವಾಗ ಅವರಿಗೂ ಚಂದ್ರಯ್ಯಗೌಡರಿಗೂ ಮನಸ್ತಾಪವಿತ್ತು. ಹಾಗಾಗಿ ಅಣ್ಣನ ಮಗ ಹೂವಯ್ಯ ಮತ್ತು ಅತ್ತಿಗೆ ನಾಗಮ್ಮನವರ ಬಗ್ಗೆ ಅನಾದರ. ಮೊದಲ ಇಬ್ಬರು ಹೆಂಡತಿಯರು ಗತಿಸಿದ ಮೇಲೆ ನೆಲ್ಲುಹಳ್ಳಿಯ ಸುಬ್ಬಮ್ಮನನ್ನು ಮೂರನೆಯ ಹೆಂಡತಿಯಾಗಿ ತಂದರು. ಅಸೂಯೆ, ದಾರ್ಷ್ಟ್ಯ ಮತ್ತು ಮುಂಗೋಪದಿಂದ ಇಡೀ ಮನೆತನವನ್ನೇ ಒಡೆದು ಛಿದ್ರಮಾಡಿ ಬಿಡುವ ಚಂದ್ರಯ್ಯಗೌಡರು ಇಡೀ ಕಾನೂರು ಮನೆತನದ ಅಲ್ಲೋಲ ಕಲ್ಲೋಲಗಳಿಗೆ ಅವರೇ ನೇರವಾಗಿ ಕಾರಣರಾಗುತ್ತಾರೆ. ಮದ್ಯವ್ಯಸನಿಯೂ, ಕ್ರೂರಿಯೂ, ವಿಷಯಲಂಪಟನೂ ಅದ ಚಂದ್ರಯ್ಯಗೌಡ ಅಂತಿಮವಾಗಿ ಹೂವಯ್ಯನ ಪ್ರಭಾವಕ್ಕೆ ಸಿಲುಕಿ ಪಶ್ಚಾತ್ತಾಪ ಪಡುತ್ತಾನೆ.
- **ಸುಬ್ಬಮ್ಮ :** ನೆಲ್ಲುಹಳ್ಳಿ ಪೆದ್ದೇಗೌಡರ ಮಗಳು 'ಸುಬ್ಬಿ' ಚಂದ್ರಯ್ಯಗೌಡರ ಕೈಹಿಡಿದು ಕಾನೂರು ಸುಬ್ಬಮ್ಮ ಹೆಗ್ಗಡಿತಿಯಾದಳು. ಬಡ ಕುಟುಂಬದಿಂದ ಮೂರನೆಯ ಹೆಂಡತಿಯಾಗಿ ಬಂದ ಕಿರಿಯ ವಯಸ್ಸಿನ ಸುಬ್ಬಮ್ಮ ಹೊಸ ಬಗೆಯ ಬದುಕಿಗೆ ಹೊಂದಿಕೊಳ್ಳಲಾಗದೆ ಕಾದಂಬರಿಯುದ್ದಕ್ಕೂ ಚಡಪಡಿಸುತ್ತಾಳೆ. ಒಂದು ಬಗೆಯ ಕೀಳರಿಮೆ; ತನ್ನ ತವರು ಮನೆಗಿಂತಲೂ ಉತ್ತಮ ಸ್ಥಿತಿಯ ಮನೆಗೆ ಬಂದರೂ ಹೊಂದಿಕೊಳ್ಳಲಾಗದ ಚಡಪಡಿಕೆ; ಈಡೇರಲಾರದ ಆಸೆಗಳು; ವಯಸ್ಸಾದ ಗಂಡನ ಸಂಶಯದಿಂದ ತೊಳಲಾಡುವ ಸುಬ್ಬಮ್ಮ ಕೊನೆಗೆ ಸೇರೆಗಾರ ರಂಗಪ್ಪಶೆಟ್ಟಿಯ ಲೈಂಗಿಕ ವಾಂಛೆಗೆ ಬಲಿಯಾಗುತ್ತಾಳೆ. ಕಡೆಗೆ ತನ್ನ ತಪ್ಪಿನ ಅರಿವಾಗಿ, ಸರಿಪಡಿಸಿಕೊಳ್ಳಲಾಗದ ಹಂತ ಮುಟ್ಟಿದ ಸುಬ್ಬಮ್ಮ ಅಂತಿಮವಾಗಿ ದಾರುಣವಾಗಿ ಅಸುನೀಗುತ್ತಾಳೆ.
- **ಸೇರೆಗಾರ ರಂಗಪ್ಪಸೆಟ್ಟಿ :** ಗಟ್ಟದ ಕೆಳಗಿನ ರಂಗಪ್ಪಸೆಟ್ಟಿ ಚಂದ್ರಯ್ಯಗೌಡರ ಸೇರೆಗಾರ. ಕೂಲಿಯಾಳುಗಳನ್ನು ಗಟ್ಟದ ಮೇಲಕ್ಕೆ ತಂದು ಚಂದ್ರಯ್ಯಗೌಡರಲ್ಲಿ ಸೇರೆಗಾರರಾಗಿ ಕೆಲಸ ಮಾಡಿಸುವವರು. ತಾವು ತಂದ ಹೆಣ್ಣಾಳು ಗಂಗೆಯೊಡನೆ ಸಂಬಂಧವಿಟ್ಟುಕೊಂಡವರು. ಚಂದ್ರಯ್ಯಗೌಡರು ಗಂಗೆಯೊಡನೆ ಕೂಡುವಂತೆ ಜಾಲ ಹೆಣೆದವರು. ಸುಬ್ಬಮ್ಮನ ಮೇಲೆ ಮೋಹಗೊಳ್ಳುವ ಅವರು ನಾನಾ ವಿಧಗಳಿಂದ ಕೊನೆಗೂ ಆಕೆಯನ್ನು ಒಲಿಸಿಕೊಳ್ಳುತ್ತಾರೆ. ಹೂವಯ್ಯನ ವಿರುದ್ಧ ಚಾಡಿ ಹೇಳಿ ಚಂದ್ರಯ್ಯಗೌಡರ ಮನಸ್ಸು ದ್ವೇಷಕ್ಕೆ ತಿರುಗುವಂತೆ

ಮಾಡುವವರಲ್ಲಿ ಅವರೂ ಒಬ್ಬರು. ಸುಬ್ಬಮ್ಮನ ಕಳ್ಳ ಬಸುರಿಗೆ ಅವರೇ ಕಾರಣವಾಗಿ ಆಕೆಯ ಒಡವೆಗಳನ್ನೆಲ್ಲ ದೋಚಿ ಗಂಗೆಯೊಡನೆ ಗಟ್ಟದ ಕೆಳಕ್ಕೆ ರಾತ್ರೋರಾತ್ರಿ ಪರಾರಿಯಾಗುತ್ತಾರೆ. ಸುಬ್ಬಮ್ಮ ಹಾಗೂ ಕಾನೂರು ಮನೆತನದ ದುರಂತಕ್ಕೆ ಸೇರೆಗಾರ ರಂಗಪ್ಪಸೆಟ್ಟಿಯ ಪಾಲು ಹೆಚ್ಚಿನದು.

❒ **ಬೈರ :** ಚಂದ್ರಯ್ಯಗೌಡರ ಜೀತದಾಳು. ಬೇಲರವನು ತನ್ನ ವಂಶದ ಕುಲಕಸುಬು ಅಲ್ಲದಿದ್ದರೂ ಕದ್ದು ಬಗನಿಯನ್ನು ಕಟ್ಟುವುದರಲ್ಲಿ ಹೊಂಡ ತೋಣಕಿ ಮೀನು, ಏಡಿಗಳನ್ನು ಹಿಡಿಯುವುದರಲ್ಲಿ ನಿಷ್ಣಾತ. ಬಗನಿ ಮರಕ್ಕೆ ಮಾರ್ಕ್ ಹಾಕಲು ಬಂದವನಿಗೆ ಸಿಕ್ಕಿ ಬೀಳುವ ಬೈರ ಆತನಿಗೆ ಪಂಗನಾಮ ಹಾಕುವ ಘಟನೆ ಕಾದಂಬರಿಯಲ್ಲಿ ಅತ್ಯಂತ ಸ್ವಾರಸ್ಯಕರವಾಗಿ ಮೂಡಿದೆ.

❒ **ಗಂಗ :** ಬೈರನ ಮಗ. ಬೈರನ ಹೊಂಡ ತೋಣಕುವ ಕಾಯಕದಲ್ಲಿ ಮಗ ಜೊತೆಗಾರ. ಜೊತೆಗೆ ತನ್ನ ತಂದೆಯ ಕಣ್ತಪ್ಪಿಸಿ ಕಳ್ಳಂಗಡಿಯಲ್ಲಿ ಸ್ವತಂತ್ರವಾಗಿ ಸಾಲ ಮಾಡುವಷ್ಟು ಚಾಣಾಕ್ಷ. ಕಾನೂರು ಮನೆತನ ಪಾಲಾಗುವ ಮುನ್ನ ನಿಂಗನು ಹೂತಿದ್ದ ಹತಾರುಗಳನ್ನು ಕಳ್ಳಂಗಡಿಯ ಚಿಕ್ಕಣ್ಣನಿಗೆ ತೋರಿಸಿಕೊಟ್ಟ ಪಾಪಪ್ರಜ್ಞೆಯಿಂದ ಗಂಗುಡುಗ ಸಾವನ್ನಪ್ಪುತ್ತಾನೆ.

❒ **ಸೇಸಿ :** ಭೈರನ ಹೆಂಡತಿ. ಗಂಗನ ತಾಯಿ.

❒ **ನಾಗಮ್ಮ :** ಕಾನೂರು ಸುಬ್ಬಯ್ಯಗೌಡರ ಹೆಂಡತಿ. ಹೂವಯ್ಯನ ತಾಯಿ. ಮಗನಿಗಾಗಿ ಜೀವ ಹಿಡಿದುಕೊಂಡು ಬದುಕಿದ ನಾಗಮ್ಮ ಚಂದ್ಯಯ್ಯಗೌಡರ ಮಕ್ಕಳಾದ ರಾಮಯ್ಯ, ವಾಸು, ಪುಟ್ಟಮ್ಮನವರ ಬಗ್ಗೆ ವಿಶೇಷ ಮಮತೆ. ಚಂದ್ರಯ್ಯಗೌಡರ ಕುಟಿಲೋಪಾಯಗಳನ್ನು ಬಲ್ಲ ಆಕೆಗೆ ಚಂದ್ರಯ್ಯಗೌಡರಿಂದ ಮಗನಿಗೆ ಕಿರುಕುಳ ತಪ್ಪದು ಎಂಬ ಆತಂಕ. ಮಗ ಮದುವೆಯಾಗದೆ ಉಳಿದ ದುಃಖವೊಂದು ಕಡೆ. ಮಗ ಹೂವಯ್ಯ ಮದುವೆಯಾಗುವಂತೆ ಆತನಿಂದ ಭಾಷೆ ಪಡೆದೇ ಆಕೆ ಅಸುನೀಗುತ್ತಾಳೆ.

❒ **ವಾಸು :** ಚಂದ್ಯಯ್ಯಗೌಡರ ಎರಡನೆಯ ಹೆಂಡತಿಯ ಮಗ. ಸುಬ್ಬಮ್ಮನ ವಿರುದ್ಧ ಕೋಪದಿಂದ ಕುದಿಯುವ ವಾಸು ಒಂದು ಬಗೆಯ ನಿಸರ್ಗ ಆರಾಧಕ. ಗಾಡಿಯಾಳು ನಿಂಗನ ಮಗ ಪುಟ್ಟ, ಬೇಲರ ಬೈರನ ಮಗ ಗಂಗನೊಡನೆ ಕಾಡು ತಿರುಗುವ ಹವ್ಯಾಸ. ಹೂವಯ್ಯನ ಬಗ್ಗೆ ಪ್ರೀತಿ. ಮನೆ ಪಾಲಾಗುವಾಗ ವಾಸು ವಿಚಿತ್ರವಾಗಿ ಮೂರ್ಛೆ ಹೋಗುತ್ತಾನೆ. ಮುಂದೆ ಮುತ್ತಳ್ಳಿ ಶ್ಯಾಮೇಗೌಡರ ಎರಡನೆಯ ಮಗಳು ಲಕ್ಷ್ಮಿಯನ್ನು ಮದುವೆಯಾಗಿ ವಾಸಪ್ಪ ಗೌಡನೆನಿಸುತ್ತಾನೆ.

- **ಪುಟ್ಟಮ್ಮ :** ಚಂದ್ಯಯ್ಯಗೌಡರ ಎರಡನೇ ಹೆಂಡತಿಯ ಮಗಳು. ವಾಸುವಿನ ಅಕ್ಕ. ಮುತ್ತಳ್ಳಿ ಶ್ಯಾಮೇಗೌಡರ ಮಗ ಚಿನ್ನಯ್ಯನು ಈಕೆಯನ್ನು ಮದುವೆಯಾಗುತ್ತಾನೆ. ಅವಳಿಗೆ ರಮೇಶ, ಲಲಿತೆ ಮತ್ತು ಮಾಧು ಎಂಬ ಮೂವರು ಮಕ್ಕಳು.

- **ಪುಟ್ಟ :** ಚಂದ್ರಯ್ಯಗೌಡರ ಗಾಡಿಯಾಳು, ನಿಂಗನ ಮಗ. ಕಾನೂರಿನ ಮನೆಯಲ್ಲಿ ವಾಸುವಿನ ಜೊತೆಗಾರ. ಚಂದ್ಯಯ್ಯಗೌಡರ ಜೊತೆ ಧರ್ಮಸ್ಥಳಕ್ಕೆ ಹೋಗಿ ಹಿಂದಕ್ಕೆ ಬರುವಾಗ ಈತನ ತಂದೆ ನಿಂಗ ಕಾಯಿಲೆಯಿಂದ ಅಸು ನೀಗುತ್ತಾನೆ. ಆಮೇಲೆ ಪುಟ್ಟ ಓಬಯ್ಯನ ಪ್ರೀತಿಯಲ್ಲಿ ಬೆಳೆಯುತ್ತಾನೆ. ಸೀತೆಗೆ ಚಂದ್ರಯ್ಯಗೌಡರು ದೆವ್ವ ಬಿಡಿಸಲು ಶಿಕ್ಷೆ ವಿಧಿಸಿದಾಗ ಪುಟ್ಟ ಅವಳು ಕೆಳಕಾನೂರಿನ ಹೂವಯ್ಯನ ಮನೆಗೆ ಹೋಗಲು ನೆರವು ನೀಡುತ್ತಾನೆ. ಹಾಗೆಯೇ ಸುಬ್ಬಮ್ಮನಿಗೆ ಗಂಗೆಯ ಕಣ್ತಪ್ಪಿಸಿ ತನ್ನ ಒಡವೆಗಳನ್ನು ಸಾಗಿಸಲು ಪುಟ್ಟನೇ ನೆರವು ನೀಡುತ್ತಾನೆ. ಪುಟ್ಟನ ಕೃತ್ಯಕ್ಕೆ ಸೇರೆಗಾರರು ಅವನನ್ನು ಮೂರ್ಛೆ ಬರುವಂತೆ ಹೊಡೆದು ಸತ್ತನೆಂದು ಭಾವಿಸಿ ಹೂಳಲು ಸಂಚುಮಾಡುತ್ತಿರುವಾಗಲೇ ಹೂವಯ್ಯನಿಂದ ಬದುಕುಳಿಯುತ್ತಾನೆ. ಸೀತೆಯ ಪ್ರಯತ್ನದಿಂದ ಮುಂದೆ ಅಕ್ಷರಸ್ಥನಾಗಿ ಕೆಳಕಾನೂರಿನ ಒಕ್ಕಲಾಗಿ 'ಸಣ್ಣ ಪುಟ್ಟಣ್ಣ'ನಾಗಿ ಬೆಳೆಯುತ್ತಾನೆ.

- **ಅಣ್ಣಯ್ಯಗೌಡ :** ಚಂದ್ರಯ್ಯಗೌಡರ ಗದ್ದೆ ತೋಟಗಳನ್ನು ಗಡಿ, ಗುತ್ತಿಗೆಗೆ ಮಾಡಿಕೊಂಡು ಕೆಳಕಾನೂರಿನಲ್ಲಿ ಒಕ್ಕಲಾಗಿದ್ದವರು. ಅವರ ಮೂವರು ಹೆಂಡತಿಯರು ಸತ್ತಿದ್ದು ನಾಲ್ಕನೆಯ ಹೆಂಡತಿ ರೋಗಿಷ್ಠೆಯಾಗಿದ್ದಳು. ದ್ವಿತೀಯ ಪತ್ನಿಯಲ್ಲಿ ಹುಟ್ಟಿದವನೇ ಓಬಯ್ಯ. ಮೂರನೆಯ ಹೆಂಡತಿಗೂ ಹುಟ್ಟಿದ ಒಬ್ಬಳು ವಯಸ್ಸಿನ ಮಗಳಿದ್ದಳು. ಹೆಣ್ಣುಗಳಿಗೆ ತೆರವನ್ನು ತೆರಲು ಸಾಲ ಮಾಡಿ ಸುಸ್ತಾಗಿದ್ದರು. ಮಗನಿಗೆ ಲಗ್ನ ಮಾಡಲು ಚಂದ್ರಯ್ಯಗೌಡರು ಸಾಲ ಕೊಡಲು ನಿರಾಕರಿಸಿದಾಗ ತನ್ನ ಮಗನ ನಿಂದನೆಗೆ ಗುರಿಯಾಗುತ್ತಾನೆ. ಮಗನ ಮಾತನ್ನನುಸರಿಸಿ ಕೆಳಕಾನೂರಿನಿಂದ ಸಿಂಗಪ್ಪಗೌಡರಲ್ಲಿ ಒಕ್ಕಲಾಗಿ ಹೋಗಲು ಕೆಳಕಾನೂರಿನಿಂದ ಹೊರಡುವಾಗ ಚಂದ್ರೇಗೌಡರಿಗೆ ಸಿಕ್ಕಿಹಾಕಿಕೊಳ್ಳುವ ಅಣ್ಣಾಯ್ಯಗೌಡರು ಕೊನೆಗೆ ದೇಶಾಂತರ ಹೋಗುತ್ತಾರೆ. ಪತ್ನಿ, ಮಗಳನ್ನು ಕಳೆದುಕೊಂಡು ಕೊನೆಗೆ ಅಪರಿಚಿತ ನಾಡಿನಲ್ಲಿ ಅಸುನೀಗುತ್ತಾರೆ. ಮಲೆನಾಡಿನಲ್ಲಿ ಮದುವೆಯ ಬಗ್ಗೆ ಒಂದು ಶಿಸ್ತುಬದ್ಧ ಜೀವನ ನಡೆಸದೆ, ತೆರಕ್ಕಾಗಿ ಸಾಲ ಮಾಡಿ ಸಂಸಾರದ ಶೂಲದಲ್ಲಿ ಸಿಕ್ಕಿ ಒದ್ದಾಡುವವವರ ಮಾದರಿಯಂತೆ ಅಣ್ಣಾಯ್ಯಗೌಡರ ಕುಟುಂಬ ಬಿಂಬಿತವಾಗಿದೆ.

- **ಓಬಯ್ಯಗೌಡ :** ಕೆಳಕಾನೂರು ಅಣ್ಣಯ್ಯಗೌಡರ ಮಗ. ಸಾಕಷ್ಟು ಸ್ಥಿತಿವಂತರಾಗಿದ್ದ ಅಣ್ಣಾಯ್ಯಗೌಡ ಅಧಿಕ ತೆರಕೊಟ್ಟು ಮದುವೆ ಮಾಡಿಕೊಳ್ಳುತ್ತಿದ್ದುದನ್ನು ಕಂಡು ಕೋಪಗೊಂಡ ಈ

ಯುವಕ ಕ್ರಮೇಣ ಎಲ್ಲ ದುಶ್ಚಟಗಳಿಗೆ ಬಲಿಯಾಗುತ್ತಾನೆ. ಗಂಗೆಯ ಸಹವಾಸದಿಂದ ವ್ಯಭಿಚಾರಿಯಾದ ಓಬಯ್ಯ ದುಡ್ಡಿಗಾಗಿ ಕಳ್ಳತನ ಮಾಡುತ್ತಾನೆ. ಚಂದ್ರಮೌಳೇಶ್ವರ ಸ್ವಾಮಿಯ ಗುಡಿಯ ಬಳಿಯ ಹೊಳೆಯಲ್ಲಿದ್ದ ದೇವರ ಮೀನನ್ನು ಕದ್ದು ಮಾರಿ ಕಳ್ಳು ಕುಡಿಯುತ್ತಾನೆ. ತಂಗಿಯ ಕೈಯಲ್ಲಿದ್ದ ಕಡಗವನ್ನು ಸಂಚಿನಿಂದ ಅಪಹರಿಸುತ್ತಾನೆ. ಯಾವುದೋ ದೂರದ ಸಂಬಂಧ ಹಿಡಿದು ಸುಬ್ಬಮ್ಮನ ಮನಗೆದ್ದು ನೂರು ರೂಪಾಯಿ ನೋಟು ಸಾಲ ಪಡೆದ ಓಬಯ್ಯ ಮುಂದೆ ಅನೇಕ ಅವಾಂತರಗಳಿಗೆ ಕಾರಣನಾಗುತ್ತಾನೆ. ತಾವು ಕಡಿಸಿದ್ದ ಕಳ್ಳನಾಟಾವನ್ನು ಚಂದ್ರಯ್ಯಗೌಡರು ಸಾಗಿಸುವ ಸಂಚನ್ನು ಸಿಂಗಪ್ಪಗೌಡರಿಗೆ ತಿಳಿಸುತ್ತಾನೆ. ಸುಬ್ಬಮ್ಮನಿಂದ ಪಡೆದ ನೋಟು ಹಗರಣವಾಗಿ ಚಂದ್ರಯ್ಯಗೌಡರಿಂದ ಹೊಡೆತ ತಿಂದು ಕೆಳಕಾನೂರು ಬಿಟ್ಟು ಸೀತೆಮನೆಗೆ ಸ್ಥಳಾಂತರವಾಗುವ ನಿರ್ಧಾರ ತೆಗೆದುಕೊಳ್ಳುತ್ತಾನೆ. ಚಂದ್ರಯ್ಯಗೌಡರಿಗೆ ಸಿಕ್ಕಿಕೊಂಡು ಸರ್ವಸ್ವವನ್ನು ಕಳೆದುಕೊಂಡು ಊರು ಬಿಡುತ್ತಾನೆ. ಸೀತೆಮನೆಗೆ ಹೋಗದೆ ಮುದಿ ತಂದೆ ಹಾಗೂ ಮಲತಂಗಿಯ ಜೊತೆ ಸ್ವಲ್ಪಕಾಲ ಮೇಗರಹಳ್ಳಿಯಲ್ಲಿದ್ದಾಗ ಮಲತಂಗಿ ಸಾಯುತ್ತಾಳೆ. ಅನಂತರ ತಂದೆ - ಮಗ ಆಗುಂಬೆಯಲ್ಲಿ ಕೆಲಸಕ್ಕೆ ಸೇರಿಕೊಂಡಾಗ ಮೈಲಿ ಬೇನೆಯಿಂದ ತಂದೆ ಸಾಯುತ್ತಾನೆ. ಮೈಲಿ ಬೇನೆಯಿಂದ ವಿಕಾರವಾದ ಓಬಯ್ಯ ಕೊನೆಗೆ ಚಂದ್ರಯ್ಯಗೌಡರಿಗೆ ಸಿಕ್ಕು ಕಾನೂರಿಗೆ ಹಿಂತಿರುಗಿ ನಂತರ ಹೂವಯ್ಯನ ಬಳಿ ಕೆಲಸಕ್ಕೆ ನಿಂತು ಸಂಯಮದ ಬದುಕು ಸಾಗಿಸುತ್ತಾನೆ. ಭೋರ್ಗರೆವ ನದಿಯೊಂದು ದಿಕ್ಕುದೆಸೆಯಿಲ್ಲದೆ ಹರಿದು ಕೊನೆಗೆ ಸಾಗರದೊಡನೆ ಸಂಗಮಿಸುವಂತೆ ಓಬಣ್ಣ ತನ್ನ ಕಟ್ಟು ಹರಿದ ಪಂಜಿನಂಥ ಬದುಕಿನ ಸಾರ್ಥಕವನ್ನು ಹೂವಯ್ಯನ ಸಾನಿಧ್ಯದಲ್ಲಿ ಪಡೆಯುತ್ತಾನೆ.

❒ **ವೆಂಕಪ್ಪ ಜೋಯಿಸ :** ತುಂಗಾತೀರದ ಅಗ್ರಹಾರದ ಜೋಯಿಸರು. ಮಲೆನಾಡಿನ ಜನರ ಮೌಢ್ಯವೇ ಇವರ ಬದುಕಿಗೆ ಬಂಡವಾಳ. ಅವರ ಮುಖ್ಯ ಕಸುಬು ದೇವಸ್ಥಾನದ ಪೂಜೆಯಾದರೂ ಹಲವಾರು ಕಸುಬುಗಳನ್ನು ಬಲ್ಲವರು. ಮುಖ್ಯವಾಗಿ ಮೌಢ್ಯವನ್ನು ಹೆಚ್ಚಿಸುವಂಥ ನಿಮಿತ್ತ ನೋಡುವುದು, ಭವಿಷ್ಯತ್ತು ಹೇಳುವುದು, ಜಾತಕ ಬರೆಯುವುದು, ಭೂತಗಳಿಗೆ ಹಣ್ಣುಕಾಯಿ ಕೊಡುವುದು, ಮಂತ್ರದಿಂದ ದೆವ್ವ ಭೂತ ಬಿಡಿಸುವುದು, ಹಿಡಿಸುವುದು ಇತ್ಯಾದಿ. ತನ್ನ ತಂದೆ ಸುಬ್ಬಯ್ಯಗೌಡರು ಶ್ಲೇಷ್ಮ ಜ್ವರದಿಂದ ನರಳುತ್ತಿದ್ದಾಗ ತಣ್ಣೀರು ಮುಟ್ಟಿಸಿ ಪೂಜೆ ಮಾಡಿಸಿ ವಿಷಮಗೊಂಡಿದ್ದರಿಂದಲೇ ಅವರು ಸತ್ತರೆಂದು ಹೂವಯ್ಯನಿಗೆ ಜೋಯಿಸರ ಬಗ್ಗೆ ತಿರಸ್ಕಾರ. ಓದಿ ಬಂದ ಹೂವಯ್ಯ ತನ್ನ ವ್ಯವಹಾರಗಳಿಗೆ ಅಡ್ಡಗಾಲು ಹಾಕುವುದನ್ನು ಇಷ್ಟಪಡದ ಜೋಯಿಸರು

ಚಂದ್ರಯ್ಯಗೌಡನನ್ನು ಅವನ ವಿರುದ್ಧ ಎತ್ತಿಕಟ್ಟುತ್ತಾರೆ. ಸೀತೆಯನ್ನು ಹೂವಯ್ಯನಿಗೆ ಕೊಡುವುದನ್ನು ತಪ್ಪಿಸುವಲ್ಲಿ ಸಹಕಾರ ನೀಡುವ ಅವರು ರಾಮಯ್ಯನ ಜೊತೆ ಮದುವೆ ಮಾಡುವಾಗ ವಿಫ್ವಲನಾದ ಆತನು ತಾಳಿ ಕಟ್ಟಲು ಹಿಂದೆ ಮುಂದೆ ನೋಡಿದಾಗ ತಾವೇ ಕಟ್ಟಿ ಮದುವೆ ಶಾಸ್ತ್ರ ಮುಗಿಸುತ್ತಾರೆ. ಸೀತೆಗೆ ದೆವ್ವ ಬಿಡಿಸಲು ನಾನಾ ವಿಧವಾದ ಕ್ರೂರ ತಂತ್ರಗಳನ್ನೂ ಇವರು ಬಳಸುತ್ತಾರೆ. ಜನರ ಮೌಢ್ಯವನ್ನು ವೃದ್ಧಿಸಿ ಅದನ್ನು ತಮ್ಮ ಉಪಯೋಗಕ್ಕೆ ಬಳಸಿಕೊಳ್ಳುವ ನಿಷ್ಣಾಣಿ ವೆಂಕಪ್ಪ ಜೋಯಿಸರಲ್ಲಿ ಕಾಣಬಹುದು.

- **ಹಳೆ ಪೈಕದ ತಿಮ್ಮ :** ಚಂದ್ರಯ್ಯಗೌಡರ ಒಕ್ಕಲಾದ ಹಳೆಪೈಕದ ತಿಮ್ಮ ಬಗನಿಕಟ್ಟಿ ಕಳ್ಳು ಇಳಿಸುವ ಕುಲಕುಸುಬಿನಲ್ಲಿ ನಿಷ್ಣಾತ. ಚಂದ್ರಯ್ಯಗೌಡರಿಗೆ ಬಗನಿ ಸರಬರಾಜು ಮಾಡುತ್ತಾ ಅವರ ವಿಶ್ವಾಸ ಸಂಪಾದಿಸಿದ್ದ. ಕಾನೂರಿನ ಕಾನುಬೈಲಿನ ಕಳ್ಳುಗೊತ್ತಿನಲ್ಲಿ ಕಳ್ಳುಕಾಯಿಸುವುದು ಅವನ ಕಾಯಕ. ಮುಂದೆ ಹೂವಯ್ಯನ ಪ್ರಭಾವದಿಂದಾಗಿ ಕಳ್ಳುಕಾಯಿಸುತ್ತಿದ್ದ ಎತ್ತರವಾದ ಕಾನುಬೈಲಿನಲ್ಲಿ ಒಂದು ಸುಂದರ ಮಂದಿರವನ್ನು ನಿರ್ಮಿಸಿ ಕರ್ಮಯೋಗಿಯಾಗಿ ವಾಸಿಸುತ್ತಾನೆ.
- **ಕಾಳ :** ಶ್ಯಾಮೇಗೌಡರ ಮನೆಯ ಆಳು. ಸೀತೆಯನ್ನು ಸಿಂಗಪ್ಪಗೌಡರ ಮಗ ಕೃಷ್ಣಪ್ಪನಿಗೆ ತಂದುಕೊಳ್ಳುವ ಬಗ್ಗೆ ಆಗುತ್ತಿದ್ದ ಮಾತುಕತೆಯನ್ನು ಮೊದಲು ಸೀತೆಗೆ ಹೇಳಿದವನು.
- **ಸಿದ್ಧ :** ಚಂದ್ರಯ್ಯಗೌಡರ ಮನೆಯ ಆಳು. ಬೇಲರವನು. ರಾಮಯ್ಯ - ಹೂವಯ್ಯರು ನೇಗಿಲು ಹಿಡಿದು ಹೊಲಹೂಳಲು ಬೈರ ಸಿದ್ಧರ ನೇಗಿಲು - ಎತ್ತುಗಳನ್ನ ಹಿಡಿದುಕೊಳ್ಳುತ್ತಾರೆ. ಹೂವಯ್ಯನ ಎತ್ತಿಗೆ ಗಾಯವಾಗಿ, ರಾಮಯ್ಯ ಹಿಡಿದ ನೇಗಿಲು ಮುರಿದಾಗ ಸಿದ್ಧ ಗಾಬರಿಯಾಗುತ್ತಾನೆ. ಕಾನೂರು ದುರಂತಕ್ಕೆ ಈ ಘಟನೆ ಮುನ್ನುಡಿಯಂತಿರುತ್ತದೆ. ಕಿಲಿಸ್ತರ ಮಾರ್ಕನಿಗೆ ಪಂಗನಾಮ ಹಾಕಲು ಬೈರನ ತಲೇ ಗಡ್ಡ ಮೀಸೆಯನ್ನು ಸಿದ್ಧ ನುಣ್ಣಗೆ ಬೋಳಿಸುವವನೇ ಸಿದ್ಧ.
- **ಸೋಮ (ಸೋಮಯ್ಯಸೆಟ್ಟಿ):** ಡೊಳ್ಳು ಹೊಟ್ಟೆಯ ಸೋಮ ಗಟ್ಟದ ಕೆಳಗಿನ ಆಳು. ಚಂದ್ರಯ್ಯಗೌಡರ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಸೋಮನಿಗೆ ಮಾಂಸ (ಬಾಡು) ಎಂದರೆ ಪ್ರಾಣ. ಅದಕ್ಕಾಗಿ ಏನನ್ನೂ ಮಾಡಬಲ್ಲ ಸಾಹಸಿ. ಮಾಂಸದಲ್ಲಿದ್ದ ಅತಿಯಾಸೆಯನ್ನು ಅಡಗಿಸಿಕೊಳ್ಳುವಷ್ಟು ಸಂಯಮವಿರದಿದ್ದುದರಿಂದ ಅನೇಕ ಹಾಸ್ಯ ಪ್ರಸಂಗಗಳಿಗೆ ಈತ ತುತ್ತಾಗುತ್ತಾನೆ. ಕಳ್ಳಂಗಡಿಯವನ ಸಾಲ ತೀರಿಸಲು ಹಳೆಪೈಕದ ತಿಮ್ಮನ ಹುಂಜವನ್ನು ಕದ್ದು ಸಿಕ್ಕಿಹಾಕಿಕೊಳ್ಳುತ್ತಾನೆ. ಚಂದ್ರಯ್ಯಗೌಡರಲ್ಲಿ ಆಳಾಗಿ ಉಳಿಯುವ ಆತ ಹೂವಯ್ಯ ಸಾಕಿದ್ದ ಹೋತ 'ಬಲೀಂದ್ರ'ನನ್ನು ಕದಿಯಲು ಹೋಗಿ ಗೊಬ್ಬರದ ಗುಂಡಿಯಲ್ಲಿ

ಬೀಳುತ್ತಾನೆ. ಕೊನೆಗೆ ಹೂವಯ್ಯನಲ್ಲಿ ಆಳಾಗಿ ಬಂದು ನಿಂತು ಸೋಮಯ್ಯ ಸೆಟ್ಟಿಯಾಗಿ ನಾಗರಿಕತೆಯೆಡೆಗೆ ಮುಂದುವರಿಯುತ್ತಾನೆ.

- **ಕೃಷ್ಣಪ್ಪ :** ಸೀತೆಮನೆ ಸಿಂಗಪ್ಪಗೌಡರ ಮಗ. ಮುತ್ತಳ್ಳಿಯ ಸೀತೆಯ ಜೊತೆ ಲಗ್ನ ನಿಷ್ಕರ್ಷೆಯಾದಾಗ ಉಲ್ಲಸಿತನಾಗುವ ಕೃಷ್ಣಪ್ಪ ಕೆಳಕಾನೂರು ಅಣ್ಣಯ್ಯಗೌಡರ ಸಂಸಾರವನ್ನು ಸೀತೆಮನೆಗೆ ಸ್ಥಳಾಂತರಿಸಲು ವಿಫಲನಾಗುತ್ತಾನೆ. ಅಪ್ಪನ ಭರ್ತ್ಸನೆಯಿಂದ ನೊಂದು, ಕಟ್ಟಿದ್ದ ಕೋವಿಗೆ ಬಿದ್ದ ಹುಲಿಯನ್ನು ನೋಡಲು ಹೋಗುತ್ತಾನೆ. ಮರಿ ಹುಲಿಯ ಸಹವಾಸ ಬೇಡವೆಂದು ಜಾಕಿ ಹೇಳಿದರೂ, ತಂದೆಗೆ ತನ್ನ ಪೌರುಷವನ್ನು ತೋರಲು ಗಾಯಗೊಂಡ ಹುಲಿಯನ್ನು ಶಿಕಾರಿ ಮಾಡಲು ಹೋಗುತ್ತಾನೆ. ಕೊನೆಗೆ ಈತನೇ ಹುಲಿಗೆ ಬಲಿಯಾಗಿ ದಾರುಣವಾಗಿ ಸಾಯುತ್ತಾನೆ.
- **ಜಾಕಿ :** ಸೀತೆಮನೆ ಸಿಂಗಪ್ಪಗೌಡರ ಮನೆಯ ನಂಬಿಕಸ್ತ ಆಳು. ವಿವೇಚನೆ ಕಡಿಮೆ. ಬಲಿಷ್ಠನೂ, ಧೂರ್ತನೂ, ಪುಂಡನೂ ಆಗಿದ್ದ ಜಾಕಿಗೆ ಜಗಳ ಕಾಯುವುದು ತುಂಬಾ ಪ್ರಿಯವಾದ ಕೆಲಸ. ಮಹಾ ಕುಡುಕ, ಕಟುಕ. ಅವನ ಕೆಚ್ಚೆದೆಗೆ ಅಜ್ಞಾನ ಅಸಂಸ್ಕೃತಿಗಳೇ ಮೂಲಧಾರ. ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡಿದ್ದರೂ ಈತನ ರಾಕ್ಷಸೀಭಾವ ಕಡಿಮೆಯಾಗಿರಲಿಲ್ಲ. ಇದೇ ದುಡುಕು ಸ್ವಭಾವ ಪುಟ್ಟಣ್ಣನ ನಾಯಿ ಟೈಗರ್‌ನ ಸಾವಿಗೆ ಕಾರಣವಾಗುತ್ತದೆ. ಹುಲಿಯ ಶಿಕಾರಿಗೆ ಹೋದ ಕೃಷ್ಣಪ್ಪನ ಜೊತೆ ಅವನು ಹುಲಿಯ ಹೊಡೆತಕ್ಕೆ ಸಿಕ್ಕು ಚಿಕಿತ್ಸೆಗೂ ಬದುಕಲಾರದೆ ಸಾಯುತ್ತಾನೆ.
- **ಗಂಗೆ :** ಸೇರೆಗಾರ ರಂಗಪ್ಪಸೆಟ್ಟಿ ಘಟ್ಟದ ಕೆಳಗಿಂದ ತಂದ ಹೆಣ್ಣಾಳು. ಆಕೆ ರಂಗಪ್ಪ ಸೆಟ್ಟರ ಪ್ರೇಯಸಿ. ಓಬಯ್ಯಗೌಡನನ್ನೂ ಹಾದಿ ತಪ್ಪಿಸಿದವಳು. ಚಂದ್ರಯ್ಯಗೌಡನನ್ನೂ ವಶಮಾಡಿಕೊಂಡವಳು. ಸುಬ್ಬಮ್ಮನನ್ನು ಮದುವೆಯಾದ ನಂತರ ಚಂದ್ರಯ್ಯಗೌಡರು ತನ್ನನ್ನು ಕಡೆಗಣಿಸುತ್ತಿದ್ದಾರೆಂದು ಭಾವಿಸಿ ಸುಬ್ಬಮ್ಮನ ಮೇಲೆ ಅಸೂಯೆ ತಾಳುತ್ತಾಳೆ. ತನ್ನ ಪ್ರಿಯಕರನನ್ನು ಮದುವೆಯಾಗಲು ಆಗದೆ, ಮುದುಕನ ಕೈಹಿಡಿದ ಗಂಗೆ ನಂತರ ಗಂಡನಿಂದ ಪ್ರಿಯಕರ ಹತನಾದ ಮೇಲೆ ರಂಗಪ್ಪಸೆಟ್ಟರೊಡಗೂಡಿ ಕಾನೂರಿಗೆ ಬರುತ್ತಾಳೆ. ಮುಗ್ಧೆ ಸುಬ್ಬಮ್ಮನನ್ನು ಕೆಟ್ಟದಾರಿಗೆಳೆಯುತ್ತಾಳೆ. ಚಂದ್ರಯ್ಯಗೌಡರು ಸುಬ್ಬಮ್ಮನನ್ನು ಹೊರಕ್ಕೆ ಅಟ್ಟಿದಾಗ, ಗಂಗೆ ಚಂದ್ರಯ್ಯಗೌಡರ ಮನೆಯಲ್ಲೇ ನೆಲೆಸುತ್ತಾಳೆ. ಚಂದ್ರಯ್ಯಗೌಡರ ಸಾವಿನ ನಂತರ ಸಂಚು ಹೂಡಿ ಸುಬ್ಬಮ್ಮನ ಒಡವೆಗಳ ಜೊತೆ ಸೇರೆಗಾರರ ಜೊತೆ ಪರಾರಿಯಾಗುತ್ತಾಳೆ.
- **ಬಾಳೂರು ಸಿಂಗೇಗೌಡರು:** ಮಲೆನಾಡ ಒಕ್ಕಲಿಗ ಮುಖಂಡರಲ್ಲೊಬ್ಬರು. ಇವರು ಒಕ್ಕಲಿಗರಲ್ಲಿ ರೂಢಿಯಾಗಿದ್ದ ಮದ್ಯಪಾನವನ್ನು ತ್ಯಜಿಸಲು ವ್ಯವಸ್ಥೆಯಾಗಿದ್ದ ಸಭೆಯಲ್ಲಿ ಉಪನ್ಯಾಸ ಮಾಡಿದವರು.

ಆದರೆ ಅದಕ್ಕೆ ಸಂಬಂಧಿಸಿದ 'ಮಾನ ಪತ್ರಕ್ಕೆ' ರುಜು ಹಾಕಲು ನಿರಾಕರಿಸಿದವರು. ತಮಗೆ ಹೆಂಡ ಕಳ್ಳು ಬಿಡುವ ಬಗ್ಗೆ ನಂಬಿಕೆಯೂ ಇಲ್ಲ. ಇಷ್ಟವೂ ಇಲ್ಲವೆಂದು ಹಳೆಯ ರೂಢಿಗೆ ಅಂಟಿಕೊಂಡವರು.

- **ರಮೇಶ :** ಮುತ್ತಳ್ಳಿ ಚಿನ್ನಯ್ಯ ಮತ್ತು ಪುಟ್ಟಮ್ಮನ ಮಗ. ವೆಂಕಪ್ಪ ಜೋಯಿಸರು 'ಕರಿಯಣ್ಣ' ಎಂದು ಇಟ್ಟಿದ್ದ ಹೆಸರನ್ನು ತಿರಸ್ಕರಿಸಿ ಸೀತೆ ವೆಂಕಟಾಚಾರ್ಯರ ಕಾದಂಬರಿಯ ಪಾತ್ರದ 'ರಮೇಶ' ಎಂಬ ಹೆಸರನ್ನಿಡುತ್ತಾಳೆ.
- **ಶಂಕರಯ್ಯ :** ಸೀತೆಮನೆ ಸಿಂಗಪ್ಪಗೌಡರ ಮಗ.
- **ಲಲಿತೆ :** ಚಿನ್ನಯ್ಯ ಪುಟ್ಟಮ್ಮನ ಮಗಳು.
- **ಮಾಧು :** ಚಿನ್ನಯ್ಯ ಪುಟ್ಟಮ್ಮನ ಎರಡನೇ ಮಗ.

## ೨. ಮಲೆಗಳಲ್ಲಿ ಮದುಮಗಳು

### ಕಾದಂಬರಿಯ ಪಾತ್ರಪರಿಚಯ

- **ಗುತ್ತಿ :** ಸಿಂಬಾವಿ ಭರಮೈ ಹೆಗ್ಗಡೆಯ ಜೀತದಾಳು ಹೊಲೆಯರ ಗುತ್ತಿ ಬೆಟ್ಟಳ್ಳಿಯ ತಿಮ್ಮಿಯನ್ನು ಹಾರಿಸಿಕೊಂಡು ಬರಲು ಹೊರಡುವ ಯಾತ್ರೆಯಿಂದಲೇ ಕಾದಂಬರಿ ಆರಂಭವಾಗುತ್ತದೆ. ತನ್ನ ಪ್ರೇಯಸಿ ತಿಮ್ಮಿಯನ್ನು ಪಡೆಯುವ ಹೋರಾಟದಲ್ಲಿ ಆತ ಯಶಸ್ವಿಯಾಗುತ್ತಾನೆ. ಆತ ಹಲವು ಕುಟುಂಬಗಳ ಗುಟ್ಟುಗಳನ್ನು ಬಲ್ಲವನು. ಭರಮೈ ಹೆಗ್ಗಡೆಯವರು ಕೊಡುವ ಪತ್ರವನ್ನು ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರಿಗೆ ತಲುಪಿಸುವುದು ಆತನಿಗೊಂದು ನೆಪ. ಮುಂಗಾರಿನ ಮೊದಲ ಮಳೆಯಲ್ಲಿ ನೆನೆದು ಸೀತೂರ ಹಳ್ಳವನ್ನು ದಾಟಿ ಲಕ್ಕುಂದದಲ್ಲಿ ರಾತ್ರಿಯನ್ನು ಕಳೆದು, ಮೇಗರವಳ್ಳಿ, ಹುಲಿಕಲ್ಲು, ಕೋಣೂರು ಗದ್ದೆಯ ಮೂಲಕ ಹಳೆಮನೆಗೆ ಬಂದು, ಅಲ್ಲಿಂದ ಬೆಟ್ಟಳ್ಳಿಯ ಹಕ್ಕಲಿನಲ್ಲಿ ಪಾದ್ರಿ - ದೇವಯ್ಯರ 'ಬಿಸೇಕಲ್ಲು ಸವಾರಿ' ಪ್ರದರ್ಶನ ನೋಡಿ ಸಂಜೆಯ ಮಬ್ಬುಗತ್ತಲಿನಲ್ಲಿ ತಿಮ್ಮಿಯನ್ನು ಹಾರಿಸಿಕೊಂಡು ರಾತ್ರಿಯಲ್ಲಿ ಹುಲಿಕಲ್ಲು ನೆತ್ತಿಯನ್ನು ಸೇರುತ್ತಾನೆ. ಮಾರನೆಯ ಬೆಳಿಗ್ಗೆ ಸಿಂಬಾವಿಗೆ ಸೇರುವ ಮೂಲಕ ಗುತ್ತಿಯ ಮೊದಲಯಾತ್ರೆ ಕೊನೆಗೊಳ್ಳುತ್ತದೆ.

  ಸಾಬರೊಡನೆ ನಡೆವ ಹೊಡೆದಾಟದಿಂದಾಗಿ ಪೊಲೀಸಿನವರ ಅತಿಥಿಯಾಗುವ ಮೂಲಕ ಗುತ್ತಿಯ ಎರಡನೇ ಯಾತ್ರೆ ಆರಂಭವಾಗುತ್ತದೆ. ಪೊಲೀಸರಿಂದ ತಪ್ಪಿಸಿಕೊಂಡು ಕಾಗಿನಹಳ್ಳಿ ಸೇರುವ ಗುತ್ತಿ ಅಲ್ಲಿಂದ ದೊಡ್ಡಣ್ಣ ಹೆಗ್ಗಡೆಯ ಶವಸಂಸ್ಕಾರಕ್ಕೆ ಹಳೆಮನೆಯ ಸ್ಮಶಾನ ಸೇರಿ ಅಲ್ಲಿಂದ ಚಿನ್ನಯ್ಯ - ಮುಕುಂದಯ್ಯನವರು ಹುಲಿಕಲ್ಲು

ಸೇರಲು ನೆರವಾಗುತ್ತಾನೆ. ಬಳಿಕ ಪೊಲೀಸರಿಂದ ತಪ್ಪಿಸಿಕೊಳ್ಳಲು ತುಂಗಾನದಿಯ ಮೂಲಕ ಕಾನೂರಿಗೆ ಹೋಗುವುದರೊಂದಿಗೆ ಗುತ್ತಿಯ ಎರಡನೇ ಯಾತ್ರೆ ಕೊನೆಯಾಗುತ್ತದೆ.

ತನ್ನ ಎರಡು ಯಾತ್ರೆಗಳ ಕಥನದ ಮೂಲಕ ಇಡೀ ಕಾದಂಬರಿಯ ಭೌಗೋಳಿಕ ಹರಹನ್ನು ಮುಟ್ಟುವ ಗುತ್ತಿಯ ಮೂಲಕವೇ ಕಾದಂಬರಿಯ ಪ್ರಮುಖ ಪಾತ್ರಗಳು ಮತ್ತು ಸನ್ನಿವೇಶಗಳು ಅನಾವರಣಗೊಳ್ಳುತ್ತವೆ. ಹಾಗಾಗಿ ಗುತ್ತಿಯ ಎರಡೂ ಯಾತ್ರೆಗಳು ಇಡೀ ಕಾದಂಬರಿಯ ಕಾಲ - ದೇಶವನ್ನು ಆವರಿಸಿಕೊಳ್ಳುತ್ತವೆ. ಗುತ್ತಿ ಕಾದಂಬರಿಯ ಪ್ರಮುಖ ಸನ್ನಿವೇಶಗಳಿಗೆ ಸಾಕ್ಷಿಯೂ ಆಗುತ್ತಾನೆ. ಪರಿಣಾಮವಾಗಿ ಗುತ್ತಿಯ ಯಾತ್ರೆ ಇಡೀ ಕಾದಂಬರಿಯ ಕೇಂದ್ರದಂತೆ ಗೋಚರಿಸುತ್ತದೆ. ಕೊನೆಗೆ ಗುತ್ತಿ ದೇಶಾಂತರ ಹೊರಡುತ್ತಾನೆ. ಅವನ ನಾಯಿ ನೀರುಪಾಲಾಗುತ್ತದೆ.

❒ **ಭರಮೈಹೆಗ್ಗಡೆ :** ಸಿಂಬಾವಿಯ ಯಜಮಾನ. ತನ್ನ ಹೆಂಡತಿ ಜಟ್ಟಮ್ಮನಿಂದ ಮಕ್ಕಳಾಗಲಿಲ್ಲವೆಂದು ಹೂವಳ್ಳಿ ವೆಂಕಟಣ್ಣನ ಮಗಳು ಚಿನ್ನಮ್ಮನನ್ನು ಕೈಹಿಡಿಯಲು ಮಾಡುವ ಭರಮೈಹೆಗ್ಗಡೆಯ ಯತ್ನ ವಿಫಲವಾಗುತ್ತದೆ. ಬೆಟ್ಟಳ್ಳಿಯ ಕಲ್ಲಯ್ಯಗೌಡರ ಮೇಲಿನ ಹಗೆತನದಿಂದಾಗಿ ಗುತ್ತಿಯ ಸಾಹಸಕ್ಕೆ ಭರಮೈಹೆಗ್ಗಡೆಯ ಪರೋಕ್ಷ ಬೆಂಬಲವಿರುತ್ತದೆ. ಹಳೆಮನೆ ಸುಬ್ಬಣ್ಣ ಹೆಗ್ಗಡೆಯ ಮಗಳು ಮಂಜಮ್ಮನನ್ನು ಮದುವೆಯಾಗುತ್ತಾನೆ.

❒ **ಜಟ್ಟಮ್ಮ :** ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರ ದಾಯದಿ ಶಂಕರಪ್ಪ ಹೆಗ್ಗಡೆಯ ತಂಗಿ ಈಕೆ. ಭರಮೈ ಹೆಗ್ಗಡೆಯ ಪತ್ನಿ. ಹೂವಳ್ಳಿ ವೆಂಕಟಣ್ಣನ ಮಗಳು ಚಿನ್ನಮ್ಮನನ್ನು ಮಧ್ಯವಯಸ್ಸಿನ ತನ್ನ ಗಂಡ ಮದುವೆಯಾಗುವುದನ್ನು ವಿರೋಧಿಸುವ ಆಕೆ ಕೊನೆಯಲ್ಲಿ ತಂಗಿಯಾದ ಮಂಜಮನನ್ನೆ ಸವತಿಯಾಗಿ ಸ್ವೀಕರಿಸುತ್ತಾಳೆ.

❒ **ಲಕ್ಕಮ್ಮ :** ಸಿಂಬಾವಿ ಭರಮೈಹೆಗ್ಗಡೆಯ ತಂಗಿ. ಮಲೆನಾಡ ಜಮೀನುದಾರರ ಮನೆಯ ಹೆಣ್ಣುಮಕ್ಕಳಂತೆ ಆಯ್ಕೆ ಸ್ವಾತಂತ್ರ್ಯವಿಲ್ಲದ ಹೆಣ್ಣು. ಹಾಗೆಯೇ ತನ್ನ ಅತ್ತಿಗೆಯ ವಿರುದ್ಧ ಅವಕಾಶ ಸಿಕ್ಕಾಗಲೆಲ್ಲ ಜಗಳಕ್ಕೆ ಸಿದ್ಧವಾಗುವ ಲಕ್ಕಮ್ಮ ಕೊನೆಗೆ ಹಳೆಮನೆ ತಿಮ್ಮಪ್ಪ ಹೆಗ್ಗಡೆಯನ್ನೆ ಮದುವೆಯಾಗುತ್ತಾಳೆ.

❒ **ಸೇಸಾನಾಯ್ಕ :** ಲಕ್ಕುಂದದ ಹಳೇಪೈಕದ ಸೇಸಾನಾಯ್ಕ ಪ್ರಬಲ ಒಕ್ಕಲಿಗರ ವಿರುದ್ಧ ದನಿಯೆತ್ತಿ ತನ್ನ ಜಾತಿಯ ಸ್ಥಾನಮಾನವನ್ನು ರಕ್ಷಿಸಿಕೊಳ್ಳಲು ಸಿದ್ಧವಾಗಿರುವ ಸ್ವಾಭಿಮಾನಿ. ಒಕ್ಕಲಿಗ ಜಮೀನುದಾರರ ಆಳುಗಳೂ ಒಕ್ಕಲುಗಳೂ ಆಗಿದ್ದ ಹಳೇಪೈಕದವರಿಗೆ ಸ್ವಂತ ಜಮೀನು ಮಾಡುವುದು, ದಿಬ್ಬಣದಲ್ಲಿ ಮದವೆಯ ಗಂಡು ಕುದುರೆಯ ಮೇಲೆ ಸವಾರಿ ಮಾಡುವುದು ನಿಷಿದ್ಧ. ಆದರೆ ಜಮೀನು ಒಡೆಯನಾದ ಸೇಸಾನಾಯ್ಕ ಆರ್ಥಿಕವಾಗಿ

ಪ್ರಬಲ. ಸಾಮಾಜಿಕ ಪ್ರಾಬಲ್ಯಗಳಿಸಲು ಬಲಿಷ್ಠರ ಇಚ್ಛೆಯಂತೆ ರೂಪುಗೊಂಡಿದ್ದ ಮದುವೆ ಗಂಡು ಕುದುರೆಯ ಮೇಲೆ ಕೂರುವ ಹಕ್ಕನ್ನು ಚಲಾಯಿಸುವ ಇಚ್ಛೆ ತೋರುತ್ತಾನೆ. ಬದಲಾಗುತ್ತಿರುವ ಸಮಾಜದಲ್ಲಿ, ಸಾಮಾಜಿಕ ತಾರತಮ್ಯಗಳ ವಿರುದ್ಧ ಏಳುವ ಸಂಘರ್ಷದ ಕಿಡಿಯನ್ನು ಸೇಸಾನಾಯ್ಕ ಪ್ರತಿನಿಧಿಸುತ್ತಾನೆ. ಆದರೆ ಅದು ಕಾದಂಬರಿಯಲ್ಲಿ ಪ್ರಜ್ವಲಿಸುವುದು ಮಾತ್ರ ಕಂಡುಬರುವುದಿಲ್ಲ. ಸಮಾಜದಲ್ಲಿ ನಡೆಯುತ್ತಿರುವ ಮುಖಾಮುಖಿಗಳನ್ನು ಕಟ್ಟಿಕೊಡಲು ಕೃತಿಕಾರರು ಈ ಪಾತ್ರವನ್ನು ತಂದಿರಬಹುದು. ಆರ್ಥಿಕವಾಗಿ ಸಬಲಗೊಂಡ ಕೆಳಜಾತಿಯ ಜನರು ಸಾಮಾಜಿಕವಾಗಿ ಮೇಲಕ್ಕೇರಲು, ತಮಗಿಂತ ಮೆಲು ಜಾತಿಯವರ ಆಚಾರಗಳನ್ನು ಅನುಸರಿಸಲು ಯತ್ನಿಸುವ ಜನರ ಪ್ರತಿನಿಧಿಯಾಗಿದ್ದಾನೆ, ಸೇಸಾನಾಯ್ಕ.

❒ **ತಿಮ್ಮಾ ನಾಯ್ಕ :** ಹಳೇಪೈಕದ ಸೀತೂರು ತಿಮ್ಮಾನಾಯ್ಕ ಆ ಜಾತಿಯ ಗಣ್ಯರಲ್ಲೊಬ್ಬ, ಲಕ್ಕುಂದದ ಪುಟ್ಟನ ಅತ್ತೆ ವಿಧವೆ ಕಾಡಿ ಬಸಿರಾಗಿರುವ ಬಗ್ಗೆ ವಿಚಾರಣೆ ನಡೆಸಲು ಬರುವ ತಿಮ್ಮಾನಾಯ್ಕ ಆ ಬಸಿರಿಗೆ ಕಾರಣವಾದ ಸೇಸಾನಾಯ್ಕನ ಅತಿಥಿ. ಒಕ್ಕಲಿಗರ ಪ್ರಾಬಲ್ಯದ ವಿರುದ್ಧ ಕಳ್ಳುಕುಡಿದಾಗ ಮಾತ್ರ ಸೆಡ್ಡು ಹೊಡೆಯುವ ಉತ್ಸಾಹಿ. ಕಾದಂಬರಿಯಲ್ಲಿ ಈ ಪಾತ್ರ ಅಷ್ಟೊಂದು ಮಹತ್ವದ್ದಾಗಿ ಕಾಣಿಸಿಕೊಳ್ಳುವುದಿಲ್ಲ.

❒ **ಕಾಡಿ :** ಲಕ್ಕುಂದದ ಪುಟ್ಟನ ಅತ್ತೆ ಕಾಡಿ ಸೇಸಾನಾಯ್ಕನ ಸಹವಾಸದಿಂದ ಕದ್ದು ಬಸಿರಾದವಳು. ಗಟ್ಟದ ತಳದಿಂದ ಬಂದ ಪಿಜಿಣ - ಅಕ್ಕಣಿಯರ ಸಮಾಜಕ್ಕಿಂತ ಭಿನ್ನವಾದ ಸಮಾಜದಲ್ಲಿ ಬದುಕುತ್ತಿರುವ ಕಾಡಿಯ ಕಳ್ಳಬಸಿರು ಸಾಮಾಜಿಕವಾಗಿ ಸ್ವೀಕೃತವಾದದ್ದಲ್ಲ. ಹಾಗಾಗಿ ಕಣ್ಣಾಪಂಡಿತರ ಔಷಧಿಯಿಂದ ಬಸಿರು ಹೋಗಲಾಡಿಸಿಕೊಳ್ಳುತ್ತಾಳೆ. ಇತರೆ ಹೆಣ್ಣುಗಳ ಬದುಕಿನ ಬಗ್ಗೆ ಸ್ತ್ರೀಸಹಜ ಕುತೂಹಲವಿರುವುದು ಕಾದಂಬರಿಯಲ್ಲಿ ಸೂಚ್ಯವಾಗಿ ಕಾಣುತ್ತವೆ.

❒ **ಪುಟ್ಟಾ ನಾಯ್ಕ :** ಲಕ್ಕುಂದದ ಹಳೇಪೈಕದವರಲ್ಲೊಬ್ಬ. ಕಾಡಿಯ ಮಗಳನ್ನು ಮದುವೆಯಾದವನು. ಸಿಂಬಾವಿ ಭರಮೈಹೆಗ್ಗಡೆಯ ಒಕ್ಕಲು.

❒ **ಹಮೀರ ನಾಯ್ಕ:** ಸೇಸಾನಾಯ್ಕನ ಮಗ. ಹಮೀರನಾಯ್ಕನ ಮದುವೆಯ ಮೂಲಕ ಸಾಮಾಜಿಕ ಅಂತಸ್ತು ಹೆಚ್ಚಿಸಿಕೊಳ್ಳುವ ತವಕ ಸೇಸಾನಾಯ್ಕನಿಗೆ. ಪುರುಷ ಸಹಜ ಗುಣಲಕ್ಷಣವಿಲ್ಲದ, ಹುಂಬ ಹಮೀರನಾಯ್ಕ ಸೇಸಾನಾಯ್ಕನ ಆಸೆಗೆ ಮೂರ್ತರೂಪದಂತೆ ಕಾಣುವುದಿಲ್ಲ. ಕಾದಂಬರಿಯಲ್ಲಿ ಈ ಪಾತ್ರ ಹೆಚ್ಚು ಬೆಳೆದಿಲ್ಲ.

❒ **ಸುಬ್ಬಣ್ಣಹೆಗ್ಗಡೆ :** ಹಳೆಮನೆಯ ಸುಬ್ಬಣ್ಣಹೆಗ್ಗಡೆ ನಾಗರಿಕ ಪ್ರಪಂಚದಿಂದ ದೂರವಾದ, ತಿರುಪತಿಗೆ ಹೋದ ಮಗನ ನಿರೀಕ್ಷೆಯಲ್ಲಿರುವ, ಕೃಪಣತೆಗೆ ಹೆಸರಾದ ಪಾತ್ರ. ತಿರುಪತಿಗೆ ಹೋದ

ಹಿರಿಯಮಗ ಹಿಂದಿರುಗಿ ಬಾರದೇ ಹೋಗುವುದರಿಂದ ಘಾಸಿಗೊಳ್ಳುವ ಹೆಗ್ಗಡೆಯವರು ಆಸ್ತಿಯಲ್ಲಿ ಪ್ರಬಲರಾಗಿದ್ದರೂ ನಾಗರಿಕತೆ, ಶಿಷ್ಟಾಚಾರದಲ್ಲಿ ದುರ್ಬಲರು. ಯಜಮಾನ ಸಂಸ್ಕೃತಿಯ ಒಂದು ವಿಶಿಷ್ಟ ರೂಪದಂತೆ ಸುಬ್ಬಣ್ಣಹೆಗ್ಗಡೆ ಮತ್ತು ಅವರ ಸಂಸಾರ ಕಂಡುಬರುತ್ತದೆ.

❒ **ತಿಮ್ಮಪ್ಪಹೆಗ್ಗಡೆ :** ಹಳೆಮನೆ ಸುಬ್ಬಣ್ಣಹೆಗ್ಗಡೆಯವರ ಎರಡನೆಯ ಮಗ. ಯಜಮಾನ ಸಂಸ್ಕೃತಿ ತರುವ ಎಲ್ಲಾ ಕೆಟ್ಟಗುಣಗಳ ಮೂರ್ತರೂಪದಂತಿದ್ದಾನೆ. ವ್ಯಭಿಚಾರಿ, ಅಸೂಯಾಪರ, ಅನಾಗರಿಕತೆಯನ್ನು ಮೈಗೂಡಿಸಿಕೊಂಡು ಆತ ಕೊನೆಯಲ್ಲಿ ತಾನು ಮೆಚ್ಚಿದ ಹೆಣ್ಣನ್ನು ಮದುವೆಯಾಗಲು ಮಾಡುವ ಯತ್ನದಲ್ಲಿ ತನ್ನ ಗುಣ ಸ್ವಭಾವಗಳನ್ನು ಮಾರ್ಪಾಡಿಸಿಕೊಳ್ಳುತ್ತಾನೆ.

❒ **ದೊಡ್ಡಣ್ಣಹೆಗ್ಗಡೆ :** ಸುಬ್ಬಣ್ಣಹೆಗ್ಗಡೆಯವರ ಹಿರಿಯ ಮಗ ದೊಡ್ಡಣ್ಣಹೆಗ್ಗಡೆ. ತಿರುಪತಿಗೆ ಹೋದವನು ಮತ್ತೆ ಹಿಂದಿರುಗಲಿಲ್ಲ. ಖಾಯಿಲೆ ಬಂದು ಬರುವ ಅಡ್ಡದಾರಿಯಲ್ಲಿ ತೀರಿಕೊಂಡನೆಂದು ಗೊತ್ತಾಗುತ್ತದೆ. ಈತನ ಹೆಂಡತಿ ಕೋಣೂರು ಮುಕುಂದಯ್ಯನ ಅಕ್ಕ ರಂಗಮ್ಮ, ಧರ್ಮು ಮಗ.

❒ **ರಂಗಮ್ಮ :** ಕೋಣೂರು ಮುಕುಂದಯ್ಯನ ಅಕ್ಕ ರಂಗಮ್ಮ ಹಳೆಮನೆ ದೊಡ್ಡಣ್ಣ ಹೆಗ್ಗಡೆಗೆ ಪಣವಾಗಿ ಬಂದ ವಧು. ಗಂಡಸರ ಸ್ಪರ್ಧೆಯಲ್ಲಿ ಕಾಣಿಕೆಯಾಗಿ ಬರುವ ರಂಗಮ್ಮ ಹಳೆಮನೆಯ ಅಸಂಸ್ಕೃತಿಯ ವಾತಾವರಣದಲ್ಲಿ ರುಚಿಯಾಗಿ ಬಾಳಿದವಳು. ಯಾತ್ರೆಗೆ ಹೋದ ಗಂಡನ ನಿರೀಕ್ಷೆಯಲ್ಲೇ 'ಹುಚ್ಚು ಹೆಗ್ಗಡಿತಿ' ಪಟ್ಟ ಕಟ್ಟಿಸಿಕೊಂಡು ಮೈದುನನಿಂದ ಪಡಬಾರದ ಕಷ್ಟಕ್ಕೆ ಸಿಲುಕಿ ಕೊನೆಗೆ 'ದೊಡ್ಡಣ್ಣ ಹೆಗ್ಗಡೆ'ಯ ಸಾವಿನ ಜೊತೆಯಲ್ಲೇ ಅಂತ್ಯ ಕಾಣುವಳು. ಯಜಮಾನ ಸಂಸ್ಕೃತಿಯ ಶಕ್ತಿಗಳಿಗೆ ಬಲಿಯಾಗುವ ರಂಗಮ್ಮ ಪರಿಸ್ಥಿತಿಯ ಒತ್ತಡಗಳಲ್ಲಿ ನಲುಗುತ್ತಾಳೆ.

❒ **ಶಂಕರ ಹೆಗ್ಗಡೆ :** ಹಳೆಮನೆ ಸುಬ್ಬಣ್ಣಹೆಗ್ಗಡೆಯವರ ಅಣ್ಣನ ಮಗನಾದ ಶಂಕರಹೆಗ್ಗಡೆ ಮೇಲ್ವರ್ಗದ ಸಂಸ್ಕೃತಿಯ ಆರಾಧಕ. ಅವರ ಪೂಜೆ, ಉಡುಪು, ಮಡಿಯನ್ನು ಕುರುಡಾಗಿ ಅನುಕರಿಸುತ್ತಿದ್ದ ಶಂಕರ ಹೆಗ್ಗಡೆ, ತನ್ನ ಹೆಂಡತಿ ಮಕ್ಕಳ ಅನಾರೋಗ್ಯದ ಬಗ್ಗೆ ಅನಾಸಕ್ತಿ ವಹಿಸುತ್ತಾನೆ. ತನ್ನ ಜಾತಿಯ ಕಟ್ಟುಕಟ್ಟಳೆಗಳ ಬಗ್ಗೆ ಅಸಹ್ಯ ತಾಳುವ ಶಂಕರ ಹೆಗ್ಗಡೆ, ಅನ್ಯಜಾತಿಯ ಆಚಾರಗಳ ಮೌಢ್ಯದ ಪೋಷಕನಾಗುತ್ತಾನೆ. ಮೇಲುಜಾತಿಯ ಆಚಾರಗಳನ್ನು ಕುರುಡಾಗಿ ಅನುಸರಿಸುವ ವಿವೇಕಶೂನ್ಯ ಶೂದ್ರನಂತೆ ಶಂಕರ ಹೆಗ್ಗಡೆ ಕಾಣುತ್ತಾರೆ.

- **ಸೀತಮ್ಮ :** ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರ ಕೊಳಕು ಸಂಸ್ಕೃತಿಯ ಪಕ್ಕದಲ್ಲಿ, ಗಂಡ ಶಂಕರ ಹೆಗ್ಗಡೆಯ 'ನಾಗರಿಕ ಪ್ರಪಂಚ'ದಲ್ಲಿ ಸೀತಮ್ಮ ಕಾಣುವ ದುರಂತ ವಿಶಿಷ್ಟವಾದದ್ದು. ಗಂಡ ಶುಚಿ-ರುಚಿ ಜೀವನವನ್ನು ಸಾಗಿಸಿದರೂ, ಆತನ ದೇಹದಾಸೆಗೆ ಒಡ್ಡಿಕೊಳ್ಳ ಬೇಕಾಗುತ್ತದೆ. ಈ ಬಗೆಯ 'ಲೈಂಗಿಕ ಅತ್ಯಾಚಾರ'ಕ್ಕೆ ಬಲಿಯಾಗಿ ಆಕೆ ಕೇವಲ ಹೆರುವ ಯಂತ್ರವಾಗುತ್ತಾಳೆ. ಮಾನಸಿಕವಾಗಿ ತೃಪ್ತಿಯಿಲ್ಲದೆ, ಬಂಧು ಬಳಗದವರ ಪ್ರೀತಿಯನ್ನು ಸಂಪಾದಿಸಲಾಗದೆ, ಮೇಟಿಗೆ ಕಟ್ಟಿದ ಎತ್ತಿನಂತೆ ಸೀತಮ್ಮ ಸಂವೇದನೆಯಿಲ್ಲದೇ ಬದುಕುತ್ತಾಳೆ.
- **ಪುಟ್ಟರಾಮು :** ಶಂಕರ ಹೆಗ್ಗಡೆ ಮತ್ತು ಸೀತಮ್ಮನವರ ಮಗ. ತನ್ನ ತಂದೆ ಮತ್ತು ಅವರ ಚಿಕ್ಕಪ್ಪಯ್ಯನ ಸಂಘರ್ಷದಲ್ಲಿ, ಧರ್ಮನಂಥವನ ಪ್ರೀತಿಯನ್ನೂ ಮುಕ್ತವಾಗಿ ಪಡೆಯಲಾಗದ ಅಸಹಾಯಕತೆ ಈ ಸಣ್ಣ ಮಗುವಿನದು. ದ್ವೇಷ ಅಸೂಯೆ ಈರ್ಷೆ ಮಾನವೀಯತೆಯನ್ನು ನೊಣೆಯುವ ಪ್ರಪಂಚದಲ್ಲಿ ಪುಟ್ಟರಾಮನಂಥ ಪಾತ್ರ ಕರಳು ಹಿಂಡುತ್ತದೆ.
- **ಮಂಜಮ್ಮ :** ಸುಬ್ಬಣ್ಣಹೆಗ್ಗಡೆಯವರ ಮಗಳು. ತನ್ನ ಅತ್ತಿಗೆಗೊದಗಿದ ಕಷ್ಟಕ್ಕೆ ಮರುಗುವ ಸ್ವಭಾವದವಳು. ತಂದೆ, ಅಣ್ಣ ಇವರ ಪ್ರಬಲ ಹಿಡಿತದಲ್ಲಿ ತನ್ನ ಆಸೆ ಆಕಾಂಕ್ಷೆಗಳಿಗೆ ತಿಲಾಂಜಲಿಯಿಟ್ಟು ಇಳಿವಯಸ್ಸಿನ ಭರಮ್ಮೆ ಹೆಗ್ಗಡೆಗೆ ಎರಡನೇ ಹೆಂಡತಿಯಾಗುತ್ತಾಳೆ. ಯಜಮಾನ ಸಂಸ್ಕೃತಿಯಲ್ಲಿ ವಿನಿಮಯದ ವಸ್ತುವಾಗಿ ಮಂಜಮ್ಮ - ಲಕ್ಕಮ್ಮ ಚಿತ್ರಿತವಾಗಿದ್ದಾರೆ.
- **ಮರಾಟಿ ಮಂಜ :** ಸಿಂಬಾವಿ ಭರಮ್ಮೆಹೆಗ್ಗಡೆಯವರ ಮನೆಯ ಆಳು. ಮಲೆನಾಡಿನಲ್ಲಿ ಅಲ್ಪಸಂಖ್ಯಾತ ಮರಾಟಿ ಜಾತಿಯ ಮಂಜ ಸಣ್ಣಪುಟ್ಟ ಕಾಯಕದಲ್ಲಿ ನಿರತ. ಜಟ್ಟಮ್ಮ - ಲಕ್ಕಮ್ಮನವರ ಜಗಳದಿಂದ ರೋಸಿಹೋದವ. ಲಕ್ಕಮ್ಮನ ಕೆಲಸಗಳಿಗೆ ಒದಗಿಬರುವವ. ಹೆಂಗಸರ ಜಗಳದಿಂದ ಮನನೊಂದರೂ, ಕೇವಲ ಆಳಾಗಿ ಏನನ್ನೂ ಮಾಡಲಾರದ ಅಸಹಾಯಕ.
- **ಮಂಜ :** ಹಳೆಮನೆ ಸುಬ್ಬಣ್ಣಹೆಗ್ಗಡೆಯವರ ಆಳು.
- **ಸಿದ್ದಿ :** ಮಂಜನ ಹೆಂಡತಿ.
- **ತಿಮ್ಮ :** ಸುಬ್ಬಣ್ಣಹೆಗ್ಗಡೆಯ ಕುಟುಂಬಕ್ಕೆ ಸೇರಿದ ಮತ್ತೊಬ್ಬ ಆಳು. ಹೊಲಗೇರಿಯ ಕೊಳಕಿನ ಪ್ರತಿನಿಧಿ. ಧಣಿಯರ ತೋಟದಲ್ಲಿ ಬಿದ್ದಿದ್ದ ಬಾಳೆಗೊನೆಯನ್ನು ಎತ್ತು ತಂದಿದ್ದರೂ ಅಪರಾಧಿಪ್ರಜ್ಞೆ ಆತನನ್ನು ಕಾಡುತ್ತದೆ.
- **ಗಿಡ್ಡಿ :** ತಿಮ್ಮನ ಹೆಂಡತಿ. ಗಂಡನ ಹೆಸರು ಹೇಳಬಾರದೆಂಬ ರೂಢಿಯನ್ನು ಚಾಚೂತಪ್ಪದೆ ಪಾಲಿಸುವವಳು. ಸಂಪ್ರದಾಯಗಳು ಬದುಕನ್ನು ಅರಳಿಸಲಾಗದಿದ್ದರೂ, ಕೆಲವು

ಅರ್ಥಹೀನ ನಿಯಮಗಳಿಗೆ ಇಷು, ಬಲವಂತವಾಗಿ ಕಟ್ಟಿಹಾಕುತ್ತಾರೆಂಬುದಕ್ಕೆ ಗಿಡ್ಡಿ ಪಾತ್ರ ಸಾಕ್ಷಿ.

❒ **ಕುಳವಾಡಿ ಸಣ್ಣ :** ಸುಬ್ಬಣ್ಣ ಹೆಗ್ಗಡೆಯವರ ಆಳುಗಳಿದ್ದ ಹೊಲಗೇರಿಯ ಹಿರಿಯ ವ್ಯಕ್ತಿ. ಹರೆಯಕ್ಕೆ ಮೊದಲೇ ನಾನಾ ಕಾರಣಗಳಿಂದ ತೀರಿಕೊಳ್ಳುವ ಸಮುದಾಯದಲ್ಲಿ ಐವತ್ತು ದಾಟಿದ್ದ ಸಣ್ಣ, ಸುತ್ತಮುತ್ತಲ ತನ್ನ ಜಾತಿಬಾಂಧವರಿಂದ ಗೌರವ ಸಂಪಾದಿಸಿದ್ದ. ವಯಸ್ಸಿನ ಹಿರಿತನದಿಂದಲೇ ಕುಳವಾಡಿ ಪಟ್ಟದೊರಕಿತ್ತು.

❒ **ಪುಟ್ಟಿ :** ಕುಳವಾಡಿ ಸಣ್ಣನ ಮಗಳು. ತಾಯಿಯನ್ನು ಕಳೆದುಕೊಂಡು ತಮ್ಮ ಗಂಗನನ್ನು, ಅಪ್ಪನ ಆರೈಕೆಯನ್ನು ನೋಡಿಕೊಂಡ ಹುಡುಗಿ. ಮೈನೆರೆದು ಮದುವೆ ವಯಸ್ಸಾದರೂ, ಅವಳ ಕರ್ತವ್ಯಪಾಲನೆಯೇ ಮದುವೆಗೆ ಅಡ್ಡಿಯಾಗಿದೆ. ಗಂಜಿ ಬೇಯಿಸಲು ಗತಿಯಿಲ್ಲದ ಮನೆಯಲ್ಲಿ ಪುಟ್ಟಿಯೇ ದಿಕ್ಕಾಗಿದ್ದಾಳೆ. ಒಮ್ಮೆ ಗುತ್ತಿಯ ಜೊತೆಯಲ್ಲೂ ಲೈಂಗಿಕ ಸುಖವನ್ನು ಹಂಚಿಕೊಂಡವಳು.

❒ **ಗಂಗ :** ಸಣ್ಣನ ಮಗ. ಪುಟ್ಟಿಯ ಆರೈಕೆಯಲ್ಲಿ ಬೆಳೆದವನು.

❒ **ಬೈರ :** ಸುಬ್ಬಣ್ಣ ಹೆಗ್ಗಡೆಯವರ ಮತ್ತೊಬ್ಬ ಆಳು. ಯಾವುದೇ ಕೆಲಸಕ್ಕೂ ಬಗ್ಗದ ಆತನನ್ನು ಸುಬ್ಬಣ್ಣ ಹೆಗ್ಗಡೆ ಖಾಯಂ ಆಗಿ ದನಾ ಕಾಯುವ ಕೆಲಸಕ್ಕೆ ಹಚ್ಚಿದ್ದರು. ದನಕಾಯಲು ಕೆಲವು ಹೆಂಗಸರು ಮತ್ತು ಬೆಳೆದ ಹುಡುಗಿಯರು ಬರುತ್ತಿದ್ದದ್ದು ಬೈರನಿಗೆ ದನಕಾಯವುದು ತಪ್ಪಿಸಿಕೊಳ್ಳಲಾಗದ ಆಕರ್ಷಣೆಯಾಗಿತ್ತು. ಮದುವೆಗೆ ಮುನ್ನ ಹಡಬೆಗೆ ಬಿದ್ದನೆಂದು ಅಪವಾದಕ್ಕೆ ಗುರಿಯಾಗಿದ್ದ. ಹೆಂಡತಿ ಗರ್ಭಿಣಿಯಾಗಿರುವಾಗ ಅವಳೊಡನೆ ಜಗಳವಾಡಿ ಸಾವಿಗೂ ಕಾರಣನಾದನೆಂಬುದು ಜನರ ನಂಬಿಕೆ.

❒ **ಹಳೆಪೈಕದ ಹೂವಿ :** ತಿಮ್ಮಪ್ಪ ಹೆಗ್ಗಡೆಯ ಪ್ರೇಯಸಿ. ಸುಬ್ಬಣ್ಣ ಹೆಗ್ಗಡೆಯವರ ಮನೆಯಲ್ಲಿ ಕೆಲಸ. ತನ್ನ ಅತ್ತಿಗೆ ರಂಗಮ್ಮ ಹೆಗ್ಗಡಿತಿಗೆ ಕೆಟ್ಟ ಹೆಸರು ತರಲು ತಿಮ್ಮಪ್ಪ ಹೆಗ್ಗಡೆ ಹೂಡಿದ ಸಂಚಿನಲ್ಲಿ ಈಕೆಯೂ ಪಾಲುದಾರಳು.

❒ **ಪುಟ್ಟ ಮತ್ತು ಬಚ್ಚ :** ಶಂಕರ ಹೆಗ್ಗಡೆಯವರ ಪಾಲಿಗೆ ಬಂದ ಆಳುಗಳು.

❒ **ದೊಳ್ಳ :** ಸಿಂಬಾವಿ ಭರಮ್ಮೆ ಹೆಗ್ಗಡೆಯವರ ಮನೆಯ ಆಳು.

❒ **ಹಳೆಪೈಕದ ಬುರುಡ :** ಸಿಂಬಾವಿಯ ಆಳು. ಬುರುಡ ಹೆಗ್ಗಡೆಯವರಿಗೆ ಕಳ್ಳು ಸರಬರಾಜು ಮಾಡುವ ಕಾರ್ಯದಲ್ಲಿ ನಿರತನಾದವನು.

❒ **ವೆಂಕಟಣ್ಣ :** ಸೈಂಧವ ಎಂಬುದು ಹೂವಳ್ಳಿ ವೆಂಕಟಣ್ಣನಿಗೆ ಜನ ಇಟ್ಟಿದ್ದ ಅಡ್ಡಹೆಸರಾಗಿತ್ತು. ಅದಕ್ಕೆ ಮುಖ್ಯಕಾರಣ ಅವನ ದೈತ್ಯಗಾತ್ರ. ಹಸುವಿನಂತ ಸಾಧುಪ್ರಾಣಿಯಾದರೂ ಒಮ್ಮೊಮ್ಮೆ ಭಯಂಕಾರವಾದ ಸಿಟ್ಟು ಅನಾಹುತಕ್ಕೆ ಕಾರಣವಾಗಿರುತ್ತಿತ್ತು. ಇಂಥ ರೂಕ್ಷ ವ್ಯಕ್ತಿಗೆ

ಚಿನ್ನಮ್ಮನ ಅಜ್ಜಿ ಹೊಸಕೇರಿ ಬಸಪ್ಪನಾಯಕರಿಗೆ ಹೆಣ್ಣು ಕೊಡದೆ ವೆಂಕಟಣ್ಣನಿಗೆ ಕೊಟ್ಟಿದ್ದಳು. ವೆಂಕಟಣ್ಣನ ಈ ಲಕ್ಷಣಗಳು ಆನುವಂಶಿಕವಾಗಿದ್ದವು. ಅವನ ಅಜ್ಜನೋ ಮುತ್ತಜ್ಜನೋ ದುರ್ಗದ ಪಾಳೆಗಾರಿಕೆಯಲ್ಲಿ ದಂಡನಾಯಕನಾಗಿದ್ದನಂತೆ ಈಗಲೂ ಹೂವಳ್ಳಿ ಮನೆಯಲ್ಲಿ ಖಡ್ಗಗಳೂ, ಈಟಿ, ಭರ್ಜಿಗಳು, ಗುರಾಣಿಗಳೂ ಇವೆ ಎಂಬ ವದಂತಿ. ಈತ ನಾಗಕ್ಕನನ್ನು ಕೂಡಿಕೆ ಮಾಡಿಕೊಳ್ಳುತ್ತಾನೆ. ಹೆಚ್ಚಾಗಿ ಆಸ್ತಿ ಇಲ್ಲದ ಈತ ಬೆಟ್ಟಳ್ಳಿ ಕಲ್ಲಯ್ಯ ಗೌಡರ ಹಾಗೂ ಸಿಂಬಾವಿ ಭರಮೈಹೆಗ್ಗಡೆಯವರ ಜಮೀನನ್ನು ಒಕ್ಕಲಾಗಿ ಪಡೆದು ವ್ಯವಸಾಯ ಮಾಡುತ್ತಿದ್ದ. ಕಲ್ಲೂರು ಮಂಜೂಭಟ್ಟರ ಬಳಿ ಸಾಲಮಾಡಿ ಅವಮಾನಕ್ಕೆ ಗುರಿಯಾಗಿರುತ್ತಾನೆ. ಸಾಲಕ್ಕಾಗಿ ತನ್ನ ಮಗಳು ಚಿನ್ನಮ್ಮನನ್ನು ಭರಮೈಹೆಗ್ಗಡೆಗೆ ಮದುವೆ ಮಾಡಿಕೊಡಲು ಸಿದ್ಧನಿರುತ್ತಾನೆ. ಕೊನೆಗೆ ಮದುವೆಯ ದಿವಸವೇ ಖಾಯಿಲೇ ಜಾಸ್ತಿಯಾಗಿ ತೀರಿಕೊಳ್ಳುತ್ತಾನೆ.

❒ **ಚಿನ್ನಮ್ಮ :** ಹೂವಳ್ಳಿ ವೆಂಕಟನಾಯಕ ಅಥವಾ ವೆಂಕಟಣ್ಣನ ಮಗಳು ಮುಕುಂದಯ್ಯನ ಬಾಲ್ಯಗೆಳತಿ. ಅವನ ಬಾಳ ಗೆಳತಿಯಾಗಲೂ ಹಂಬಲಿಸಿದವಳು. ಈ ಹಂಬಲ ಪೂರೈಕೆಗೆ ಸಂಪ್ರದಾಯವನ್ನು ಧಿಕ್ಕರಿಸಿ ನಡೆಯುವ ಹೆಣ್ಣಾಗಿ ಚಿನ್ನಮ್ಮ ತೋರುವ ದಿಟ್ಟತನ ಅಪೂರ್ವವಾದದ್ದು. ಸುಕೋಮಲ ಭಾವನೆಗಳ ಚಿನ್ನಮ್ಮ ಬದುಕಿನ ನಿರ್ಣಾಯಕ ಘಟ್ಟದಲ್ಲಿ ಅತ್ಯಂತ ದಿಟ್ಟ ನಿಲುವು ತಾಳುತ್ತಾಳೆ. (ಕಾನೂರು ಹೆಗ್ಗಡಿತಿಯ ಸೀತೆಗೆ ಹೋಲಿಸಿ ನೋಡಿದರೆ ಸ್ಪಷ್ಟವಾಗುತ್ತದೆ). ಬದಲಾಗುತ್ತಿದ್ದ ಕಾಲಘಟ್ಟದಲ್ಲಿ ಸಾಮಾಜಿಕ ಧೋರಣೆಗಳು ಸ್ತ್ರೀಯ ಸ್ಥಾನಮಾನವನ್ನು ಪರಿವರ್ತಿಸುತ್ತಿದ್ದರ ದ್ಯೋತಕವಾಗಿ ಚಿನ್ನಮ್ಮ ಚಿತ್ರಿತಳಾಗಿದ್ದಾಳೆ. ಶಿಷ್ಟ ಸಮಾಜದಲ್ಲಿ ಜನಿಸಿದರೂ, ಪ್ರಣಯಕ್ಕೆ ಸಹಜವಾಗಿ ಸ್ಪಂದಿಸುವ ಚಿನ್ನಮ್ಮ ಶಿಷ್ಟ ಸಮಾಜದ ಕಟ್ಟಳೆಗಳನ್ನು ಮೌನವಾಗಿಯೇ ಮೀರಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾಳೆ.

❒ **ನಾಗಕ್ಕ - ನಾಗತ್ತೆ :** ಬಾವಿಕೊಪ್ಪದ ನಾಗತ್ತೆ ಸಾಮಾಜಿಕ ನೀತಿಯನ್ನು ಉಲ್ಲಂಘಿಸುವ, ತನ್ನ ಕಾರ್ಯಸಾಧನೆಗೆ ಕೆಳಮಟ್ಟದ ಕುಟಿಲೋಪಾಯಗಳಿಗೆ ಇಳಿಯುವ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತಾಳೆ. ತನ್ನ ವಿಧವೆ ಸೊಸೆ ನಾಗಕ್ಕನನ್ನು 'ಕೂಡಿಕೆ' ಮಾಡಿಸುವಲ್ಲಿ ಅತ್ಯಂತ ಅಸಹ್ಯಕರ ತಂತ್ರಗಳನ್ನು ಹೂಡಿ ಯಶಸ್ವಿಯಾಗುತ್ತಾಳೆ. ಅದೇ ತಂತ್ರದಿಂದ ಹೂವಳ್ಳಿ ವೆಂಕಟಣ್ಣನನ್ನು ಅವನಿಗರಿವಿಲ್ಲದಂತೆ ಕೂಡುವ ನಾಗತ್ತೆ ನೈತಿಕವಾಗಿ ಅತ್ಯಂತ ಕೆಳಸ್ತರದ ಹೆಣ್ಣು. ತಿರಸ್ಕಾರಕ್ಕೆ ಒಳಗಾದ ಆಕೆ ವಿಧವೆ ಯೆಂಕಿಯ ಆಶ್ರಯದಲ್ಲಿ ಕಾಲಯಾಪನೆ ಮಾಡಬೇಕಾಗುತ್ತದೆ.

ಎಳೆಯ ವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡು ನಾಗಕ್ಕ ಅತ್ತೆಯ

ಪ್ರಲೋಭನೆಗಳನ್ನೆಲ್ಲ ಹತ್ತಿಕ್ಕುವ ದಿಟ್ಟ ಹೆಣ್ಣು. ಆದರೆ ಕೀಲುಮಟ್ಟದ ತಂತ್ರಗಳಿಂದ ಮೋಸ ಹೋಗುವ ಆಕೆ ಚಿನ್ನಮ್ಮನ ಮೇಲಿನ ಮಮಕಾರದಿಂದ ವೆಂಕಟಣ್ಣನನ್ನು ಕೂಡಿಕೆಯಾಗುತ್ತಾಳೆ. ಆದರೆ ತನ್ನ ಅಪರೂಪದ ಗುಣದಿಂದ ಎಲ್ಲರನ್ನು ಗೆಲ್ಲುವ ನಾಗಕ್ಕ ಪ್ರತಿಕೂಲ ಪರಿಸ್ಥಿತಿಯನ್ನು ನಿಭಾಯಿಸುವ ದಿಟ್ಟೆಯಾಗಿ, ವಾತ್ಸಲ್ಯಮಯಿಯಾಗಿ ಬೆಳೆಯುತ್ತಾಳೆ.

❒ **ಅಂತಕ್ಕ - ಕಾವೇರಿ :** ಸುಬ್ಬಣ್ಣ ಹೆಗ್ಗಡೆಯವರ ಹತ್ತಿರ ಒಕ್ಕಲುತನ ಮಾಡುತ್ತಿದ್ದ ಸುಬ್ಬಯ್ಯಶೆಟ್ಟರು ತೀರಿಹೋದ ಮೇಲೆ ಆತನ ಹೆಂಡತಿ ಅಂತಕ್ಕ ಮಗಳು ಕಾವೇರಿಯೊಡನೆ ಮೇಗರವಳ್ಳಿಯಲ್ಲಿ ಹೋಟೆಲು ನಡೆಸುತ್ತಾಳೆ. ದೇವಯ್ಯನನ್ನು ಒಲಿಸಿಕೊಂಡು ಶ್ರೀಮಂತಿಕೆಯನ್ನು ಸೂರೆಮಾಡಲು ಮಗಳನ್ನು ಅಂತಕ್ಕ ಪ್ರೇರೇಪಿಸುತ್ತಾಳೆ. ಅಂತಕ್ಕ - ಕಾವೇರಿಯವರ ಸ್ವಭಾವ ವರ್ತನೆಗಳು ಆ ಸಮಾಜದಲ್ಲಿ ವಿಲಕ್ಷಣವೆಂಬಂತೆ ತೋರಿದರೂ ಇಡೀ ಸಮಾಜ ಅದನ್ನು ಸ್ವೀಕರಿಸಿರುತ್ತದೆ. ಅವರ ವರ್ತನೆಗೆ ಪರಿಸ್ಥಿತಿ ಮತ್ತು ಪರಿಸರಗಳೇ ಪ್ರೇರಣೆಯಾಗಿರುವುದಕ್ಕೆ ಕಾದಂಬರಿಯಲ್ಲಿ ಸಮರ್ಥನೆ ದೊರೆಯುತ್ತದೆ. ಆದರೆ ಕಾವೇರಿಯ ಚೆಲ್ಲಾಟ, ಮುಗ್ಧ ಸ್ವಭಾವಗಳೇ ಆಕೆಯ ದುರಂತಕ್ಕೆ ಭಾಷ್ಯ ಬರೆಯುತ್ತವೆ. ಮುಂದೆ ಅಂತಕ್ಕನ 'ಓಟ್ಲು ಮನೆ' 'ವಿದ್ಯಾರ್ಥಿ ನಿಲಯ'ವಾಗಿ ಪರಿವರ್ತನೆಯಾಗುವ ಸೂಚನೆಯನ್ನು ಕಾದಂಬರಿ ನೀಡುತ್ತದೆ. ಬಹಿಷ್ಕೃತ ಕಾರ್ಯಗಳಿಗೆ ಆಡೊಂಬಲವಾಗಿದ್ದ ಅಂತಕ್ಕನ ಮನೆ ಅಂತಿಮವಾಗಿ ಅಂತಕ್ಕನ ಬದುಕಿಗೂ, ಸಮಾಜದ ವಿಕಾಸಕ್ಕೂ ಆಸರೆ ಮತ್ತು ಸಾಕ್ಷಿಯಾಗಿ ನಿಲ್ಲುತ್ತವೆ.

❒ **ಕಣ್ಣಾಪಂಡಿತ :** ಮಲೆಯಾಳ ದೇಶದ ಕಡೆಯಿಂದ ಬಂದು ಮೇಗರವಳ್ಳಿಯಲ್ಲಿ ನೆಲೆಯಾಗಿದ್ದ ಕಣ್ಣಾಪಂಡಿತ ಕಾದಂಬರಿಯಲ್ಲಿ ಬರುವ ನಗಣ್ಯ ಪಾತ್ರಗಳಲ್ಲಿ ಒಂದು. ಕಾದಂಬರಿಯ ಸಮಾಜದ ಸ್ಥಿತಿಯನ್ನು ಚಿತ್ರಿಸುವಲ್ಲಿ ಕಣ್ಣಾಪಂಡಿತನ ಪಾತ್ರ ಪೋಷಕವಾಗಿದೆ. ನಾಗರಿಕತೆಯಿಂದ ದೂರವಾದ ಮಲೆನಾಡಿನ ಜನರಿಗೆ ಕಣ್ಣಾಪಂಡಿತ ಮೌಢ್ಯವನ್ನು ವೃದ್ಧಿಗೊಳಿಸಲು ಯಶಸ್ವಿಯಾಗುತ್ತಾನೆ. ಇಷ್ಟಾರ್ಥ ಸಿದ್ಧಿಗಾಗಿ ತಾಯಿತ ಮಂತ್ರಿಸಿ ಕೊಡುವುದು, ಗುಹ್ಯ ರೋಗಗಳಿಗೆ, ಕಳ್ಳ ಬಸಿರು ಇಳಿಸುವುದಕ್ಕೆ ಮದ್ದುಕೊಡುವುದು ಇವು ಕಣ್ಣಾ ಪಂಡಿತನು ಬದುಕಿಗಾಗಿ ನಡೆಸುವ ಕಾಯಕಗಳು. ಆ ಮೂಲಕ ಕಾದಂಬರಿಯ ಅನೇಕ ಪಾತ್ರಗಳ ಅಂತರಂಗ ಬಯಲಾಗುತ್ತದೆ.

❒ **ಕಿಟ್ಟಯ್ಯ ಸೆಟ್ಟಿ :** ಅಂತಕ್ಕ ಸೆಟ್ಟಿಯ ಸೋದರಳಿಯ. ಈಗಾಗಲೇ ಎರಡು ಮದುವೆಗಳನ್ನು ಮಾಡಿಕೊಂಡು ಪತ್ನಿವಿಯೋಗದಿಂದ ಪರಿತಪಿಸುತ್ತಿದ್ದ ಕಿಟ್ಟಯ್ಯ, ಅಂತಕ್ಕ ಸೆಟ್ಟಿಯ ಮಗಳು ಕಾವೇರಿಯನ್ನು ಮದುವೆಯಾಗಲು ಐಗಳು ಅನಂತಯ್ಯನವರ ಜೊತೆ ಕನ್ನಡ

ಜಿಲ್ಲೆಯಿಂದ ಮೇಗರವಳ್ಳಿಗೆ ಬರುತ್ತಾನೆ. ವಯಸ್ಸಾದರೂ ಮದುವೆಯಾಗದೆ, ದೇವಯ್ಯನ ಜೊತೆ ಸಲುಗೆಯಿಂದ ವರ್ತಿಸುತ್ತಿದ್ದ ಕಾವೇರಿಯನ್ನು ಕಿಟ್ಟಯ್ಯನಿಗೆ ಕೊಟ್ಟು ಮದುವೆ ಮಾಡಿ ಜನರ ಬಾಯಿಗೆ ಬೀಳುವುದನ್ನು ತಪ್ಪಿಸಿಕೊಳ್ಳುವ ಆಲೋಚನೆಯಿಂದ ಅಂತಕ್ಕ ಕಿಟ್ಟಯ್ಯನನ್ನು ಬರಮಾಡಿಕೊಳ್ಳುತ್ತಾಳೆ. ಈ ಹಿಂದೆ ಕಿಟ್ಟಯ್ಯನ ಮದುವೆ ಪ್ರಸ್ತಾಪ ಬಂದಾಗ ಅದಕ್ಕೆ ಬದಲು ಹಾಳುಬಾವಿಗೆ ಹಾರುವುದೇ ಒಳ್ಳೆಯದೆಂದು ಭಾವಿಸಿದ್ದ ಕಾವೇರಿ ಕಾಕತಾಳೀಯವೆಂಬಂತೆ, ಕಿಟ್ಟಯ್ಯ ಊರಿಗೆ ಬಂದಾಗಲೇ ಅತ್ಯಾಚಾರಕ್ಕೆ ಬಲಿಯಾಗಿ ಬಾವಿಗೆ ಬಿದ್ದು ಸಾಯುತ್ತಾಳೆ.

❒ **ಮುಕುಂದಯ್ಯ :** ಕೋಣೂರು ರಂಗಪ್ಪಗೌಡರ ತಮ್ಮ ಮುಕುಂದಯ್ಯ ಹೊಸ ತಲೆಮಾರಿನ ಪ್ರತಿನಿಧಿ. ಕಾದಂಬರಿಯಲ್ಲಿ ಸಾಕಷ್ಟು ವ್ಯಾಪಿಸಿರುವ ಪಾತ್ರ. ತನ್ನ ಬಾಲ್ಯಗೆಳತಿ ಚಿನ್ನಮ್ಮನನ್ನು ಪಡೆಯಲು ಮುಕುಂದಯ್ಯ ಅಂದಿನ ಶಿಷ್ಟಾಚಾರದ ಕಟ್ಟುಪಾಡುಗಳನ್ನು ಉಲ್ಲಂಘಿಸುತ್ತಾನೆ. ಪುರೋಹಿತವರ್ಗ ಸೃಷ್ಟಿಸಿದ ಮೌಢ್ಯದ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸುತ್ತಾನೆ. ತನ್ನ ಭಾವ ದೇವಯ್ಯನನ್ನು ಮತಾಂತರದಿಂದ ತಪ್ಪಿಸುವ ಹುನ್ನಾರ ಹೆಣೆಯುತ್ತಾನೆ. ಗುತ್ತಿ - ತಿಮ್ಮಿ, ಐತ - ಪೀಂಚಲು - ಇವರ ಪ್ರಣಯದಂತೆ ಮುಕುಂದಯ್ಯ - ಚಿನ್ನಮ್ಮನವರ ಪ್ರಣಯ ಸಹಜವಾದರೂ, ಶಿಷ್ಟಸಮಾಜದ ನೈತಿಕ ಕಟ್ಟುಗಳಿಗೆ ಬದ್ಧವಾದದ್ದು. ಹಾಗಾಗಿ ಉಳಿದ ಜೋಡಿಗಳಿಗಿಂತ ಇವರ ಪ್ರಣಯ ಭಿನ್ನವಾಗಿ ನಿಲ್ಲುತ್ತದೆ.

❒ **ದಾನಮ್ಮ ಹೆಗ್ಗಡಿತಿ : (ಕಾಗಿನಹಳ್ಳಿ ಅಮ್ಮ)** ಕೋಣೂರು ಮುಕುಂದಯ್ಯ ಮತ್ತು ರಂಗಪ್ಪಗೌಡರ ತಾಯಿ.

❒ **ಐತ - ಪೀಂಚಲು :** ಗಟ್ಟದ ತಳಗಿನಿಂದ ಬಂದ ಆಳುಗಳಲ್ಲಿ ಐತ - ಪೀಂಚಲು ಅವರದು ಅನುರಾಗದ ಸಂಸಾರ. ಯಾರೇ ಆದರೂ ಅಸೂಯೆಪಡುವಷ್ಟು ಅನುರೂಪ ಹಾಗು ಸಾಮರಸ್ಯ ದಾಂಪತ್ಯದಿಂದ ಮಲೆಗಳಲ್ಲಿನ ಮದುಮಕ್ಕಳು ಇವರೆಯೇನೋ ಎನ್ನುವವಷ್ಟರ ಮಟ್ಟಿಗೆ ಚಿತ್ರಿತವಾಗಿದ್ದಾರೆ. ಮುಕುಂದಯ್ಯ - ಚಿನ್ನಮ್ಮನವರ ಮಿಲನಕ್ಕೆ, ಬೆಟ್ಟಳ್ಳಿಯ ಜನರು ಹುಡುಕಿಕೊಂಡು ಬರುವ ತಿಮ್ಮಿಯ ರಕ್ಷಣೆಗೆ ಇವರು ಮುಂದಾಗುತ್ತಾರೆ. ಯಾವುದೇ ಕಟ್ಟುಪಾಡಿಲ್ಲದೆ, ಮಾನವ ನಿರ್ಮಿತ ಎಲ್ಲಾ ಗಡಿಗಳನ್ನು ಸರಾಗವಾಗಿ ದಾಟಿ, ಗರಿಬಿಚ್ಚಿ ಹಾರಾಡುವ ಹಕ್ಕಿಯಂತೆ ಐತ - ಪೀಂಚಲು ಕಾದಂಬರಿಯಲ್ಲಿ ಮನಸೂರೆಗೊಳ್ಳುತ್ತಾರೆ. ಕಾದಂಬರಿಕಾರರೇ ಸೂಚಿಸುವ ಹಾಗೆ ಶಬರ - ಶಬರಿಯರ ವೇಷದ ಶಿವ - ಪಾರ್ವತಿಯರಂತೆ ಐತ - ಪೀಂಚಲು ಗೋಚರಿಸುತ್ತಾರೆ. ರೂಕ್ಷವಾಗಿರುವುದರ ವಿರುದ್ಧ ಉಪೇಕ್ಷೆಯನ್ನು ತಾಳುತ್ತಾ ಮಾನವೀಯ ಭಾವನೆಗಳಿಗೆ ಮಿಡಿಯುತ್ತಾ, ತಮ್ಮದಲ್ಲದೆ,

ಹೆರವರ ಪ್ರೇಮಾನುರಾಗಗಳನ್ನೂ ಆರಾಧಿಸುವ ಐತ - ಪೀಂಚಲು ಇಡೀ ಕಾದಂಬರಿಯಲ್ಲೇ ಅತ್ಯಂತ ಮನೋಜ್ಞವಾದ ಪಾತ್ರಗಳಾಗಿ ಚಿತ್ರಿತವಾಗಿವೆ.

- **ಚೀಂಕ್ರ - ದೇಯಿ :** ಗಟ್ಟದ ಕೆಳಗಿನಿಂದ ಬಂದು ಕೋಣೂರು ರಂಗಪ್ಪಗೌಡರಲ್ಲಿ ನಿಂತ ಆಳುಗಳಲ್ಲಿ ಚೀಂಕ್ರ ಸೇರೆಗಾರ. ಇಡೀ ಕಾದಂಬರಿಯಲ್ಲಿ ಸಂಕೀರ್ಣವೇ ಇಲ್ಲದ ಪಾತ್ರವಿದು. ಹುಟ್ಟ ಕೇಡಿಗನಂತೆ ಚಿತ್ರಿತವಾಗಿರುವ ಚೀಂಕ್ರ ಅನೇಕ ದುರ್ಘಟನೆಗಳನ್ನು ಉದ್ಘಾಟಿಸುವ ಖಳ. ಅವನ ಹೆಂಡತಿ ದೇಯಿ ಗಂಡನ ಕ್ರೌರ್ಯದಲ್ಲಿ ನಲುಗಿದವಳು. ಮಹಾ ಕುಡುಕನೂ, ಪಶುವೃತ್ತಿಯವನೂ ಆದ ಚೀಂಕ್ರ ಬಸಿರಿ ಹೆಂಡತಿಯಿಂದಲೂ ದುಡಿಸುವ ಕ್ರೂರಿ. ಆರು ಮಕ್ಕಳನ್ನು ಹೆತ್ತು (ಮೂರು ಮಾತ್ರ ಉಳಿಯುತ್ತವೆ) ಏಳನೆಯ ಬಸಿರಿನಲ್ಲಿ ಗಂಡನ ಲೈಂಗಿಕ ಬಲಾತ್ಕಾರದಿಂದ ಗರ್ಭಸ್ರಾವವಾಗಿ ಸಾಯುತ್ತಾಳೆ. ದೇಯಿಯ ಸಾವು ಚೀಂಕ್ರನಿಗೆ ಅಕ್ಕಣಿಯನ್ನು ಆಕರ್ಷಿಸಲು ನೆರವಾಗುತ್ತದೆ. ಪಿಜಿಣನ ಸಾವಿಗೂ ತಂತ್ರಹೂಡುವ ಚೀಂಕ್ರ ಅಂತಕ್ಕನ ಮಗಳು ಕಾವೇರಿಯ ಮೇಲೆ ನಡೆಯುವ ಲೈಂಗಿಕ ಅತ್ಯಾಚಾರದ ಸೂತ್ರಧಾರನಾಗುತ್ತಾನೆ. ಅಸಾಮರಸ್ಯ ದಾಂಪತ್ಯದ ಮತ್ತೊಂದು ಮುಖವನ್ನು ಕಾದಂಬರಿಕಾರರು ಚೀಂಕ್ರ - ದೇಯಿ ಸಂಸಾರದಲ್ಲಿ ಚಿತ್ರಿಸಿಕೊಡುತ್ತಾರೆ.

- **ಪಿಜಣ - ಅಕ್ಕಣಿ :** ಗಟ್ಟದ ಕೆಳಗಿಂದ ಬಂದು ಕೋಣೂರು ರಂಗಪ್ಪಗೌಡರ ಮನೆತನದಲ್ಲಿ ಆಳಾಗಿ ದುಡಿಯುವ ಜೋಡಿ. ಅನಾರೋಗ್ಯದಿಂದ ನರಳುವ ಪಿಜಣನಿಗೆ ದೃಢಕಾಯಳಾದ ಅಕ್ಕಣಿ ಹೆಂಡತಿ. ತನ್ನ ದೈಹಿಕ ಅಸಹಾಯಕತೆಯನ್ನು ಬಲ್ಲ ಪಿಜಿಣ, ಹೆಂಡತಿಗೆ ತನ್ನಿಂದ ದೇಹಸುಖ ಲಭಿಸುತ್ತಿಲ್ಲವೆಂದು ಕೊರಗಿ ಪರೋಕ್ಷವಾಗಿ ಆಕೆ ಇನ್ನೊಬ್ಬನಿಂದ ಸುಖ ಪಡೆಯುವುದನ್ನು ಅಂಗೀಕರಿಸುತ್ತಾನೆ. ಆದರೆ ಮರ್ಯಾದೆಗೆ ಭಂಗ ಬರುವ ಬಗ್ಗೆ ಆತಂಕಗೊಳ್ಳುತ್ತಾನೆ. ತಾನು ಸತ್ತಮೇಲಾದರೂ ಹೆಂಡತಿಗೆ ಸುಖಸಿಗಲೆಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ತನ್ನ ಅಸಹಾಯಕತೆಯ ಅರಿವಿರುವ ಪಿಜಣ ತ್ಯಾಗವೊಂದಕ್ಕೆ ಸಿದ್ಧವಾಗುವ ಬಗೆಯದು.

  ಗಂಡನ ಮೇಲೆ ಪ್ರೀತಿಯಿರುವ ಅಕ್ಕಣಿ ಚೀಂಕ್ರನಿಂದ ಲೈಂಗಿಕ ಆಕರ್ಷಣೆಗೆ ಒಳಗಾಗುತ್ತಾಳೆ. ಚೀಂಕ್ರನ ಹೆಂಡತಿಯ ಸಾವು ಮತ್ತು ಅನಾಥವಾದ ಮಕ್ಕಳನ್ನು ಪೋಷಿಸಲು ಮುಂದಾಗುವ ಆಕೆಯ ಸ್ವಭಾವ ಅಂತಿಮವಾಗಿ ಚೀಂಕ್ರನೊಡನೆ ಬೆರೆಯುವ ಸನ್ನಿವೇಶವನ್ನು ಸೃಷ್ಟಿಸಿಬಿಡುತ್ತದೆ. ಆದರೆ ಗಂಡ ಪಿಜಿಣನ ಸಾವಿನ ನಂತರ ಅಪರಾಧಿ ಪ್ರಜ್ಞೆಯಿಂದ ಬಸವಳಿಯುವ ಅಕ್ಕಣಿ ಚೀಂಕ್ರನನ್ನು ದೂರೀಕರಿಸಿ, ಮಕ್ಕಳನ್ನು ಸಾಕುವ ಮಾತೃಹೃದಯವನ್ನು ಮೆರೆಯುತ್ತಾಳೆ. ಪಿಜಿಣ - ಅಕ್ಕಣಿಯವರದು ಅಸಾಮರಸ್ಯ ದಾಂಪತ್ಯಕ್ಕೆ ಉದಾಹರಣೆಯಾದರೂ ಅವರ ವ್ಯಕ್ತಿತ್ವ ಪ್ರತ್ಯೇಕವಾಗಿ ಉನ್ನತ ಮಟ್ಟದ್ದು.

ಆದರೂ ಅಕ್ಕಣಿ ಚೀಂಕ್ರನ ಭಯದಿಂದಾಗಿಯೇ ರಂಗಪ್ಪಗೌಡರ 'ಆಶ್ರಯ'ಕ್ಕೆ ತೆರಳುವುದು, ಏಕಾಂಗಿ ಹೆಣ್ಣಿನ ಅಸಹಾಯಕತೆಯನ್ನು ಬಳಸಿಕೊಳ್ಳುವಲ್ಲಿ ಎಲ್ಲಾ ಸ್ತರದ ಗಂಡಸರ ಮನೋಭಾವನೆ ಒಂದೇ ಆಗಿರುತ್ತದೆಂಬುದನ್ನು ಕಾದಂಬರಿ ಸೂಕ್ಷ್ಮವಾಗಿ ತಿಳಿಸುತ್ತದೆ.

❒ **ಮೊಡಂಕಿಲ - ಬಾಗಿ :** ಗಟ್ಟದ ಕೆಳಗಿನಿಂದ ಬಂದ ಆಳುಗಳ ಸಂಸಾರದಲ್ಲಿ ಮೊಡಂಕಿಲ - ಬಾಗಿಯವರದು ಅತ್ಯಂತ ಸಾಧಾರಣವಾದ ಸಂಸಾರ. ಹಾಗಾಗಿ ಅವರ ಪಾತ್ರಗಳೂ ಹಾಗೆಯೇ ಚಿತ್ರಿತವಾಗಿವೆ. ಯಾವುದೇ ಬದಲಾವಣೆ, ಭಾವನೆಗಳಿಗೆ ಸ್ಪಂದಿಸಲಾಗದಷ್ಟು ಜಡವಾದ ಈ ಪಾತ್ರಗಳು ಸಾಮಾನ್ಯ ಬದುಕನ್ನು ಪ್ರತಿನಿಧಿಸುತ್ತವೆ.

❒ **ಯೆಂಕಿ :** ಕಾದಂಬರಿಯ ಅತ್ಯಂತ ಗೌಣವಾದ ಪಾತ್ರಗಳಲ್ಲಿ ಒಬ್ಬಳು, ಅವಳು ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ದೃಶ್ಯಗಳ ಸಂಖ್ಯೆಯಿಂದ. ಆಕೆ ಒಬ್ಬಂಟಿಗಳು. ಹೆರಿಗೆ ಮಾಡಿಸುವುದು, ಮದ್ದು ಕೊಡುವುದು, ಮುಷ್ಟ ಮಾಡುವುದು, ಹಾಲು ಕಡಿಮೆಯಾದರೆ ಬೂದಿ ಮಂತ್ರಿಸಿಕೊಡುವುದು, ಕಳ್ಳಬಸಿರು ತೆಗೆಯುವುದು, ಮೇಲಾಗಿ ಸಾಮಾಜಿಕವಾಗಿ ಬಹಿಷ್ಕಾರಗೊಂಡವರಿಗೆ ಆಶ್ರಯ ನೀಡಿ ರಕ್ಷಿಸುವುದು - ಇವು ಯೆಂಕಿಯ ಜೀವನ ಯಾಪನೆಯ ಮಾರ್ಗ ಮತ್ತು ಒಟ್ಟು ಬದುಕು. ಆದರೆ ಮುಕುಂದಯ್ಯ - ಚಿನ್ನಮ್ಮ ಹುಲಿಕಲ್ಲು ನೆತ್ತಿಗೆ ಹೋಗುವ ಪಯಣದಲ್ಲಿ ಈಕೆ ನೆರವಾಗುವುದು ಹಾಗೂ ತಿರಸ್ಕಾರಕ್ಕೆ ಒಳಗಾದ ನಾಗತ್ತೆಗೆ ಆಶ್ರಯ ನೀಡುವುದು ಅವಳು ಲೌಕಿಕವಾಗಿ ಏರಿರುವ ಎತ್ತರವನ್ನು ಕಾದಂಬರಿ ಗುರುತಿಸಿದೆ. ಗೌಣವಾದ ಪಾತ್ರವಾದರೂ, ಕಡಿಮೆ ಕಾಣಿಸಿಕೊಂಡರೂ ವ್ಯಕ್ತಿತ್ವ ಮತ್ತು ಕಾರ್ಯದಲ್ಲಿ ಉನ್ನತ ಸ್ತರದ ಪಾತ್ರವೇ ಆಗಿದೆ.

❒ **ತಿಮ್ಮಿ :** ಬೆಟ್ಟಳ್ಳಿಯ ತಳವಾರ ದೊಡ್ಡಬೀರನ ಮಗಳು. ಧಣಿಯರು ಸೂಚಿಸಿದ ಬಚ್ಚನನ್ನು ಮದುವೆಯಾಗಲೊಪ್ಪದೆ ಪ್ರೀತಿಸಿದ ಗುತ್ತಿಯೊಡನೆ ಓಡಿಹೋಗಲು ಸಿದ್ಧಳಾದವಳು. ಗುತ್ತಿಯ ಜೊತೆಯಲ್ಲಿ ತಿಮ್ಮಿ ಕೈಗೊಳ್ಳುವ ಪಯಣ ವಿಶಿಷ್ಟವಾದದ್ದು. ಹುಲಿಕಲ್ಲು ಅರೆಯಲ್ಲಿ ರಾತ್ರಿ ತಂಗುವ ಗುತ್ತಿ - ತಿಮ್ಮಿಯರು ಸಮಾಜದ ಕಟ್ಟುಪಾಡುಗಳನ್ನು ಕಿತ್ತೊಗೆದು ಎತ್ತರಕ್ಕೇರಿದ ಗಂಧರ್ವರಾಗುತ್ತಾರೆ. ಬೆಳಗಿನ ಸೂರ್ಯೋದಯವನ್ನು ಕಾಣುವ ತಿಮ್ಮಿಯ ಆನಂದ, ಪರವಶತೆಯ ಮೂಲಕ ಕೆಳಜಾತಿಯ ಹೆಣ್ಣಿಗೂ ದಾರ್ಶನಿಕತೆ ಸಾಧ್ಯತೆಯ ಅರಿವನ್ನು ಮೂಡಿಸುತ್ತಾಳೆ.

❒ **ಐಗಳು ಅನಂತಯ್ಯ :** ಕೋಣೂರು ರಂಗಪ್ಪಗೌಡರ ಮನೆಯಲ್ಲಿ ಐಗಳಾಗಿರುವ ಅನಂತಯ್ಯನವರ ಪಾಲಿಗೆ ಅನಂತ ಕೆಲಸಗಳು. ಹುಡುಗರಿಗೆ ಕೂಲಿಮಠದಲ್ಲಿ ಅಕ್ಷರಾಭ್ಯಾಸ, ಅಭ್ಯಂಜನ ಕಾರ್ಯ, ಆಳುಗಳ ಲೆಕ್ಕ ಬರೆಯುವುದು, ಕಾವ್ಯಗಳನ್ನು ಓಲೆಗರಿಯಲ್ಲಿ ನಕಲು ಮಾಡುವುದು

ಇತ್ಯಾದಿ. ಒಂದು ಬಗೆಯ ಸಾಂಸ್ಕೃತಿಕ ಪರಿಚಾರಿಕೆ ವೃತ್ತಿಯ ಐಗಳು ದೊಡ್ಡಣ್ಣ ಹೆಗ್ಗಡೆಯ ಅನ್ವೇಷಣೆಯಲ್ಲೂ ನೆರವಾಗುತ್ತಾರೆ.

❒ **ಜೋತಿರ್ಮಣಿಯಮ್ಮ :** ಪಾದ್ರಿ ಜೀವರತ್ನಯ್ಯನವರ ಮಗಳು. ಆಕೆ ಗಂಡಸರೊಡನೆ ಸಲುಗೆಯಿಂದ ವರ್ತಿಸುವ ರೀತಿಯಿಂದ ದೇವಯ ಆಸಕ್ತನಾಗುತ್ತಾನೆ. ಮತಾಂತರ ಪ್ರಚಾರ ಮಾಡುವ ಜೀವರತ್ನಯ್ಯ ಮಗಳ ಸೌಂದರ್ಯವನ್ನು ತನ್ನ ಧ್ಯೇಯಕ್ಕೆ ಬಳಸಿಕೊಳ್ಳುತ್ತಾನೆ.

❒ **ಕಲ್ಲಯ್ಯಗೌಡ :** ಬೆಟ್ಟಳ್ಳಿಯ ಕಲ್ಲಯ್ಯಗೌಡರು ಯಜಮಾನ ಸಂಸ್ಕೃತಿಯ ಮತ್ತೊಂದು ಪ್ರತಿನಿಧಿ. ಆಳುಗಳು ತಮ್ಮ ಆಸ್ತಿಯ ಭಾಗವೆಂದು ತಿಳಿಯುವ ಕಲ್ಲಯ್ಯಗೌಡರು ತಮ್ಮ ಹಿತಾಸಕ್ತಿಗೆ ಧಕ್ಕೆಯೊದಗಿದಾಗ ಕ್ರೌರ್ಯವನ್ನು ಪ್ರದರ್ಶಿಸುತ್ತಾರೆ. ತಮ್ಮ ಕೇರಿಯಲ್ಲಿನ ಹೆಣ್ಣು ಬೇರೆಡೆಗೆ ಮದುವೆಯಾದರೆ ದುಡಿಯುವ ಆಳಿನ ಸಂಖ್ಯೆ ಕಡಿಮೆಯಾಗುತ್ತದೆಂದು ಭಾವಿಸಿದ್ದರು. ವಿಚಿತ್ರವೆಂದರೆ ಕಲ್ಲಯ್ಯಗೌಡ ತಮ್ಮ ಹೆಂಡತಿಗೆ ಹೆದರುತ್ತಿದ್ದದ್ದು. ಅದಕ್ಕೆ ಹಿನ್ನೆಲೆ ಕಾದಂಬರಿಯಲ್ಲಿ ಸಿಕ್ಕುವುದಿಲ್ಲ. ಬಹುಶ: ದೊಡ್ಡಮ್ಮ ಹೆಗ್ಗಡಿತಿಯ ನೈತಿಕತೆಯೇ ಅವರಲ್ಲಿ ಅಪರಾಧಿ ಭಾವ ಮೂಡಿಸುತ್ತಿತ್ತೆಂದು ಹೇಳಬಹುದಷ್ಟೆ.

❒ **ದೊಡ್ಡಮ್ಮ ಹೆಗ್ಗಡಿತಿ :** ಬೆಟ್ಟಳ್ಳಿ ಕಲ್ಲಯ್ಯಗೌಡರ ಹೆಂಡತಿ ನಗಣ್ಯ ಪಾತ್ರಗಳಲ್ಲಿ ಒಂದೆನಿಸಿದರೂ, ಆಕೆ ಬೀರುವ ಪ್ರಭಾವ ಅಪಾರ. ಆಳುಗಳೆದರು ತಮ್ಮ ಕ್ರೌರ್ಯವನ್ನು ಪ್ರದರ್ಶನಕ್ಕಿಡುವ ಕಲ್ಲಯ್ಯಗೌಡರು ಹೆದರುತ್ತಿದ್ದದ್ದು ದೊಡ್ಡಮ್ಮ ಹೆಗ್ಗಡಿತಿಯ ಮೌನಕ್ಕೆ, ಆಕೆಯ ನೈತಿಕ ಪ್ರತಿಭಟನೆಗೆ. ಹಾಗಾಗಿ ಹೆಂಡತಿಗೆ ಕಾಣದಂತೆ ದಂಡನೆಯ ಕಾರ್ಯದಲ್ಲಿ ತೊಡಗಿದ್ದರು.

❒ **ದೇವಯ್ಯ :** ಬೆಟ್ಟಳ್ಳಿ ಕಲ್ಲಯ್ಯಗೌಡರ ಮಗ ದೇವಯ್ಯಗೌಡ ಸ್ಥಳೀಯ ಪುರೋಹಿತಶಾಹಿಯ ಗೊಡ್ಡು ಆಚರಣೆಗಳ ಹಾಗೂ ಮೌಢ್ಯತೆಗಳ ವಿರುದ್ಧ ನಿಂತು ಕ್ರೈಸ್ತಮತದ ವಸಾಹತುಶಾಹಿ ಪ್ರಭಾವಕ್ಕೆ ಒಳಗಾದವನು. ಉಪದೇಶಿ ಜೀವರತ್ನಯ್ಯನ ಸ್ನೇಹಮಾಡಿ ಬೈಸಿಕಲ್ ಸವಾರಿಯನ್ನು ಕಲಿಯಲು ಪ್ರಯತ್ನಿಸಿ ಮತಾಂತರ ಪ್ರಕ್ರಿಯೆಗೆ ಬಲಿಯಾದವನು. ಮೇಗರವಳ್ಳಿ ಅಂತಕ್ಕ ಸೆಟ್ಟಿಯ ಮಗಳು ಕಾವೇರಿಯ ಸಹವಾಸ ಒಂದು ಕಡೆ, ಪಾದ್ರಿ ಜೀವರತ್ನಯ್ಯನ ಮಗಳು ಜ್ಯೋತಿರ್ಮಣಿಯಮ್ಮನ ಸಹವಾಸ ಇನ್ನೊಂದು ಕಡೆ. ಕ್ರೈಸ್ತಧರ್ಮದ ಪ್ರಭಾವಕ್ಕೆ ಒಳಗಾಗಿ ಸ್ಥಳೀಯ ಆಚರಣೆಗಳನ್ನು ವಿರೋಧಿಸಿದವನು. ಉಡುಗೆ ತೊಡುಗೆಗಳಲ್ಲಿ, ಹೆಂಡತಿಯ ವಿಚಾರದಲ್ಲಿ, ಆಚಾರವಿಚಾರಗಳಲ್ಲಿ ಸಿಂಧುವಳ್ಳಿ ಚಿನ್ನಪ್ಪನ ಪ್ರತಿಬಿಂಬವಾಗಿದ್ದನು. ಕೊನೆಗೆ ಆರ್ಷೇಯ ಕಾಲದ ಸಂಪ್ರದಾಯ ಸಂಸ್ಕೃತಿಗಳನ್ನು ತ್ಯಜಿಸಲಾರದೆ, ಜೀವರತ್ನಯ್ಯನಿಂದ ಹೊರಬರಲು ಮುಕುಂದಯ್ಯನ ಮರೆಹೊಕ್ಕುತ್ತಾನೆ, ಹೆಂಡತಿ ದೇವಮ್ಮನ ಸಹಕಾರದಿಂದ ಮತಾಂತರಗೊಳ್ಳದೆ ಉಳಿಯುತ್ತಾನೆ.

- **ದೇವಮ್ಮ :** ಬೆಟ್ಟಳ್ಳಿ ದೇವಯ್ಯನ ಹೆಂಡತಿ ದೇವಮ್ಮ ಸಂಪ್ರದಾಯಶೀಲ ಹೆಣ್ಣು. ಕೋಣೂರು ಮುಕುಂದಯ್ಯನ ಅಕ್ಕ. ಸುತ್ತಮುತ್ತಲಿನ ಕ್ರೌರ್ಯಗಳಿಗೆ, ತೀಕ್ಷ್ಣ ವಾಸ್ತವತೆಗಳಿಗೆ ದೃಷ್ಟಿ ಹಾಯಿಸದ ದೇವಮ್ಮ ತನ್ನ ಗಂಡನ ಸಂಸಾರದಲ್ಲೇ ಸುಖಕಾಣುವ ಹೆಣ್ಣು. ಗಂಡನ ಮತಾಂತರದ ವಿರುದ್ಧ ಅವಳು ತಾಳುವ ಅಭಿಪ್ರಾಯ ರೂಢಿಗತ ಮೌಲ್ಯದಿಂದ ಹುಟ್ಟಿದ್ದೇ ಹೊರತು ವಸಾಹತುಶಾಹಿಯ ಒತ್ತಾಯಗಳ ವಿರುದ್ಧ ಎದ್ದ ದನಿಯಲ್ಲ.
- **ಚಲುವಯ್ಯ :** ದೇವಯ್ಯ ಮತ್ತು ದೇವಮ್ಮನವರ ಮಗ. ದೊಡ್ಡಣ್ಣ ಹೆಗ್ಗಡೆಯವರು ಸತ್ತು ಚಲುವಯ್ಯನಾಗಿ ಹುಟ್ಟಿರುವ ಸೂಚನೆ ಕಾದಂಬರಿಯಲ್ಲಿ ಕಂಡುಬರುತ್ತದೆ. ಹಾಗೆಯೇ ಮುಂದೆ ಮುಕುಂದಯ್ಯ - ಚಿನ್ನಮ್ಮನಲ್ಲಿ ಹುಟ್ಟುವ ಹೆಣ್ಣು ಮಗು ಚಲುವಯ್ಯನ ಕೈಹಿಡಿಯುವ ಸೂಚನೆಯನ್ನೂ ಕಾದಂಬರಿಕಾರರು ನೀಡುತ್ತಾರೆ.
- **ಪಾದ್ರಿ ಜೀವರತ್ನಯ್ಯ:** ಮಲೆನಾಡಿನ ಪ್ರದೇಶದಲ್ಲಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯಕ್ಕೆ ನಿಯೋಜಿತನಾದವನು. ವಸಾಹತು ಸಮಾಜದ ಮೇಲೆ ಪ್ರಭುತ್ವ ಹೇರುವ ನೀತಿಯನ್ನು ಜಾರಿಗೊಳಿಸುವ ಪ್ರತಿನಿಧಿ. ಕ್ರೈಸ್ತ ಧರ್ಮಕ್ಕೆ ಸ್ವತ: ಮತಾಂತರಗೊಂಡ ಸ್ಥಳೀಯ ವ್ಯಕ್ತಿ ಜೀವರತ್ನಯ್ಯನನ್ನು ಅಲ್ಲಿನ ಸಮಾಜವೇ ಅಸ್ಪೃಶ್ಯನಂತೆ ಕಾಣುವುದೊಂದು ವ್ಯಂಗ್ಯ. ಜಡಬುದ್ಧಿಗಳಾಗದೆ ತುಸು ಜಾಗ್ರತ ಬುದ್ಧಿಯುಳ್ಳವರು ಹಾಗೂ ತಮ್ಮ ಧರ್ಮದ ಮೂಲತತ್ವವನ್ನರಿಯದ ಮಲೆನಾಡಿನ ಗೌಡರುಗಳನ್ನು ಮತಾಂತರಗೊಳಿಸುವುದು ಸುಲಭವೆಂದು ನಂಬಿ ಅಂಥವರನ್ನೆ ಪತ್ತೆ ಹಚ್ಚುತ್ತಾನೆ. ಸಿಂಧುವಳ್ಳಿ ಚಿನ್ನಪ್ಪ ಅವನ ಮೊದಲನೆಯ ಬೇಟೆ. ಎರಡನೆಯ ಬೇಟೆ ಬೆಟ್ಟಳ್ಳಿ ದೇವಯ್ಯ. ಆಧುನಿಕ ವಸ್ತು, ನಡತೆ ಮತ್ತು ವರ್ತನೆಯಂಥ ಸಾಧನಗಳಿಂದ ಅನ್ಯಧರ್ಮಕ್ಕೆ ಯುವಕರನ್ನು ಆಕರ್ಷಿಸುವ ಜೀವರತ್ನಯ್ಯನ ವಿಧಾನ ಸ್ಥಳೀಯ ಉಪಾಯಗಳಿಂದಲೇ ವಿಫಲವಾಗುತ್ತದೆ. ಮತಾಂತರವೇ ಅಂತಿಮ ಗುರಿಯಾದರೂ ಶಿಕ್ಷಣ, ಆರೋಗ್ಯದ ಮೂಲಕ ಸಮಾಜ ಸುಧಾರಣೆಗೆ ಕಾಣಿಕೆ ನೀಡುವ ಕ್ರೈಸ್ತ ಮಿಷನರಿಗಳ ಕಾರ್ಯವೂ ಕಾದಂಬರಿಯಲ್ಲಿ ಚಿತ್ರಿತವಾಗಿದೆ.
- **ಸೇಸಿ :** ತಿಮ್ಮಿಯ ತಾಯಿ; ದೊಡ್ಡಬೀರನ ಹೆಂಡತಿ. ಸಾಮಾನ್ಯತೆಯನ್ನು ಮೀರುವ ಕಾದಂಬರಿಯ ಹಲವು ಸ್ತ್ರೀಪಾತ್ರಗಳಲ್ಲಿ ಸೇಸಿಯ ವ್ಯಕ್ತಿತ್ವ ವಿಶಿಷ್ಟವಾದದ್ದು. ಒಡೆಯರ ಜೀತಕ್ಕಾಗಿಯೇ ವೈಯಕ್ತಿಕ ಆಯ್ಕೆಯಾದ ಮದುವೆಗಳೂ ಬಲಿಯಾಗುತ್ತಿರುವ ವಿಷಾದದ ಅರಿವು ಅವಳಿಗಿದೆ. ಗುತ್ತಿಯ ಜೊತೆಗೆ ಮಗಳು ತಿಮ್ಮಿ ಓಡಿಹೋಗಲು ನೆರವಾಗಿ ಒಡೆಯರ ಆಜ್ಞೆಯನ್ನು ಧಿಕ್ಕರಿಸುತ್ತಾಳೆ. ಹಾಗೆಯೇ ತನ್ನ ಮಗ ಕಲ್ಲಯ್ಯಗೌಡರಿಂದ ಶಿಕ್ಷೆಗೆ ಒಳಗಾದಾಗ ಮಗನನ್ನು ರಕ್ಷಿಸಲು ಮುಂದಾಗುವ ಧೈರ್ಯ ತೋರುತ್ತಾಳೆ.

❐ **ಚಿಕ್ಕಪುಟ್ಟಿ :** ಪುಟ್ಟಬೀರನ ಹೆಂಡತಿ

❐ **ಬಚ್ಚ :** ಕಲ್ಲಯ್ಯಗೌಡರ ಮನೆಯ ಆಳು. ತಮ್ಮ ಕೇರಿಯ ಆಳಿನ ಮಗಳು ತಿಮ್ಮಿ ತಮ್ಮಲ್ಲಿಯೇ ಉಳಿಯಲು ಬಚ್ಚನ ಜೊತೆ ವಿವಾಹ ನಿಶ್ಚಯಿಸುತ್ತಾರೆ. ತನ್ನ ಮಾವ ಮತ್ತು ಭಾವಮೈದುನರಿಗೆ ಕಲ್ಲಯ್ಯಗೌಡರು ಶಿಕ್ಷೆ ವಿಧಿಸಿದಾಗ ಅವರ ರಕ್ಷಣೆಗೆ ಬಚ್ಚನೆ ಮುಂದಾಗುತ್ತಾನೆ.

❐ **ಕಲ್ಲೂರು ಮಂಜಾಭಟ್ಟರು:** ಕನ್ನಡ ಜಿಲ್ಲೆಯಿಂದ ಬರಿಗೈಯಲ್ಲಿ ಪೂಜಾರಿಯಾಗಿ ಬಂದ ಕಲ್ಲೂರು ಮಂಜಾಭಟ್ಟರು ದೊಡ್ಡ ಚೌಕೀ ಮನೆಯ ಯಜಮಾನನಾಗಿ ಬೆಳೆಯುತ್ತಾರೆ. ಜನರ ಮೌಢ್ಯವನ್ನು ತಮ್ಮ ಒಳತಿಗಾಗಿ ಬಳಸಿಕೊಳ್ಳುವ, ಚಾಕಚಕ್ಯತೆಯಿಂದ ಅವರನ್ನು ಸಾಲದ ಬಲೆಗೆ ಸಿಕ್ಕಿಸಿಕೊಳ್ಳುವ ಮಂಜಾಭಟ್ಟರು ತಮ್ಮ ಆಸ್ತಿ ರಕ್ಷಣೆಗೆ, ಬಡ್ಡಿ ವಸೂಲಿಗೆ ಹೊನ್ನಳ್ಳಿಯ ಉಂಡಾಡಿ ಸಾಬರನ್ನು ನೇಮಿಸಿಕೊಳ್ಳುತ್ತಾರೆ.

❐ **ಕರೀಂಸಾಬು : (ಕರಿಮೀನು ಸಾಬು)** ಮೇಗರವಳ್ಳಿಯಲ್ಲಿ ಅಂಗಡಿ ತೆರೆದು ನೆಲೆಸಿದ್ದ ಮಾಪಿಳ್ಳೆ.

❐ **ಪುಡಿಸಾಬು :** ಕರೀಂಸಾಬಿಯ ತಮ್ಮ. ನೆಶ್ಯವನ್ನು ಮಾರುತ್ತಿದ್ದರಿಂದ ಈ ಜನಪ್ರಿಯ ನಾಮ. ಆಗುಂಬೆಯ ಘಾಟಿನ ಕಾಲುದಾರಿಯಲ್ಲಿ ಆಗುತ್ತಿದ್ದ ಕೊಲೆ ಸುಲಿಗೆಯಲ್ಲಿ ಅವನದೂ ಪಾಲಿತ್ತೆಂದು ಕೆಲವರು ಆಡಿಕೊಳ್ಳುತ್ತಿದ್ದರು.

❐ **ಇಜಾರದ ಸಾಬು :** ಹೊನ್ನಳ್ಳಿಹೂಡ್ತದಿಂದ ಪ್ರಸಿದ್ಧರಾದ ಸಾಬರಲ್ಲಿ ಎತ್ತರವೂ, ದಾಂಡಿಗನೂ, ಕ್ರೂರಿಯೂ ಆದ ಇಜಾರದ ಸಾಬುವಿಗೆ ಅವನು ಧರಿಸುತ್ತಿದ್ದ ದೊಗಳೆ ಷರಾಯಿಯಿಂದ ಆ ಹೆಸರು ಬಂದಿತ್ತು. ಕನ್ನಡದ ಸಾಬರು ವಸೂಲಾತಿಗಾಗಿ ನೇಮಕವಾದವನು.

❐ **ಲುಂಗಿಸಾಬು :** ಕುಳ್ಳಾಗಿ, ಗುಜ್ಜಾಗಿದ್ದ ಸಿಂಡಮೂಗಿನ ಈತ ಕೆಂಗಪ್ಪಿನ ಚೌಕದ ಲುಂಗಿಯನ್ನು ಸೊಂಟಕ್ಕೆ ಸುತ್ತಿರುವುದ್ದರಿಂದ ಲುಂಗಿಸಾಬು ಎಂಬ ಹೆಸರು ಆತನಿಗೆ. ಈತನೂ ಕನ್ನಡದವನೆ. ವೆಂಕಟಣ್ಣನಿಂದ ಒದೆತಿಂದವನು. ವಸೂಲಾತಿಗಾಗಿ ಮಂಜಾಭಟ್ಟರಿಂದ ನೇಮಕವಾದವನು.

❐ **ಅಜೀಜ್ ಸಾಬು (ಅಜ್ಜೀ ಸಾಬು) :** ಅಜೀಜ್ ಸಾಬುವಿನ ಉಚ್ಚಾರಣೆ ಹಳ್ಳಿಗರ ಬಾಯಲ್ಲಿ ಅಜ್ಜೀಸಾಬು ಆಗಿತ್ತು. ಈತನೂ ಕನ್ನಡದವನೆ. ವಸೂಲಾತಿಗಾಗಿ ಮಂಜಾಭಟ್ಟರಿಂದ ನೇಮಕವಾದವನು.

❐ **ಧರ್ಮು :** ದೊಡ್ಡಣ್ಣ ಹೆಗ್ಗಡೆ ಮತ್ತು ರಂಗಮ್ಮನ ಮಗ. ಕೋಣೂರು ಅಜ್ಜಿಯ ಮನೆಯಲ್ಲೇ ವಾಸ. ತನ್ನ ತಂದೆ ತೀರ್ಥಯಾತ್ರೆಯಿಂದ ಹಿಂದುರುಗಿ ಬರದಿರುವುದು, ತಾಯಿಗೆ

ಹಿಡಿದಿರುವ ಹುಚ್ಚಿನಿಂದ ಜರ್ಜರಿತನಾದ ಹುಡುಗ. ಬಹು ಸೂಕ್ಷ್ಮ ಹೃದಯದ ಧರ್ಮು ತಾಯಿಗೆ ಬಂದೊದಗಿದ ಸ್ಥಿತಿಗೆ ಮರುಗುತ್ತಾನೆ.

- **ತಿಮ್ಮು :** ರಂಗಪ್ಪಗೌಡರ ಮಗ. ಧರ್ಮುವಿನ ಗೆಳೆಯ.
- **ಕಾಡು :** ಕಲ್ಲಯ್ಯಗೌಡರ ಕಿರಿಮಗ ಹಾಗೂ ಧರ್ಮು, ತಿಮ್ಮು ಇವರ ಸಂಗಡ ಆಟಗಳಲ್ಲಿ ಜೊತೆಯಾಗಿದ್ದು, ದೇವಸ್ಥಾನಕ್ಕೆ ಭೇಟಿಕೊಟ್ಟ ಸಂದರ್ಭದಲ್ಲಿ ಬ್ರಾಹ್ಮಣರ ಆಚರಣೆಗಳನ್ನು ಟೀಕಿಸುವುದರಲ್ಲಿ ಸ್ನೇಹಿತರ ಜೊತೆ ಸಹಕರಿಸುತ್ತಾನೆ.
- **ಮಾಯಿಂದಪ್ಪಾ ಮಾನನಾಯಕ :** ಗುತ್ತಿಯನ್ನು ಹಿಡಿಯಲು ಬಂದ ಒಬ್ಬ ಪೊಲೀಸಿನವನು. ದಫೇದಾರರು. ಇಜಾರದ ಸಾಬುವಿನ ಮೇಲೆ ನಡೆದ ಹಲ್ಲೆಯ ಆರೋಪಿ ಗುತ್ತಿಯನ್ನು ಹಿಡಿಯಲು ಬಂದವರು. ಗುತ್ತಿಯ ಹುನ್ನಾರದಿಂದ ಕೇದಗೆಯ ಹಿಂಡಲದ ಬಳಿಯ ಕಂಪದ ಉಸುಕಿನಲ್ಲಿ ಮಾನನಾಯಕ ಸಿಕ್ಕಿಹಾಕಿಕೊಳ್ಳುತ್ತಾನೆ. ದೇವಯ್ಯ, ಬಚ್ಚರಿಂದ ಬಚಾವಾಗುತ್ತಾನೆ.
- **ಸಣ್ಣಬೀರ :** ದೊಡ್ಡಬೀರ ಮತ್ತು ಸೇಸಿಯ ಹಿರಿಯಮಗ. ತಿಮ್ಮಿಯ ಪಲಾಯನದಿಂದ ಕಲ್ಲಯ್ಯಗೌಡರ ಶಿಕ್ಷೆಗೆ ಒಳಗಾದವನು. ಮುಂದೆ ಸಿಂಬಾವಿಯಲ್ಲಿ ಸಾಬರಿಗೂ ಹೊಲೆಯರಿಗೂ ನಡೆದ ಜಗಳದಲ್ಲಿ ಯಾರಿಗೂ ತಿಳಿಯದಂತೆ ಇಜಾರದ ಸಾಬಿಯ ಬೆರಳು ಕತ್ತರಿಸಿ, ಕುತ್ತಿಗೆ ಹೆಗಲುಗಳ ಮೇಲೆ ಘಾತ ಮಾಡುತ್ತಾನೆ.
- **ಹೊಟ್ಟೆಲಕ್ಕಿ :** ಸಣ್ಣ ಬೀರನ ಹೆಂಡತಿ. ನೆಂಟರ ಮನೆಗೆ ಹೋಗಲು ಸಂಭ್ರಮ ಪಡುವ ಲಕ್ಕಿ ಗಂಡನಿಗೆ ಏಟುಬಿದ್ದಾಗ ತನಗೆ ಹೊಡೆದದ್ದಕ್ಕೆ ಶಿಕ್ಷೆಯೆಂದೇ ನಂಬುವವಳು. ತಾನಿಲ್ಲದ ವೇಳೆ ಮೈದುನನ ಹೆಂಡತಿ ಗಂಡನ ಮೇಲೆ ಮೋಹಪಾಶ ಬೀಸಬಹುದೆಂದು ಸಂಶಯ ಪಡುವವಳು.
- **ಪುಟ್ಟಬೀರ :** ದೊಡ್ಡಬೀರ ಮತ್ತು ಸೇಸಿಯ ಕೊನೆಯ ಮಗ. ಪಲಾಯನವಾದ ತಿಮ್ಮಿಯನ್ನು ಕರೆದುಕೊಂಡು ಬರಲು ಸಿಂಬಾವಿಗೆ ತಾಯಿಯ ಜೊತೆ ಹೋಗುತ್ತಾನೆ. ಸ್ವಭಾವತ: ಹೆದರುಪುಕ್ಕಲ ಹಾಗೂ ಬಾಯಿಬಡುಕ.
- **ಲೇಕ್ ಹಿಲ್ ಸಾಹೇಬರು :** ಬ್ರಿಟಿಷರು ನಮ್ಮ ದೇಶವನ್ನು ಆಳುತ್ತಿರುವ ಸಂದರ್ಭದಲ್ಲಿ ತಮ್ಮ ಕ್ರೈಸ್ತಧರ್ಮದ ಪ್ರಚಾರಕ್ಕಾಗಿ ಕೆಲವು ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಅದರಲ್ಲಿ 'ರೆವರೆಂಡ್ ' ಹುದ್ದೆಗೆ ನೇಮಕವಾದ ಲೇಕ್ ಹಿಲ್ ಮಲೆನಾಡ ಪ್ರಾಂತ್ಯದ ಸುತ್ತಮುತ್ತಲ ಹಳ್ಳಿಗಳ ಉಸ್ತುವಾರಿಯನ್ನು ವಹಿಸಿಕೊಂಡಿದ್ದರು. ಇವರಿಗೆ ಸ್ಥಳೀಯ ಪಾದ್ರಿ ಉಪದೇಶಿ ಜೀವರತ್ನಯ್ಯ ಸಹಾಯಕನಾಗಿದ್ದು, ಸುತ್ತಮುತ್ತಲ ಹಳ್ಳಿಗಳ ಜನರನ್ನು ಕ್ರೈಸ್ತ ಧರ್ಮಕ್ಕೆ

ಆಸೆ ಆಮಿಷಗಳನ್ನು ತೋರಿಸಿ ಮತಾಂತರ ಕಾರ್ಯದಲ್ಲಿ ತೊಡಗಿದ್ದವನು. ಲೇಕ್ ಹಿಲ್‌ರವರು ಸ್ಥಳೀಯ ಪುರೋಹಿತಶಾಹಿ ಸಂಸ್ಕೃತಿಯನ್ನು ಟೀಕಿಸುವುದರ ಮೂಲಕ ಅದರ ಮೌಢ್ಯತೆಯನ್ನು ಜನರಿಗೆ ತಿಳಿಸಿ ತಮ್ಮ ಧರ್ಮಕ್ಕೆ ಮತಾಂತರಗೊಳಿಸಲು ಪ್ರಯತ್ನಿಸುತ್ತಿದ್ದರು. ಅದರಲ್ಲಿ ಮುಖ್ಯವಾಗಿ ದೇವಯ್ಯ ಮುಂತಾದವರು. ಮತಾಂತರವೇ ತಮ್ಮ ಉದ್ದೇಶವಾದರೂ ಶಿಕ್ಷಣ, ಆರೋಗ್ಯ, ಸಮಾಜ ಸುಧಾರಣಾ ಕಾರ್ಯಗಳನ್ನು ಮಾಡುವುದರಲ್ಲಿ ಮುಂದಾಗಿದ್ದರು.

- **ಗಡ್ಡದಯ್ಯ :** ಕಲ್ಲೂರ ಬಳಿಯ ಗಡ್ಡದಯ್ಯ ವಿವೇಕಾನಂದರ ಅನುಯಾಯಿ. ಆತನ ಬಗ್ಗೆ ಅನೇಕ ಕತೆಗಳು ಜನಜನಿತವಾಗಿದ್ದವು. ಕ್ರೈಸ್ತ ಧರ್ಮದ ಮತಾಂತರಕ್ಕೆ ವಿರುದ್ಧವಾಗಿ ಹಿಂದೂ ಧರ್ಮದ ಉತ್ತಮ ತತ್ವಾದರ್ಶಗಳನ್ನು ಸಮರ್ಥಿಸುವ ವೇದಾಂತಿ. ದೊಡ್ಡಣ್ಣ ಹೆಗ್ಗಡೆಯವರು ತಿರುಪತಿಯಲ್ಲಿಯೇ ಅಸುನೀಗಿ ಚಲುವಯ್ಯನಾಗಿ ಹುಟ್ಟಿರುವುದನ್ನು, ರಂಗಮ್ಮನವರು ಗತಿಸಿ ಮುಕುಂದಯ್ಯ - ಚಿನ್ನಮ್ಮರಲ್ಲಿ ಮಗಳಾಗಿ ಹುಟ್ಟಿ ಚಲುವಯ್ಯನ ಕೈಹಿಡಿಯುವ ಸೂಚನೆಯನ್ನು ನೀಡುತ್ತಾನೆ.
- **ಕಿಟ್ಟೈತಾಳ :** ಮಂಜಾಭಟ್ಟರ ಕರಣಿಕ.
- **ನಾರಾಯಣ ಭಟ್ಟ :** ಮಂಜಾಭಟ್ಟರ ಮಗ. ತನ್ನ ತಂದೆಯ ಜೊತೆ ಸೇರಿ ಹೆಂಡತಿಯ ಕಾಲು ತಿರುಚಿದ ಹಾಗೂ ಕಿಟ್ಟೈತಾಳರ ಹೆಂಡತಿಯನ್ನು ಇಟ್ಟುಕೊಂಡ ಆರೋಪಗಳನ್ನು ಹೊತ್ತವ.

❑❑

### ಸೂಚಿತ ಟಿಪ್ಪಣಿ

ಕುವೆಂಪು ಕಥಾಸಾಹಿತ್ಯದಲ್ಲಿ ಮನುಷ್ಯಲೋಕ, ಪ್ರಾಣಿಲೋಕ, ಸಸ್ಯಲೋಕ, ಪಕ್ಷಿಲೋಕ, ಸ್ಥಳಲೋಕ -ಇವು ಪ್ರಧಾನ ಜೀವ ಸಂಕುಲಗಳಾಗಿ ಬರುತ್ತವೆ. ಇವರ ಕಾದಂಬರಿಗಳಲ್ಲಿ ಬರುವ ಮನುಷ್ಯಲೋಕದ ಪಾತ್ರಗಳ ವರ್ತನೆಗಳನ್ನು ಮೇಲೆ ಸಂಕ್ಷಿಪ್ತವಾಗಿ ದಾಖಲಿಸಲಾಗಿದೆ. ಹೀಗೆಯೇ ಇವರ ಕಾದಂಬರಿಗಳಲ್ಲಿ ಬರುವ ಬಗೆಬಗೆಯ ಪ್ರಾಣಿಗಳ, ಸಸ್ಯಗಳ, ಪಕ್ಷಿಗಳ ಮತ್ತು ಸ್ಥಳಗಳ ಬಗ್ಗೆ ವಿವರಣೆಗಳನ್ನು ದಾಖಲಿಸಿ ಅಧ್ಯಯನ ಮಾಡುವ ಸಾಧ್ಯತೆ ಇದೆ. ಇಂತಹ ಸಾಧ್ಯತೆಯನ್ನು ಈ ಮಹಾಪ್ರಬಂಧವು ಸೂಚಿಸುತ್ತದೆ.

# ೧೦

## ಸಮಾರೋಪ

ಪ್ರಸ್ತುತ ಮಹಾಪ್ರಬಂಧದಲ್ಲಿ ಕನ್ನಡ ಕಥನ ಪರಂಪರೆಗೆ ಕುವೆಂಪು ಅವರು ತಮ್ಮ ಕಾದಂಬರಿಗಳ ಮೂಲಕ ಸಲ್ಲಿಸಿರುವ ಅರ್ಥಪರಂಪರೆಗಳನ್ನು ವಿಶ್ಲೇಷಿಸುವ ಯತ್ನವನ್ನು ಮಾಡಲಾಗಿದೆ. ಕುವೆಂಪು ಅವರ 'ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವ ಕಥನದ ವೈವಿಧ್ಯತೆಯು ಓದುಗನನ್ನು ಮತ್ತೆ ಮತ್ತೆ ಓದಿಸಲು ಉದ್ದೀಪನಗೊಳಿಸುವ ಕ್ರಿಯೆ ಮಹತ್ವವಾದುದು. ಅವರ 'ರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ಕಾಣಿಸುವ ಕಥನದ ನಿರೂಪಣೆ ಕೂಡ ಕನ್ನಡ ಕಥನ ಪರಂಪರೆಯಲ್ಲಿಯೇ ವಿಶಿಷ್ಟವಾದುದು. ರಾಮಾಯಣದ ಹಳೆಯ ಕಥೆಗೆ ಹೊಸ ಜೀವತುಂಬಿ ಅದೊಂದು ಮಹಾಕಥನವನ್ನಾಗಿ ರೂಪಿಸಿರುವ ಕವಿ ಪ್ರತಿಭೆ ಸ್ವೋಪಜ್ಞತೆಯಿಂದ ಕೂಡಿದೆ. ಕುವೆಂಪು ಜನ್ಮತಃ ಕಥೆಗಾರ ಎಂಬುದನ್ನು ಈ ಕೃತಿಗಳು ಸಾಬೀತುಪಡಿಸುತ್ತವೆ. ಇದನ್ನು ಈ ಪ್ರಬಂಧದಲ್ಲಿ ವಿವೇಚನೆಗೆ ಒಳಗುಮಾಡಲಾಗಿದೆ.

ಕುವೆಂಪು ಅವರ 'ಹೆಗ್ಗಡಿತಿಯ ಕಾದಂಬರಿಯು ಸುಕ್ಷಿತ, ವಿದ್ಯಾವಂತ ತರುಣರಿಬ್ಬರು ಮಲೆನಾಡಿಗೆ ಪ್ರವೇಶಮಾಡುವುದರ ಮುಖಾಂತರ ಆರಂಭವಾಗುತ್ತದೆ. ಯುವಕರಾದ ಹೂವಯ್ಯ ಮತ್ತು ರಾಮಯ್ಯರ ವ್ಯಕ್ತಿತ್ವ ಮತ್ತು ಚಹರೆಗಳ ವರ್ಣನೆಯ ಮೂಲಕ ಕಾದಂಬರಿಕಾರರು ಈ ಕಥನವು ಮುಂದೆ ತೆಗೆದುಕೊಳ್ಳುವ ತೀರ್ಮಾನಗಳನ್ನು ಸೂಚ್ಯವಾಗಿ ತಿಳಿಸುವ ಭಾಗವನ್ನು ಇಲ್ಲಿ ದಾಖಲಿಸಬಹುದಾಗಿದೆ.

> "ಒಬ್ಬನು ಎತ್ತರವಾಗಿ ತೆಳ್ಳಗಿದ್ದನು. ಆದರೂ ಬಲಿಷ್ಠನೂ ಆರೋಗ್ಯ ದೃಢಕಾಯನೂ ಎಂಬುದು ಆತನ ಚಲನೆಯ ವೈಖರಿಯಿಂದ ತಿಳಿದುಬರುತ್ತಿತ್ತು. ಬಿಸಿಲಿನ ದಾವರ ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ ; ಕೊಡೆಯನ್ನೂ ಸೂಡಿರಲಿಲ್ಲ ; ಕ್ರಾಪು ಪೊದೆ ಪೊದೆಯಾಗಿ ತಲೆಯನ್ನೆಲ್ಲ ಒಂದು ತೆರನಾದ ಧೀರ ಸ್ವಚ್ಛಂದತೆಯಿಂದ ಆವರಿಸಿತ್ತು. ಸ್ವಲ್ಪ ಉದ್ದವೆಂದು ಹೇಳಬಹುದಾಗಿದ್ದ ಆತನ ತಲೆಗೂದಲು ಕಾಡಿಗೆಯಂತೆ ಕಪ್ಪಾಗಿ ಸ್ನಿಗ್ಧ ಕೋಮಲವಾಗಿ ಗುಂಗುರು ಗುಂಗುರಾಗಿತ್ತು.

ಒಂದೆರಡು ಮುಂಗುರುಳು ಬೆವರಿನಿಂದ ತೊಯ್ದು ಹಣೆಯ ಮೇಲೆ ಮೆತ್ತಿದಂತೆ ವಕ್ರವಿನ್ಯಾಸದಿಂದ ಶೋಭಿಸುತ್ತಿದ್ದುವು. ಆ ನಸುಗೆಂಪುಬಣ್ಣದ ಹಣೆಯ ಮೇಲೆ ಕಡುಗಪ್ಪು ಬಣ್ಣದ ಬಳ್ಳಿಗುರುಳು ರಮಣಿಯರ ಸೌಂದರ್ಯವನ್ನು ಮನಸ್ಸಿಗೆ ತರುವಂತಿತ್ತು. ಆದರೆ ಆ ಮುಖಭಂಗಿಯಲ್ಲಿ ಅಬಲತಾಭಾವ ಲೇಶವಾದರೂ ಇರಲಿಲ್ಲ. ಅದಕ್ಕೆ ಬದಲಾಗಿ ರಸಿಕತೆ ಮನಸ್ಸಿಗೆ ಬರುವಂತಿತ್ತು. ಹಣೆಗೆ ನೇರವಾಗಿ ತೆಗೆದಿದ್ದ ಬೈತಲೆ ಬಾಚದೆ ಇದ್ದುದರಿಂದ ಅಸ್ತವ್ಯಸ್ತವಾಗಿತ್ತು. ಕರಿಯ ಕೂದಲಿಗೆ ಎರಚಿದ "ಮಂಗಳೂರು ಪುಡಿ"ಯಂತೆ ಸಣ್ಣನೆ ನುಣ್ಣನೆ ಕೆಂಪುಧೂಳಿ ಹತ್ತಿ, ಆತನು ಮಾಡಿದ್ದ ಪ್ರಯಾಣದ ದೀರ್ಘತೆಯನ್ನೂ ಆ ಪ್ರಯಾಣದ ರಸ್ತೆಯ ಸ್ಥಿತಿಯನ್ನೂ ಸೂಚಿಸುತ್ತಿದ್ದವು. ಆತನ ಕಣ್ಣುಗಳು ಅಷ್ಟೇನೂ ಅತಿಶಯ ವಿಸ್ತಾರವಾಗಿರದಿದ್ದರೂ ಉಜ್ವಲವಾಗಿ, ಮರ್ಮಭೇದಿದೃಷ್ಟಿಯುತವಾಗಿ, ಯೋಗಿಯ ನಯನಗಳಂತೆ ಅಂತರ್ಮುಖವಾಗಿ, ತಿಳಿದವರಲ್ಲಿ ಗೌರವಭಾವವನ್ನೂ ತಿಳಿಯದವರಲ್ಲಿ ಮೋಹವನ್ನೂ ಉದ್ರೇಕಿಸುವಂತಿದ್ದುವು. ಮೂಗು ಉದ್ದವಾಗಿ ತುದಿಯಲ್ಲಿ ಶುಕಚಂಚುವಿನಂತೆ ಬಾಗಿತ್ತು; ಸೃಷ್ಟಿಯ ರಹಸ್ಯಗಳನ್ನು ಕುಟುಕಿ ಒಳಹೊಕ್ಕು ನೋಡುತ್ತೇನೆ ಎನ್ನುವಂತಿತ್ತು. ಅದರ ಮೇಲಿದ್ದ ಒಂದು ನಸುಹಸುರಾದ ನರವು ಸೌಂದರ್ಯಕ್ಕೆ ಸಬಲತೆ ಗಾಂಭೀರ್ಯಗಳನ್ನು ಕೊಡುತ್ತಿತ್ತು. ಓಷ್ಠವು ಬಾಗಿದ ಧನುಸ್ಸಿನಂತೆಯೂ ಅಧರವು ಬಿಲ್ಲಿನ ಸಹಾಯದಿಂದಲೇ ಮಾತ್ರ ತನ್ನ ಶಿಥಿಲತೆಯನ್ನು ಪರಿಹರಿಸಿಕೊಂಡು ಪೌರುಷಯುಕ್ತವಾಗಿರುವ ಕೆಂಬಣ್ಣದ ಹೆದೆಯಂತೆಯೂ ಒಂದನ್ನೊಂದು ಆಶ್ರಯಿಸಿ, ಒಂದನ್ನೊಂದು ಆಲಿಂಗಿಸಿ, ಒಂದಕ್ಕೊಂದು ಅವಲಂಬನವಾಗಿ ಅಪ್ರತಿಹತವಾಗಿದ್ದವು. ಎಂದರೆ, ಆ ಧನಸ್ಸು ಸುರಚಾಪಕ್ಕಿಂತಲೂ ಹೆಚ್ಚಾಗಿ ಹರಚಾಪವನ್ನೇ ಹೋಲುವಂತಿತು. ಕೆನ್ನೆಗಳೂ ತುಟಿಗಳಂತೆಯೆ ಮನೋಹರವಾಗಿದ್ದರೂ ಕೋಮಲವಾಗಿರಲಿಲ್ಲ. ಪತಂಗಗಳನ್ನು ಆಕರ್ಷಿಸುವ ದೀಪದ್ಯುತಿಯಂತಿದ್ದುವು. ಗಲ್ಲವು ಸಣ್ಣಗೆ ದುಂಡಗೆ ಮೊನಚಾಗಿದ್ದು ಕಠೋರ ಸಾಧನೆಯನ್ನೂ ಒಂದು ವಿಧವಾದ ಹಠವನ್ನೂ ಮನಸ್ಸಿಗೆ ತರುತ್ತಿದ್ದುವು. ತಾರುಣ್ಯ ಯೌವನಗಳ ಮಧ್ಯೆ ನಿಂತು, ಆ ಎರಡು ಅವಸ್ಥೆಗಳ ಶ್ರೇಷ್ಠಾಂಶಗಳನ್ನು ಒಳಗೊಂಡಿದ್ದ ಆತನ ದೇಹವು ಒಂದು ಉದ್ದವಾದ ಷರ್ಟಿನಿಂದ ಆವೃತವಾಗಿ, ವಿಶಾಲವಾಗಿ ಉಬ್ಬಿದ ಉರಪ್ರದೇಶವನ್ನು ಪ್ರದರ್ಶಿಸುತ್ತಿತ್ತು. ಆತನು ಹಾಕಿಕೊಂಡಿದ್ದ ಖಾದಿಬಟ್ಟೆಯ ಷರ್ಟೂ ಅಡ್ಡಲಾಗಿ ಉಟ್ಟಿದ್ದ ಪಂಚೆಯೂ ಪ್ರಯಾಣಧೂಳಿನಿಂದ ಮಲಿನವಾಗಿದ್ದವು. ಒಟ್ಟಿನಲ್ಲಿ ಪೌರುಷ, ಆಧ್ಯಾತ್ಮಿಕತೆ, ಅಂತರ್ಮುಖತೆ, ರಸಿಕತೆ, ಮೇಧಾಶಕ್ತಿ, ಇತರರಿಗೆ ಕಷ್ಟವಿಲ್ಲದಿದ್ದರೂ ತನಗೆ

ಕಷ್ಟಕರವಾಗಬಹುದಾದ ಹಠಭಾವ, ಇವುಗಳಿಂದ ಮೆರೆಯುತ್ತಿದ್ದ ಆತನು ಭವ್ಯ ವ್ಯಕ್ತಿಯಾಗಿದ್ದನು. ಜೊತೆಯಲ್ಲಿದ್ದ ಕಿರಿಯವನಲ್ಲಿ ಇದ್ದಂತೆ ಆತನಲ್ಲಿ ಯಾವ ವಿಧವಾದ ಭೋಗ ಸಾಮಗ್ರಿಯೂ ಕಂಡುಬರುತ್ತಿರಲಿಲ್ಲ. ಆತನ ಸರಳ ಸೌಂದರ್ಯವೇ ಒಂದು ಗಂಭೀರ ಭೋಗವಾಗಿತ್ತು.

ಆತನ ಜೊತೆಯಲ್ಲಿದ್ದ ಕಿರಿಯ ತರುಣನಲ್ಲಿ ಅಷ್ಟೇನೂ ವಿಶೇಷ ವ್ಯಕ್ತಿತ್ವವಿರಲಿಲ್ಲ. ಆತನು ಸ್ವಲ್ಪ ಕುಳ್ಳಾಗಿ ದಪ್ಪವಾಗಿ ಸುಖಾಪೇಕ್ಷ ಹೆಚ್ಚಾಗಿರುವವನಂತೆ ಕಂಡುಬರುತ್ತಿದ್ದನು. ಆತನೂ ಖಾದಿ ಬಟ್ಟೆಯನ್ನೆ ಹಾಕಿಕೊಂಡಿದ್ದನು; ತಲೆಗೊಂದು ಬಿಳಿಯ ಖಾದಿ ಟೋಪಿ, ಮೈಗೆ ನೀಲಿಬಣ್ಣದ ಕೋಟು, ಕೋಟಿನ ಕಿರುಕಿಸೆಯಲ್ಲಿ ಒಂದು ಫೌಂಟನ್ ಪೆನ್, ಕೈಯಲ್ಲೊಂದು ಕೈ ಗಡಿಯಾರ, ಹೆಚ್ಚು ಎನ್ನಬಹುದಾದ ಅಂಚಿನ ಖಾದಿ ಪಂಚೆ. ವದನವು ಸರಳತೆ ಸೌಶೀಲ್ಯಗಳಿಂದ ಕೂಡಿ ಮುಗ್ಧವಾಗಿತ್ತು. ದೃಢ ಮನಸ್ಸಾಗಲಿ ದಕ್ಷತೆಯಾಗಲಿ ಮೂರ್ತಿಯಲ್ಲಿ ತೋರಿಬರುತ್ತಿರಲಿಲ್ಲ. (ಕಾನೂರು ಹೆಗ್ಗಡಿತಿ, ಪುಟ: ೧ - ೨)

ಮೊದಲ ಪ್ಯಾರಾದಲ್ಲಿ ಹೂವಯ್ಯನ ವರ್ಣನೆಯಿದ್ದರೆ ಎರಡನೇ ಪ್ಯಾರಾದಲ್ಲಿ ರಾಮಯ್ಯನ ವರ್ಣನೆಯಿದೆ. ಇವರಿಬ್ಬರು ಈ ದೀರ್ಘ ಕಥನ ಮುಗಿಯುವ ಹೊತ್ತಿಗೆ ಈ ಪ್ಯಾರಾಗಳಲ್ಲಿ ವರ್ಣಿಸಿರುವ ರೀತಿಯಲ್ಲಿಯೇ ತಮ್ಮ ಬದುಕಿನ ಕೊನೆಯ ಘಟ್ಟವನ್ನು ತಲುಪುತ್ತಾರೆ. ಈ ಕಾದಂಬರಿಯಲ್ಲಿ ಕುಟುಂಬದ ವಿಘಟನೆಯ ಸ್ವರೂಪವನ್ನು ಕಥನವಾಗಿಸುತ್ತಾರೆ. ಈ ಕಾದಂಬರಿಯು ಮುಖ್ಯವಾಗಿ ಪರಿಸರ ಕೇಂದ್ರಿತವಾಗಿದೆ. ಕಾದಂಬರಿಕಾರರು ತಮ್ಮ ವ್ಯಕ್ತಿ ಪ್ರತಿಭೆಯ ಹಂತದಲ್ಲಿ ಸಮೃದ್ಧವಾದ ಪರಿಸರ ಮತ್ತು ಸಾಮಾಜಿಕ ವಸ್ತುವನ್ನು ಚಾರಿತ್ರಿಕವಾಗಿ ಅರ್ಥೈಸುವುದನ್ನು ಈ ಪ್ರಬಂಧದಲ್ಲಿ ಗುರುತಿಸಲಾಗಿದೆ. ಹೂವಯ್ಯನ ವ್ಯಕ್ತಿತ್ವದ ಅನಾವರಣ ಈ ಕಾದಂಬರಿಯ ಮುಖ್ಯಕೇಂದ್ರ ಪ್ರಜ್ಞೆ. ಅವನ ಸೌಂದರ್ಯ ಸಂವೇದನೆ, ಅವನ ಆಧ್ಯಾತ್ಮಿಕ ಹುಡುಕಾಟ, ಅವನ ನೈತಿಕ ಗೊಂದಲ, ಪ್ರಕೃತಿಯ ಮೇಲೆ ಅವನ ಸ್ವಾತಂತ್ರ್ಯದ ಸ್ಥಾಪನೆ, ಬದುಕಿನ ತಾತ್ವಿಕ ಹುಡುಕಾಟ ಮತ್ತು ಸಮಾಜದ ಜೊತೆ ಅವನ ಸಂಘರ್ಷ ಇವೆಲ್ಲ ಈ ಕಾದಂಬರಿಯಲ್ಲಿ ಸಹಜವಾಗಿ ನಿರೂಪಿತವಾಗಿವೆ. ಇದರ ಜೊತೆಗೆ ಈ ಕಾದಂಬರಿಯು ನಾಗಮ್ಮ, ಸುಬ್ಬಮ್ಮ, ಸೀತೆ ಈ ಮೂವರು ಮಹಿಳೆಯರನ್ನು ಕೇಂದ್ರೀಕರಿಸಿದೆ. ನಾಗಮ್ಮ ಹೂವಯ್ಯನ ತಾಯಿ. ಆಕೆ ಸಾಮಾನ್ಯ ಒಕ್ಕಲಿಗ ಕುಟುಂಬಕ್ಕೆ ಹೇಳಿಮಾಡಿಸಿದಂತಹ ಮಹಿಳೆ; ಕಾನೂರಿಗೆ ಮದುವೆಯಾಗಿ ಬಂದವಳು. ಸುಬ್ಬಮ್ಮ ಕೂಡ ಕಾನೂರಿಗೆ ಮೂರನೆಯ ಹೆಂಡತಿಯಾಗಿ ಬಂದವಳು. ಬಡತನದಿಂದ ಬಂದ ಹೆಣ್ಣಾದರೂ ಒರಟು ಸ್ವಭಾವದವಳು. ಸೀತೆ ಕೂಡ ಕಾನೂರಿಗೆ ಮದುವೆಯಾಗಿ ಬಂದವಳು. ಈ ಮೂವರು ಮಹಿಳೆಯರ ಕೌಟುಂಬಿಕ ಜೀವನಕ್ರಮ ವೈವಿಧ್ಯತೆಯಿಂದ ಕೂಡಿದೆ.ಈ ಕಥನಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಕಾದಂಬರಿಯಲ್ಲಿ ಬರುವ ವಿವಿಧ ಬಗೆಯ ಮದುವೆಗಳು, ಕುಟುಂಬದ ವಿಘಟನೆಗಳು, ಮತಾಂತರ ಸಮಸ್ಯೆಗಳು, ಮದ್ಯಪಾನ ಸಮಸ್ಯೆಗಳ ಹಾಗೂ ಪುರೋಹಿತಶಾಹಿಯ ಪರಿಣಾಮಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕನ್ನಡದ ಈ ಕಾದಂಬರಿಯನ್ನು ಕುರಿತು ಅನೇಕ ವಿಮರ್ಶಕರು ಇದು ಮಹಾಕಾವ್ಯ, ಮಹಾಕಾದಂಬರಿ ಎಂದೆಲ್ಲ ಕರೆದಿದ್ದಾರೆ. ರಂ.ಶ್ರೀ. ಮುಗಳಿಯವರು ಇದನ್ನು ಕುರಿತು ಈ ರೀತಿ ಅಭಿಪ್ರಯಾಪಡುತ್ತಾರೆ:

"ಮಲೆನಾಡಿನ ಚರಾಚರ ಸೃಷ್ಟಿಯ ಸಾರವನ್ನಿಲ್ಲಿ ಸೆರೆಹಿಡಿಯಲು ಪುಟ್ಟಪ್ಪನವರು ಮಾಡಿದ ಸಾಹಸವು ಅದ್ಭುತವೂ ರಮ್ಯವೂ ಆಗಿರುತ್ತದೆ. ಆಯಾ ಪ್ರದೇಶದ ಜೀವನದ ವಿವಿಧತೆಯನ್ನು ಜಟಿಲತೆಯನ್ನು ತೋರಿಸುವ ಹರವು ಇದರಲ್ಲಿ ಬಂದಕಾರಣ ಮಹಾ ಕಾದಂಬರಿ ಎಂಬ ಬಿರುದಿಗೆ ಇದು ಅರ್ಹವಾಗಿದೆ." ಹಾಗೆಯೇ ಕುರ್ತುಕೋಟಿಯವರು ಹೆಗ್ಗಡಿತಿ ಕಾದಂಬರಿಯನ್ನು ಕುರಿತು ಹಲವಾರು ಸಂದರ್ಭಗಳಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಅವರ ಅನೇಕ ಸಲದ ಓದುಗಳಿಗೆ ಈ ಕಾದಂಬರಿಯು ಅನೇಕ ಕಥನದ ಅರ್ಥಪರಂಪರೆಗಳನ್ನು ಬಿಟ್ಟುಕೊಟ್ಟಿರುವುದರ ಬಗ್ಗೆ ಅವರು ಪ್ರತಿಕ್ರಿಯಿಸಿದ್ದಾರೆ. ಅವರು ಕೂಡ ಇದನ್ನು ಕುರಿತು, "ಮುಖ್ಯವಾಗಿ ಇದು ಒಂದು ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಮನುಷ್ಯನ ಕ್ರಿಯೆಗಳನ್ನು ಅವುಗಳ ಸಹಜತೆಯಲ್ಲೆ ವರ್ಣಿಸುವ ಕೃತಿ ಇದಾಗಿದೆ. ಈ ಕಾದಂಬರಿಯಲ್ಲಿ ಉಕ್ಕುವ ಚೈತನ್ಯ ಪ್ರವಾಹ ಬೇರೆ ಯಾವ ಕನ್ನಡ ಕಾದಂಬರಿಯಲ್ಲೂ ಇಲ್ಲ. ಕುವೆಂಪು ಬರೆದ ಮಹಾಕಾವ್ಯ ಇದೊಂದೇ ಎನ್ನುವಂತಾಗುತ್ತದೆ" ಎಂದು ಅಭಿಪ್ರಾಯ ಪಡುತ್ತಾರೆ. ಕುವೆಂಪು ಅವರ ಎರಡೂ ಕಾದಂಬರಿಗಳ ಬಗ್ಗೆ ತೀವ್ರವಾದ ವಾದವನ್ನು ಹೂಡಿದವರಲ್ಲಿ ಎಂ.ಜಿ.ಕೆ. ಒಬ್ಬರು. ಕುವೆಂಪು ಕಾದಂಬರಿಗಳ ಬಂಧ ಮತ್ತು ಭಾಷೆಯ ಬಗ್ಗೆ ಅನೇಕ ತಕರಾರುಗಳನ್ನು ಎತ್ತಿದವರು ಇವರು. ಕುವೆಂಪು ಅವರ 'ಹೆಗ್ಗಡಿತಿ' ಕಾದಂಬರಿಯ ಕೆಲವು ಮಹತ್ವದ ಗುಣಗಳನ್ನು ಮೆಚ್ಚಿಕೊಂಡು, ಅದರ ಸೋಲಿನ ಬಗ್ಗೆ ಕಾದಂಬರಿಯ ಹೊರಗೆ ಕಾರಣಗಳನ್ನು ಅವರು ಹುಡುಕುತ್ತಾ. "ಕುವೆಂಪು ಕನ್ನಡದ ಅತ್ಯುತ್ತಮ ಕಾದಂಬರಿಕಾರರಾಗಬಹುದಿತ್ತು. ಆದರೆ ಸೋತರು. ಇಂತಹ ಸೋಲು ಹತ್ತೊಂಬತ್ತನೆಯ ಶತಮಾನದಲ್ಲಿ ಶುರುವಾದ ಸಾಮಾಜಿಕ ಬದಲಾವಣೆಯನ್ನು ನಾವಿನ್ನೂ ಅರಗಿಸಿಕೊಂಡಿಲ್ಲ" ಎಂಬ ಅವರ ಶಂಕೆಯು ಅರ್ಥಪೂರ್ಣವಾಗಿದೆ. ಕು.ಶಿ. ಹರಿದಾಸಭಟ್ಟರು ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಅವರ 'ರಾಮಾಯಣ ದರ್ಶನಂ'ನಷ್ಟೇ ಮಹತ್ವದ ಕೃತಿ" ಎಂದು ಹೇಳಿದರೆ, ಪ್ರೊ. ಎಚ್.ಜೆ. ಲಕ್ಕಪ್ಪಗೌಡರವರು "ಕುವೆಂಪು ಅವರ ಎರಡೂ ಕಾದಂಬರಿಗಳು ಮಲೆನಾಡಿನ ಮಹಾಜೀವನವನ್ನು ಕುರಿತ ಮಹಾಭಾರತಗಳು" ಎಂದು ಅಭಿಪ್ರಾಯಪಡುತ್ತಾರೆ.

೧೯ನೆಯ ಶತಮಾನದ ಆರಂಭದ ಐತಿಹಾಸಿಕ ಭಾರತವನ್ನು ಸಾಹಿತ್ಯ ಕೃತಿಯೊಳಗೆ ಕಲೆಯಾಗಿಸುವ, ಕಲೆಯನ್ನು ಇತಿಹಾಸಗೊಳಿಸುವ, ಇತಿಹಾಸವನ್ನು ಸಾಂಸ್ಕೃತಿಕ ಮೌಲ್ಯಗಳನ್ನಾಗಿ ಪರಿವರ್ತಿಸುವ ಸವಾಲು ಕುವೆಂಪು ಅವರಂತಹ ಅನೇಕ ಸೃಜನಶೀಲ ಲೇಖಕರಿಗೆ ಎದುರಾಗಿರುವುದು ಸಹಜ. ಚರಿತ್ರೆ ಮತ್ತು ಸಾಹಿತ್ಯ ಕೃತಿಯ ಸಂಬಂಧವನ್ನು ಗ್ರಹಿಸುವ ಮತ್ತು ವಿವರಿಸುವ ವಿಧಾನವನ್ನು ಕುರಿತು ಡಾ. ಕೆ.ವಿ. ನಾರಾಯಣರವರು ಹೇಳುವ ಅಭಿಪ್ರಾಯ ಹೀಗಿದೆ.

".....ಚರಿತ್ರೆಯನ್ನು ಸಾಹಿತ್ಯಕೃತಿಗಳ ಮೂಲಕ ಗ್ರಹಿಸಬೇಕೆಂಬ ಮಾತೂ, ಚರಿತ್ರೆಯ ಮೂಲಕ ಸಾಹಿತ್ಯ ಕೃತಿಗಳನ್ನು ಗ್ರಹಿಸಬೇಕೆಂಬ ಮಾತೂ ಒಟ್ಟೊಟ್ಟಿಗೆ ಹೋಗಲಾರದು.

ಕೆಲವು ಕಡೆ ಸಾಹಿತ್ಯಕೃತಿಗಳು ಕೇವಲ ಆಕರಗಳಾದರೆ, ಮತ್ತೆ ಕೆಲವು ಕಡೆ ಅವುಗಳೇ ಮುಖ್ಯ ಅಧ್ಯಯನದ ಗುರಿಯಾಗುತ್ತವೆ. ಆದರೂ ಇಡೀ ಬರವಣಿಗೆಯಲ್ಲಿ ಸಾಹಿತ್ಯ ಕೃತಿಗಳನ್ನು ತಾವು ಗ್ರಹಿಸಿದ 'ಚರಿತ್ರೆ'ಯ ಚೌಕಟ್ಟಿನ ಹಿನ್ನೆಲೆಯಲ್ಲಿ ವಿವರಿಸುವ ಕ್ರಮಕ್ಕೆ ಹೆಚ್ಚಿನ ಒತ್ತು ಬಿದ್ದಿರುವುದನ್ನು ಗಮನಿಸಬಹುದು. ಹೀಗಾಗಿ ಪರೋಕ್ಷ ನೆಲೆಯಿಂದ

ಈ ಸಾಹಿತ್ಯದ ಚರಿತ್ರೆಯ ನೆಲೆಯನ್ನು 'ಚರಿತ್ರೆಯ ಮೂಲಕ ಕೃತಿ' ಎಂದು ತಿಳಿಯಲು ಸಾಧ್ಯವಾಗಿದೆ." (ನಾರಾಯಣ ಕೆ.ವಿ, ಬೇರುಕಾಂಡ ಚಿಗರು, ವಿವೇಕ ಪ್ರಕಾಶನ, ಬೆಂಗಳೂರು, ೧೯೯೭, ಪುಟ: ೧೫) ಎಂದು ಅಭಿಪ್ರಾಯಪಡುತ್ತಾರೆ.

ಸಾಹಿತ್ಯ ಕೃತಿಯೊಂದನ್ನು ಅಧ್ಯಯನ ಮಾಡುವಾಗ ಹೊರಗಿನ ಚರಿತ್ರೆಯ ಸಂಗತಿಗಳಿಂದ ಪ್ರವೇಶಿಸುವುದು ಸರಳ ಗ್ರಹಿಕೆಯಾಗುತ್ತದೆ. ಹಾಗಾಗಿ ಇದರಿಂದ ತಪ್ಪಿಸಿಕೊಳ್ಳಲು ಕೃತಿಯೊಳಗಿನಿಂದಲೇ ರೂಪುಗೊಳ್ಳುವ ವಿಚಾರಗಳನ್ನು ಶೋಧಿಸಿಕೊಳ್ಳುವುದು ಒಳ್ಳೆಯ ಕ್ರಮವೆಂದು ಕೆ.ವಿ. ನಾರಾಯಣ ಅವರು ಸಾಹಿತ್ಯ ಕೃತಿಯೊಂದರ ಪ್ರವೇಶಕ್ಕೆ ಒಂದು ಮಾರ್ಗವನ್ನು ಸೂಚಿಸುತ್ತಾರೆ. 'ಚರಿತ್ರೆಯನ್ನು ಸಾಹಿತ್ಯ ಕೃತಿಗಳ ಮೂಲಕ ಗ್ರಹಿಸಬೇಕೆಂಬ ಮಾತು, ಚರಿತ್ರೆಯ ಮೂಲಕ ಸಾಹಿತ್ಯ ಕೃತಿಗಳನ್ನು ಗ್ರಹಿಸಬೇಕೆಂಬ ಮಾತೂ ಒಟ್ಟೊಟ್ಟಿಗೆ ಹೋಗಲಾರದು' ಎಂಬ ಮಾತು ಅಕ್ಕನ ವಚನವೊಂದರ ಸಾಲನ್ನು ನೆನಪಿಸುತ್ತದೆ. "ಒಳಗಣ ಗಂಡನವ್ವ ಹೊರಗಣ ಮಿಂಡನವ್ವ ಎರಡೂ ನಡೆಸಲು ಬಾರದವ್ವ" ಎಂಬಂತೆಯೇ ಚರಿತ್ರೆಯ ಮೂಲಕ ಸಾಹಿತ್ಯ ಕೃತಿಯೊಂದನ್ನು ಗ್ರಹಿಸುವ ಕ್ರಮ ಆಗಬಾರದೆಂಬ ಆಶಯ ಈ ಮೇಲಿನ ಉದ್ಧರಣೆಯಿಂದ ತಿಳಿಯಬಹುದಾಗಿದೆ.

ಕುವೆಂಪು ಅವರು ಹತ್ತೊಂಬತ್ತನೆಯ ಶತಮಾನದ ಅಂತ್ಯ ಮತ್ತು ಇಪ್ಪತ್ತನೆಯ ಶತಮಾನದ ಆದಿಯ ಚರಿತ್ರೆಯನ್ನು ಸಾಹಿತ್ಯ ಕೃತಿಯೊಳಗೆ ಅರಗಿಸಿಕೊಳ್ಳುವ ಕ್ರಮ ಮತ್ತು ಅದಕ್ಕೆ ತೋರಿರುವ ಪ್ರತಿರೋಧವನ್ನು ಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಗುಪಡಿಸಲಾಗಿದೆ. ಅವರು ಕಾದಂಬರಿಯ ಒಟ್ಟು ಅನುಭವವನ್ನು ಅರ್ಥೈಸಲು ಕಂಡುಕೊಂಡಿರುವ ಹೊಸ ವೈಚಾರಿಕತೆ ಮತ್ತು ಬೌದ್ಧಿಕತೆಯ ಚಿಂತನೆಯ ನೆಲೆಗಳನ್ನು ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ. ಇಲ್ಲಿ ಕುವೆಂಪು ಅವರ ಮುಖ್ಯ ಸಾಹಿತ್ಯಿಕ ಪರಂಪರೆಯನ್ನು ಕನ್ನಡ ಕಥನ ಪರಂಪರೆಯ ಜೊತೆಗೆ ಜೋಡಿಸಿ ನೋಡಲಾಗಿದೆ. 'ಹೆಗ್ಗಡಿತಿ' ಕಾದಂಬರಿಯಲ್ಲಿ ಒಳ ಜಗತ್ತನ್ನು ಕುರಿತು ರಾಜೇಂದ್ರ ಚೆನ್ನಿಯರು ಪಡುವ ಅಭಿಪ್ರಾಯ ಹೆಚ್ಚು ಅರ್ಥಪೂರ್ಣವಾಗಿದೆ. "ಅಮೂರ್ತ ಮಾನವತಾವಾದ ಇಡೀ ಮನುಷ್ಯ ಕುಲದ ಬಗ್ಗೆ ಭಾವುಕವಾದ ಅನುಕಂಪ ತೋರಿಸುತ್ತದೆ. ಆದರೆ ಪ್ರತ್ಯೇಕ ವ್ಯಕ್ತಿಗಳನ್ನು ಅವರ ಎಲ್ಲ ವಕ್ರತೆಗಳೊಂದಿಗೆ ಅರ್ಥಮಾಡಿಕೊಳ್ಳಬೇಕಾದರೆ ವಸ್ತುನಿಷ್ಠ ಪ್ರೇಮದ ಅವಶ್ಯಕತೆ ಇದೆ. ಕುವೆಂಪು ನಮ್ಮ ಸಾಹಿತ್ಯಪರಂಪರೆಗೆ ಮುಖ್ಯವಾಗಿರುವುದು ಈ ಕಾರಣಕ್ಕಾಗಿಯೇ. ಅವರ ಶ್ರೀಮಂತ ಕಲಾಸೃಷ್ಟಿ ಮನುಷ್ಯನ ಬಗೆಗಿನ ತೆಳುವಾದ ಮನೋಭಾವಗಳನ್ನು ಕೊಚ್ಚಿಹಾಕುವಂತಹ ಗಾಢ ಶ್ರದ್ಧೆಯಿಂದ ಕೂಡಿದೆ. ಅವರ ಎಲ್ಲ ಪಾತ್ರಗಳೂ ರಕ್ತಮಾಂಸದಿಂದ ಕೂಡಿದ ಮನುಷ್ಯರು, ಯಾವುದೇ ಒಂದು ಧೋರಣೆಯನ್ನು ಸಮರ್ಥಿಸಲು ಸೃಷ್ಟಿಸುವ ಬೊಂಬೆಗಳಲ್ಲ. 'ಕಾನೂರು ಹೆಗ್ಗಡಿತಿ' ಕಾದಂಬರಿಯ ನಿರೂಪಕನ ಹೇಳಿಕೆಗಳನ್ನು ಗಮನಿಸಿದರೆ ಮಾನವೀಯ ಅನನ್ಯತೆಯನ್ನು ದಾಖಲಿಸಲು ಅವರು ವಿಜ್ಞಾನ, ಮನಃಶಾಸ್ತ್ರ, ವರ್ಗ - ವರ್ಣಗಳ ತೀವ್ರ ಎಚ್ಚರ ಇವುಗಳನ್ನೆಲ್ಲ ಬಳಸಿಕೊಳ್ಳುವುದು ಸ್ಪಷ್ಟವಾಗುತ್ತದೆ." (ರಾಜೇಂದ್ರ ಚೆನ್ನಿ, 'ಅಧ್ಯಯನ', ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ, ೧೯೮೭, ಪುಟ: ೫೮)

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಜಾಗತಿಕಮಟ್ಟದ ಕಥನ ಪರಂಪರೆಗೆ ಸೇರುವ ಕೃತಿಯಾಗಿದೆ. ಹೆಗ್ಗಡಿತಿ, ಗ್ರಾಮಾಯಾಣ, ಮರಳಿಮಣ್ಣಿಗೆ ಈ ಕಾದಂಬರಿಗಳು ಬರೀ ಕನ್ನಡ ಕಥನ ಪರಂಪರೆಗೆ ಸೇರಿದ ಕೃತಿಗಳಾಗದೆ ಜಾಗತಿಕ ಮಟ್ಟದಲ್ಲಿ ನಿಲ್ಲುವ ಮಹತ್ವದ ಕಾದಂಬರಿಗಳಾಗಿವೆ. 'ಮದುಮಗಳು' ಒಂದು ಮಾನವಕೇಂದ್ರಿತ

ಕಾದಂಬರಿಯಾಗಿದೆ. ಮನುಷ್ಯ ಮನುಷ್ಯರ ನಡುವಿನ ಸಂಬಂಧಗಳನ್ನು ಕಲೆಯಾಗಿಸುವ ಮತ್ತು ಇತಿಹಾಸವಾಗಿಸುವ ಇದರ ಕಥನದ ಪ್ರಕ್ರಿಯೆಯನ್ನು ಕುರಿತು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ದೇವನೂರು ಮಹಾದೇವ ಅವರು ಹೇಳುವ ಹಾಗೆ ಇದು, " ಈ ಶತಮಾನದ ಅಂಚಿನಲ್ಲಿ ನಿಂತು ನೋಡಿದರೆ ಕನ್ನಡ ಸಾಹಿತ್ಯ ಕಾದಂಬರಿ ಪ್ರಕಾರದಲ್ಲಿ ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಒಂದು ಶ್ರೇಷ್ಠ ಕೃತಿ". ಮಳೆಗಾಲದಲ್ಲಿ ಈ ಕಾದಂಬರಿಯು ಆರಂಭವಾಗಿ ಸುಗ್ಗಿಯ ಕಾಲದಲ್ಲಿ ಈ ಕಾದಂಬರಿಯು ಮುಗಿಯುತ್ತದೆ. ಇದರ ನಡುವೆ ಮಲೆನಾಡಿನ ಮದುಮಕ್ಕಳ ಸಾಹಸದ ಕಥೆ ನಿರೂಪಿತವಾಗಿದೆ.

ಒಂದು ರೀತಿಯಲ್ಲಿ ಗುತ್ತಿಯ ಸಾಹಸ ಪ್ರಧಾನವಾದ ಕಥಾನಕ; ಮತ್ತು ಮುಕುಂದಯ್ಯ - ಚಿನ್ನಮ್ಮ, ಐತ-ಪೀಂಚಲು, ಗುತ್ತಿ - ತಿಮ್ಮಿ ಮುಂತಾದ ಹಲವು ಜೋಡಿಗಳ ಪ್ರೇಮ, ಪ್ರಣಯ ಹಾಗೂ ಸಂಘರ್ಷದ ಮಹಾಕಥನ ಇದು. ಕಾದಂಬರಿ ಮಳೆಗಾಲದಿಂದ ಆರಂಭವಾಗುವುದು ಮಲೆನಾಡಿನಲ್ಲಿ ಅನಿವಾರ್ಯವೇ. ಕಾರಂತರ 'ಮರಳಿಮಣ್ಣಿಗೆ' ಕಾದಂಬರಿ ಕೂಡ ದಟ್ಟ ಮಳೆಯಲ್ಲಿ ನೆರವೇರುವ ಮದುವೆಯ ಮುಖಾಂತರವೇ; 'ಮದುಮಗಳು' ಕಾದಂಬರಿಯ ಕೊನೆಯಲ್ಲಿ ಚಿನ್ನಮ್ಮ ಮುಟ್ಟಾಗಿ ಮೂರುದಿನ ಕೂರುವ ವ್ಯಕ್ತಿಚಿತ್ರದ ಮೂಲಕ ಕಾದಂಬರಿ ಮುಗಿಯುತ್ತದೆ. ಅವಳ ಈ ಜೈವಿಕ ಕ್ರಿಯೆ ಋತುಚಕ್ರವನ್ನು ಮುಂದುವರಿಸುವ ಕಥನವಾಗಿ ಕಾಣಿಸುತ್ತದೆ.

'ಮದುಮಗಳು' ಕಾದಂಬರಿಯ ಆರಂಭವು ಹೆಗ್ಗಡೆ ಮನೆಯ ಆಳು ಗುತ್ತಿ ತನ್ನ ಪ್ರೀತಿಯ ತಿಮ್ಮಿಯನ್ನು ಅಪಹರಿಸಿ ಬರುವ ಸಾಹಸದ ವರ್ಣನೆಯಿಂದ ಆರಂಭವಾಗುತ್ತದೆ.

> "ಮಳೆಗಾಲದ ಪ್ರಾರಂಭಸಮಯವಾಗಿದ್ದರೂ ಮಲೆನಾಡು ಭಯಂಕರವಾಗಿದ್ದ ಸಿಂಬಾವಿ, ಸೀತೂರು, ಲಕ್ಕುಂದ ಈ ಕಡೆಗಳಲ್ಲಿ ಇಂಬಳದ ಕಾಟವೂ ಹೆಚ್ಚಾಗಿಯೆ ಶುರುವಾಗಿತ್ತು. ಗುತ್ತಿ ಅಲ್ಲಲ್ಲಿಯೆ ನಿಂತು ಕಣ್ಣಿಗೆ ಕಂಡ ಇಂಬಳಗಳನ್ನು ಕಾಲಿನಿಂದ ಕಿತ್ತೊಗೆಯುತ್ತಾ, ಅದೇ ಕೈಯಲ್ಲಿಯೇ ಜೇಬಿನಿಂದ ಎಲೆಯಡಕೆ ಸುಣ್ಣ ಹೊಗೆಸೊಪ್ಪುಗಳನ್ನು ತೆಗೆದು ಬಾಯಿಗೆ ಹಾಕಿಕೊಳ್ಳುತ್ತಾ, ಕುಳ್ಳಗಾಲುಗಳನ್ನು ಬಿರಬಿರನೆ ಬೀಸಿ ಬೀಸಿ ಹಾಕುತ್ತಾ, ಸೀತೂರು ಗುಡ್ಡದ ಹಳುವಿಡಿದ ಕಾಡುದಾರಿಯಲ್ಲಿ ಮುಂಬರಿದನು. ಕತ್ತಲೆ ಬರುಬರುತ್ತಾ ದಟ್ಟವಾಯ್ತು. ಜೀರ್ದುಂಬಿಗಳ ಜೀರುದನಿ ಘೋರವಾಯ್ತು. ತಾನು ನಡೆಯುತ್ತಿದ್ದ ಹಾದಿಯಾಗಲಿ ತನ್ನ ಕಾಲುಗಳಾಗಲಿ ನೆತ್ತರು ಹೀರುತ್ತಿದ್ದ ಇಂಬಳಗಳಾಗಲಿ ಒಂದಿನಿತೂ ಕಾಣಿಸುವಂತಿರಲಿಲ್ಲ. ಗುತ್ತಿ ಅಂದಾಜಿನ ಮೇಲೆ ಕಾಲುಹಾಕುತ್ತಿದ್ದನು. ನಾಗರಿಕರಿಗೆ ಭೀಕರವಾಗಿ ಕಾಣುವ ವರ್ಷಾಕಾಲದ ಆ ಭಯಂಕರ ಪರ್ವತಾರಣ್ಯದ ರುದ್ರಪ್ರಕೃತಿ ಅವನಿಗೆ ಬಹುಕಾಲದ ಪರಿಚಯದಿಂದ ಸಾಧಾರಣವಾಗಿತ್ತು. ಅವನೂ ಆ ಪ್ರಕೃತಿಯ ಒಂದಂಶವಾಗಿದ್ದನು: ಬೆಟ್ಟದಲ್ಲಿ ಬಂಡೆಯಂತೆ, ಕಾಡಿನಲ್ಲಿ ಮರದಂತೆ ಅದರ ಒಂದಂಗವಾಗಿದ್ದನು.
>
> ಗುತ್ತಿ ಯಾವುದನ್ನೂ ಲೆಕ್ಕಿಸದೆ ಕಾಲು ಹಾಕುತ್ತಿದ್ದುದಕ್ಕೆ ಮತ್ತೊಂದು ಕಾರಣವಿತ್ತು.

ಅವನ ಮನಸ್ಸು ಬಹಿರ್ಮುಖವಾಗಿರಲಿಲ್ಲ. ತನ್ನ ಸಂಕಲ್ಪಕಾರ್ಯವನ್ನೂ ಅದನ್ನು ಸಾಧಿಸುವ ವಿಧಾನಗಳನ್ನೂ ಉಪಾಯಗಳನ್ನೂ ಕಷ್ಟ ಸಾಹಸಗಳನ್ನೂ ಕುರಿತು ನಾನಾ ವಿಧವಾಗಿ ಕಲ್ಪಿಸುತ್ತಾ ನಡೆಯುತ್ತಿದ್ದನು. ಒಂದು ಸಾರಿ ಸಿಂಬಾವಿ ಹೆಗ್ಗಡೆಯವರು ಹಳೆಮನೆ ದೊಡ್ಡ ಹೆಗ್ಗಡೆಯವರಿಗೆ ಕೊಟ್ಟಿದ್ದ ಚೀಟಿಯನ್ನು ಸೊಂಟಕ್ಕೆ ಕೈಹಾಕಿ ಮುಟ್ಟಿ ನೋಡುವನು. ಮತ್ತೊಂದು ಸಾರಿ ಆವೊತ್ತುತಾನೆ ನೀಟಾಗಿ ಕತ್ತರಿಸಿದ್ದ ಮೀಸೆಗಳನ್ನು ನೀವಿಕೊಳ್ಳುವನು. ಒಂದೊಂದು ಸಾರಿ ತನ್ನ ಮನಸ್ಸಿನಲ್ಲಾಗುತ್ತಿದ್ದ ಹೋರಾಟವನ್ನು ಮಾತಿನಲ್ಲಿ ಹೊರಗೆಡಹುವನು.

"ಈ ಸಾರಿ ನಾನು ಅವಳನ್ನು ಹಾರಿಸಿಕೊಂಡು ಬರದೇ ಇದ್ದರೆ ನಮ್ಮ ಅಪ್ಪ ಅವ್ವಗೆ ಹುಟ್ಟಿದ ಗಂಡೇ ಅಲ್ಲ ನಾನು" (ಮಲೆಗಳಲ್ಲಿ ಮದುಮಗಳು, ಪುಟ: ೨ - ೩)

ಗುತ್ತಿ ತನ್ನ ಈ ನಿರ್ಧಾರದ ಸಾಹಸದಲ್ಲಿ ಕೊನೆಗೂ ಯಶಸ್ಸುಪಡೆಯುತ್ತಾನೆ. ಆದರೆ ಗುತ್ತಿಗೆ ಜೀತದಿಂದ ಮುಕ್ತಿಯಿಲ್ಲ. ಜೀತಪದ್ಧತಿಯ ಸಂಕೋಲೆಗೆ ಮತ್ತೆ ಆತ ಮರಳುತ್ತಾನೆ. ಕಾದಂಬರಿಕಾರರು ತಮ್ಮ ಹಿಂದಿನ 'ಹೆಗ್ಗಡಿತಿ' ಕಾದಂಬರಿಯ ಕಾನೂರು ಚಂದ್ರಯ್ಯಗೌಡರ ಮನೆಗೆ ಗುತ್ತಿ ತನ್ನ ಹೆಸರನ್ನು 'ಕುಳ್ಳಸಣ್ಣ' ಎಂದು ಬದಲಾಯಿಸಿಕೊಂಡು ತನ್ನ ಸಂಗಾತಿ ತಿಮ್ಮಿಯ ಜೊತೆಯಲ್ಲಿ ಮತ್ತೆ ಜೀತಕ್ಕೆ ಸೇರುತ್ತಾನೆ. ಗುತ್ತಿಯ ಬದುಕಿನಲ್ಲಿ ಜೀತದ ಇತಿಹಾಸ ಮತ್ತೆ ಮರುಕಳಿಸುತ್ತದೆ. ಒಂದು ರೀತಿಯಲ್ಲಿ ಎರಡೂ ಕಾದಂಬರಿಗಳು ಮಲೆನಾಡಿನ ಬದುಕು ಮತ್ತು ಪರಿಸರವನ್ನು ಒಂದಕ್ಕೊಂದು ಪರಸ್ಪರ ಪ್ರಭಾವಿಸಿವೆ. ಓದುಗರು ಈ ಎರಡೂ ಕಾದಂಬರಿಗಳಲ್ಲಿ ಬರುವ ಕಥನವನ್ನು ಬಿಡಿಯಾಗಿ ಓದುವ ಅವಕಾಶವೂ ಇದೆ, ಇಡಿಯಾಗಿ ಓದುವ ಅವಕಾಶವೂ ಇದೆ. ಈ ದೃಷ್ಟಿಯಿಂದ ಇವುಗಳನ್ನು ಅವಳಿಜವಳಿ ಕಥಾನಕಗಳು ಎಂದೂ ಕೂಡ ಕರೆಯಬಹುದಾಗಿದೆ.

ಈ ಎರಡು ಕಾದಂಬರಿಗಳು ಅಸಂಖ್ಯಾತ ಓದುಗ ವಲಯವನ್ನು ಪಡೆದುಕೊಂಡಿವೆ. ಮತ್ತೆ ಮತ್ತೆ ಓದಿಸಿಕೊಳ್ಳುವ ಅಪರೂಪದ ಗುಣ ಈ ಕಾದಂಬರಿಗಳಿಗಿದೆ. ಪ್ರತಿಸಾರಿ ಓದುದ ಓದಿದಾಗಲು ಹೊಸ ಅರ್ಥಪರಂಪರೆಗಳನ್ನು ಈ ಕಥಾನಕಗಳು ಹೊರಡಿಸುತ್ತವೆ. ಇದಕ್ಕೆ ಬಹುಮುಖ್ಯ ಕಾರಣ ಕಾದಂಬರಿಕಾರರ ಭಾಷೆ, ಬಲಿಷ್ಠವಾದ ವಸ್ತು, ಪರಿಸರ ಇವೆಲ್ಲ ಬಹುಮುಖ್ಯ ಪರಿಕರಗಳಾಗಿವೆ. ಈ ಕಾದಂಬರಿಗಳಲ್ಲಿ ಬರುವ ಪ್ರತಿಯೊಂದು ಅಧ್ಯಾಯವೂ ಒಂದು ಪ್ರತ್ಯೇಕವಾದ ಕಥನದ ಗುಣವನ್ನು ಪಡೆದುಕೊಂಡಿವೆ. ಒಂದೊಂದು ಸಣ್ಣ ವಾಕ್ಯವೂ, ಕಂಡಿಕೆಯೂ, ವರ್ಣನೆಯೂ ಹಲವು ಸಂಕಥನಗಳಿಗೆ ದಾರಿ ಮಾಡಿಕೊಡುತ್ತವೆ. ಇಂಗ್ಲೀಷ್ ('The House of Kanooru' - ಅನುವಾದ : ರಾಮಚಂದ್ರಶರ್ಮ ಮತ್ತು ಪದ್ಮ ರಾಮಚಂದ್ರಶರ್ಮ) ಮತ್ತು ಹಿಂದೀ (ಪಹಡಿಕನ್ಯೆ - ಅನುವಾದ: ಬಿ.ಆರ್. ನಾರಾಯಣ) ಭಾಷೆಗಳಿಗೂ ಇವು ಅನುವಾದವಾಗಿದ್ದು ಪ್ರಸಿದ್ಧಿಯನ್ನು ಪಡೆದಿವೆ. ಕುವೆಂಪು ಅವರ ಈ ಕಥಾನಕಗಳು ಕನ್ನಡ ಕಥನ ಪರಂಪರೆಯಲ್ಲಿ ಯಾವಾಗಲೂ ಮುಂಚೂಣಿಯಲ್ಲಿ ಮೊದಲ ಮೈಲುಗಲ್ಲುಗಳಾಗಿ ನಿಲ್ಲುತ್ತವೆ.



# ೧೧

# ಅನುಬಂಧಗಳು

೧. ಕುವೆಂಪು : ಜೀವನದ ಕೆಲವು ಮುಖ್ಯ ಘಟ್ಟಗಳು

೨. ಕುವೆಂಪು : ವಂಶವೃಕ್ಷ

೩. ಕುವೆಂಪು : ಕೃತಿಗಳು

೪. ಕುವೆಂಪು ಕಾದಂಬರಿಗಳಲ್ಲಿನ ಸ್ಥಳಗಳು, ಜಾತಿಗಳು ಮತ್ತು ಜೀವ ಸಂಕುಲಗಳು

೫. ಕುವೆಂಪು ಕಾದಂಬರಿಗಳ ಮತ್ತು ಕಥಾಸಂಕಲನಗಳ ಆವೃತ್ತಿಗಳು

   ೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ

   ೨. ಮಲೆಗಳಲ್ಲಿ ಮದುಮಗಳು

   ೩. ನನ್ನ ದೇವರು ಮತ್ತು ಇತರ ಕಥೆಗಳು

   ೪. ಸಂನ್ಯಾಸಿ ಮತ್ತು ಇತರ ಕಥೆಗಳು

೬. ಕಾದಂಬರಿಗಳಲ್ಲಿ ಬರುವ ಕೌಟುಂಬಿಕ ನಕ್ಷೆಗಳು

   ೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ

   ೨. ಮಲೆಗಳಲ್ಲಿ ಮದುಮಗಳು

೭. ಕಾದಂಬರಿಗಳ ಸ್ಥಳಗಳ ನಕ್ಷೆ

   ೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ

   ೨. ಮಲೆಗಳಲ್ಲಿ ಮದುಮಗಳು

೮. ಆಕರ ಗ್ರಂಥಗಳು

೯. ಪರಾಮರ್ಶನ ಗ್ರಂಥಗಳು

   ೧. ಗ್ರಂಥಗಳು

   ೨. ಲೇಖನಗಳು

೧೦. ಕುವೆಂಪು ಸಾಹಿತ್ಯ ಕುರಿತು ನಡೆದಿರುವ ಪಿಎಚ್.ಡಿ. ಅಧ್ಯಯನಗಳು

೦ ೦

# ೧

## ಕುವೆಂಪು : ಜೀವನದ ಕೆಲವು ಮುಖ್ಯ ಘಟ್ಟಗಳು

೧೯೦೧ ತಂದೆ - ತಾಯಿಗಳ ಮದುವೆ. ತಂದೆ ವೆಂಕಟಪ್ಪಗೌಡ, ತಾಯಿ ಸೀತಮ್ಮ. ಶಾಲಿವಾಹನಶಕ ೧೮೨೪ನೆಯ ಪ್ಲವನಾಮ ಸಂವತ್ಸರದ ಜ್ಯೇಷ್ಠ ಶುದ್ಧ ೧೪ನೆಯ ಶುಕ್ರವಾರ. ಕ್ರಿ.ಶ. ೧೯೦೧ ಮೇ ೩೧. (ಕುಪ್ಪಳಿ, ತೀರ್ಥಹಳ್ಳಿ ತಾ. ಶಿವಮೊಗ್ಗ ಜಿಲ್ಲೆ)

೧೯೦೪ ಕೆ.ವಿ. ಪುಟ್ಟಪ್ಪ (ಕುಪ್ಪಳಿ ವೆಂಕಟಪ್ಪಗೌಡ ಪುಟ್ಟಪ್ಪ) ಜನನ - ೨೯ ಡಿಸೆಂಬರ್ ೧೯೦೪. ಕ್ರೋಧಿನಾಮ ಸಂವತ್ಸರದ ಮಾರ್ಗಶೀರ್ಷ ಬಹುಳ ಸಪ್ತಮೀ ಗುರುವಾರ ಉತ್ತರಾ ನಕ್ಷತ್ರದಲ್ಲಿ ತಾಯಿಯ ತವರು ಮನೆ ಹಿರಿಕೊಡಿಗೆಯಲ್ಲಿ. (ಹಿರಿಕೊಡಿಗೆ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ)

೧೯೦೪ ಜನನ: ೨೯-೧೨-೧೯೦೪ - ಹಿರೇಕೊಡಿಗೆಯಲ್ಲಿ. ತಾಯಿ:ಸೀತಮ್ಮ (ಹಿರೇಕೊಡಿಗೆ, ಕೊಪ್ಪ ತಾ. ಚಿಕ್ಕಮಗಳೂರು ಜಿ.) ತಂದೆ: ವೆಂಕಟಯ್ಯಗೌಡರು, ಕುಪ್ಪಳಿ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. ಮೇಲಿನ ಇಬ್ಬರ ಮದುವೆ: ೩೧-೫-೧೯೦೧. ಹಿರೇಕೊಡಿಗೆ - ಕುಪ್ಪಳಿ ಕುಟುಂಬಗಳೆರಡೂ ಸಾಕಷ್ಟು ಶ್ರೀಮಂತ ಕುಟುಂಬಗಳಾಗಿದ್ದು ಸು.೧೯೦೦ ಅನಂತರ ಕ್ರಮೇಣ ಅವುಗಳ ಶ್ರೀಮಂತಿಕೆ ಇಳಿಮುಖವಾಯಿತೆಂದು ತೋರುತ್ತದೆ.

೧೯೧೬ ಕುಪ್ಪಳಿಯಲ್ಲಿ ಮನೆಯಲ್ಲೇ ಖಾಸಗಿ ಮೇಷ್ಟರ ಮೂಲಕ ಪ್ರಾರಂಭಿಕ ವಿದ್ಯಾಭ್ಯಾಸ. ಇಬ್ಬರು ಸೋದರಿಯರು (ದಾನಮ್ಮ-ಪುಟ್ಟಮ್ಮ) ಹುಟ್ಟಿದ್ದು. ೧೯೧೬ರಲ್ಲಿ ತಂದೆಯ ಮರಣ.

೧೯೧೬ ರಿಂದ ೧೯೨೭ ತೀರ್ಥಹಳ್ಳಿಯಲ್ಲಿ ಮಾಧ್ಯಮಿಕ ವಿದ್ಯಾಭ್ಯಾಸ. ೧೯೧೯ರಲ್ಲಿ ಕನ್ನಡ ಲೋಅರ್ ಸೆಕೆಂಡರಿಯಲ್ಲಿ, ೧೯೨೦ರಲ್ಲಿ ಇಂಗ್ಲಿಷ್ ಲೋಅರ್ ಸೆಕೆಂಡರಿಯಲ್ಲಿ ಉತ್ತೀರ್ಣರಾದ್ದು. ೧೯೨೦ರಿಂದ ೧೯೨೭ ಮೈಸೂರಿನಲ್ಲಿ ವಿದ್ಯಾಭ್ಯಾಸ: ವೆಸ್ಲಿಯನ್ ಮಿಷನ್ ಹೈಸ್ಕೂಲು ಮತ್ತು ಮಹಾರಾಜಾ ಕಾಲೇಜಗಳಲ್ಲಿ: ೧೯೨೭ರಲ್ಲಿ ಬಿ.ಎ. ಪದವಿ ಪಡೆದದ್ದು. ಈ ಮಧ್ಯೆ - ೧೯೨೪ರಲ್ಲಿ ತಾಯಿಯ ಮರಣ; ಮುಂದೆ ಕೆಲವು ವರ್ಷಗಳಲ್ಲಿ ಮದುವೆಯಾಗಿದ್ದ ಸೋದರಿಯರಿಬ್ಬರೂ ಅರೆವಯಸ್ಸಲ್ಲಿ ತೀರಿಕೊಂಡದ್ದು. ೧೯೨೬ರಲ್ಲಿ ಹೋಟೆಲು ಬಿಟ್ಟು ಸ್ವಾಮಿ ಸಿದ್ಧೇಶ್ವರಾನಂದರ ಪ್ರೋತ್ಸಾಹದಿಂದ ರಾಮಕೃಷ್ಣಾಶ್ರಮಕ್ಕೆ ಹೋಗಿ ಸೇರಿಕೊಂಡಿದ್ದು; ಅದೇ ವರ್ಷ ಮೈಲಿಬೇನೆಯನ್ನು ಅನುಭವಿಸಿದ್ದು; ಅನಂತರ, ಕೆಲವು ದಿನ ಮನೋವಿಲಕ್ಷಣತೆಯುಂಟಾಗಿ ಆ ಕಾಲದಲ್ಲಿ ತಾನು ಪುಟ್ಟಪ್ಪನಲ್ಲ, ವಿವೇಕಾನಂದ ಅಂತ ಸಾರಿಕೊಂಡದ್ದು. ಆರಂಭದ ಬರವಣಿಗೆಗಳು ಪ್ರಕಟವಾದದ್ದು: ಮೊದಲ ಇಂಗ್ಲಿಷ್ ಕವಿತಾ ಸಂಕಲನ ಬಿಗಿನರ್ಸ್ ಮ್ಯೂಸ್ (೧೯೨೨) ಮತ್ತು ಕೆಲವು ಕನ್ನಡ ಬರವಣಿಗೆಗಳು.

೧೯೨೮ ಬೆಂಗಳೂರಲ್ಲಿ ನಡೆದ ವಿದ್ಯಾರ್ಥಿ ಕವಿಸಮ್ಮೇಳನದ ಅಧ್ಯಕ್ಷರಾದದ್ದು.

೧೯೨೯ ಕಲ್ಕತ್ತಾ ಯಾತ್ರೆ; ಬೇಲೂರು ರಾಮಕೃಷ್ಣಮಠದಲ್ಲಿ ಸ್ವಾಮಿ ಶಿವಾನಂದರಿಂದ ದೀಕ್ಷೆಪಡೆದದ್ದು. (೮-೧೦-೧೯೨೯) ಎಂ.ಎ.ನಲ್ಲಿ ಉತ್ತೀರ್ಣರಾದದ್ದು; ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿಕೊಂಡದ್ದು.

೧೯೩೦ ಮೊತ್ತಮೊದಲನೆಯ ಕವನಸಂಕಲನ - 'ಕೊಳಲು' ಪ್ರಕಟಣೆ.

೧೯೩೩ ಹುಬ್ಬಳ್ಳಿಯಲ್ಲಿ ನಡೆದ ೧೯ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಕವಿಗೋಷ್ಠಿ'ಯ ಅಧ್ಯಕ್ಷರಾದದ್ದು.

೧೯೩೬ 'ಕಾನೂರು ಹೆಗ್ಗಡಿತಿ' ಪ್ರಕಟಣೆ; ಮಹಾಛಂದಸ್ಸು ಮಹೋಪಮೆಗಳ ಪ್ರಯೋಗವಿರುವ 'ಚಿತ್ರಾಂಗದಾ' ಖಂಡಕಾವ್ಯದ ಪ್ರಕಟಣೆ.

೧೯೩೭ ಶ್ರೀಮತಿ ಹೇಮಾವತಿ ಅವರೊಡನೆ ಮದುವೆ; ಹೊಸದಾಗಿ ಕಟ್ಟಿಸಿಕೊಂಡ ಸ್ವಂತ ಮನೆ 'ಉದಯರವಿ' (ಒಂಟಿಕೊಪ್ಪಲು, ಮೈಸೂರು)ಗೆ ಹೋಗಿ ನೆಲೆಸಿದ್ದು.

೧೯೩೮ ಮೊದಲನೆಯ ಮಗ ಪೂರ್ಣಚಂದ್ರ ತೇಜಸ್ವಿ ಹುಟ್ಟಿದ್ದು (೮-೯-೧೯೩೮)

೧೯೩೯ ಕನ್ನಡ ರೀಡರ್ ಆಗಿ ಸೆಂಟ್ರಲ್ ಕಾಲೇಜಿನಲ್ಲಿ ನೇಮಕ; ಬೆಂಗಳೂರಿಗೆ ಹೋಗಿ ನೆಲೆಸಿದ್ದು. ಗುರು ವೆಂಕಣ್ಣಯ್ಯನವರ ನಿಧನ.

೧೯೪೧ ಎರಡನೆಯ ಮಗ ಕೋಕಿಲೋದಯ ಚೈತ್ರ ಹುಟ್ಟಿದ್ದು (೨-೫-೧೯೪೧)

೧೯೪೩ ಮೊದಲನೆಯ ಮಗಳು ಇಂದುಕಲಾ ಹುಟ್ಟಿದ್ದು (೨೧-೭-೧೯೪೩)

೧೯೪೫ ಎರಡನೆಯ ಮಗಳು ತಾರಿಣಿ ಹುಟ್ಟಿದ್ದು (೬-೨-೧೯೪೫)

೧೯೪೬ ಕನ್ನಡ ಪ್ರಾಧ್ಯಾಪಕರು ಮತ್ತು ಕನ್ನಡ ವಿಭಾಗ ಮುಖ್ಯಸ್ಥರಾಗಿ ಮಹಾರಾಜಾ ಕಾಲೇಜಿನಲ್ಲಿ ನೇಮಕವಾದದ್ದು; ಮೈಸೂರಿಗೆ ವಾಪಸಾಗಿ ನೆಲೆಸಿದ್ದು.

೧೯೪೯ ಶ್ರೀ ರಾಮಾಯಾಣ ದರ್ಶನಂ ಮೊದಲ ಮಹಾಸಂಪುಟದ ಪ್ರಕಟಣೆ.

೧೯೫೧ ಶ್ರೀ ರಾಮಾಯಾಣ ದರ್ಶನಂ ಎರಡನೇ ಮಹಾಸಂಪುಟ ಪ್ರಕಟಣೆ.

೧೯೫೫ ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾದದ್ದು: 'ರಾಮಾಯಣ ದರ್ಶನಂ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದ್ದು.

೧೯೫೬ ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಡಿ.ಲಿಟ್ ಸ್ವೀಕರಿಸಿದ್ದು; ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ನೇಮಕವಾದದ್ದು. ಮೈಸೂರಿನಲ್ಲಿ ನಡೆದ ೩೮ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾದದ್ದು. ಕರ್ನಾಟಕ ಏಕೀಕರಣವಾದದ್ದು.

೧೯೫೭ ಧಾರವಾಡದಲ್ಲಿ ನಡೆದ ೩೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದದ್ದು.

೧೯೫೮ ರಾಷ್ಟ್ರಪತಿಗಳಿಂದ 'ಪದ್ಮಭೂಷಣ' ಪ್ರಶಸ್ತಿ ಸ್ವೀಕರಿಸಿದ್ದು.

೧೯೬೦ 'ಮಾನಸಗಂಗೋತ್ರಿ' (ಮೈಸೂರು ವಿ.ವಿ. ಮೈಸೂರು ಸ್ನಾತಕೋತ್ತರ ಕೇಂದ್ರ) ವಿಸ್ತರಣೆಯ ಸ್ಥಾಪನೆ; ಉಪಕುಲಪತಿ ಹುದ್ದೆಯಿಂದ ನಿವೃತ್ತರಾದದ್ದು.

೧೯೬೪ ರಾಜ್ಯಸರ್ಕಾರದಿಂದ 'ರಾಷ್ಟ್ರಕವಿ' ಪ್ರಶಸ್ತಿಯನ್ನು ಸ್ವೀಕರಿಸಿದ್ದು.

೧೯೬೬ ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್ ಸ್ವೀಕರಿಸಿದ್ದು.

೧೯೬೭ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರಕಟಣೆ.

೧೯೬೮ 'ರಾಮಾಯಣ ದರ್ಶನಂ' ಕೃತಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದ್ದು. (ಕನ್ನಡದ ಮೊದಲ ಜ್ಞಾನಪೀಠ ಪ್ರಶಸ್ತಿ.)

೧೯೬೯ ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಗೌರವ ಡಿ.ಲಿಟ್ ಪ್ರಶಸ್ತಿ ಸ್ವೀಕರಿಸಿದ್ದು.

೧೯೭೪ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಘಟಿಕೋತ್ಸವ ಭಾಷಣ ಮಾಡಿದ್ದು.

೧೯೭೯ ಕನ್ನಡ ಭಾಷೆ - ಸಾಹಿತ್ಯಗಳಿಗೆ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಸ್ವೀಕರಿಸಿದ್ದು.

೧೯೮೧ ಪತ್ನಿ ಶ್ರೀಮತಿ ಹೇಮಾವತಿ ಅವರ ನಿಧನ.

೧೯೮೫ ಮೊದಲನೇ 'ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ' (ಮೈಸೂರು) ಉದ್ಘಾಟಿಸಿದ್ದು.

೧೯೯೪ ನಿಧನ: ೧೦-೧೧-೧೯೯೪

೦ ೦

೨

# ಕುವೆಂಪು : ವಂಶವೃಕ್ಷ

೧. ಶ್ರೀ ಕೆ.ವಿ. ಪುಟ್ಟಪ್ಪ (ಕುವೆಂಪು) ಕುಪ್ಪಳಿ ವೆಂಕಟಪ್ಪಗೌಡ ಪುಟ್ಟಪ್ಪ ಎಂ.ಎ. ಜನನ ೨೯-೧೨-೧೯೦೪ ಹಿರೇಕೊಡಿಗೆಯಲ್ಲಿ. ಕ್ರೋಧಿನಾಮ ಸಂವತ್ಸರದ ಮಾರ್ಗಶೀರ್ಷ ಬಹುಳ ಸಪ್ತಮಾ ಗುರುವಾರದ ಉತ್ತರಾ ನಕ್ಷತ್ರ. ತಾಯಿ: ಸೀತಮ್ಮ (ಹಿರೇಕೊಡಿಗೆ, ಕೊಪ್ಪ ತಾ. ಚಿಕ್ಕಮಗಳೂರು ಜಿಲ್ಲೆ) ತಂದೆ: ವೆಂಕಟಪ್ಪಗೌಡರು, ಕುಪ್ಪಳಿ, ತೀರ್ಥಹಳ್ಳಿ ತಾ. ಶಿವಮೊಗ್ಗ ಜಿಲ್ಲೆ.

ಕುವೆಂಪು ಅವರ ತಂದೆ - ತಾಯಿಗಳ ಮದುವೆ ೩೧-೦೫-೧೯೦೧. (ಶಾಲಿವಾಹನ ಶಕ ೧೮೨೪ನೆಯ ಪ್ಲವನಾಮ ಸಂವತ್ಸರದ ಜ್ಯೇಷ್ಠ ಶುದ್ಧ ೧೪ನೆಯ ಶುಕ್ರವಾರ)

ಕುವೆಂಪು ಅವರ ಒಟಹುಟ್ಟಿದವರು ಇಬ್ಬರು ಸೋದರಿಯರು.

ದಾನಮ್ಮ, ಪುಟ್ಟಮ್ಮ (ತಂಗಿಯರು)

೧೯೧೬ರಲ್ಲಿ ತಂದೆಯ ಮರಣ.

೧೯೨೪ರಲ್ಲಿ ತಾಯಿಯ ಮರಣ.

ಶ್ರೀಮತಿ ದಾನಮ್ಮ ಮತ್ತು ಶ್ರೀಮತಿ ಪುಟ್ಟಮ್ಮ ಮದುವೆಯಾದನಂತರ ಅರೆವಯಸ್ಸಿನಲ್ಲಿ ಸಾವನ್ನಪ್ಪಿದರು.

೧೯೩೭ ಹೇಮಾವತಿ ಅವರೊಡನೆ ಮದುವೆ.

೧೯೮೭ ಹೇಮಾವತಿ ಅವರ ನಿಧನ.

೧೯೯೪ ಕುವೆಂಪು ಅವರ ನಿಧನ ೧೦-೧೧-೧೯೯೪

## ಕುವೆಂಪು ಮಕ್ಕಳು, ಮೊಮ್ಮಕ್ಕಳು

೨. ಶ್ರೀ ಕೆ.ವಿ. ಪೂರ್ಣಚಂದ್ರ ತೇಜಸ್ವಿ, ಎಂ.ಎ. (ಜನನ - ಶಿವಮೊಗ್ಗ ೧೯೩೮) ಕನ್ನಡ ಸಾಹಿತ್ಯದಲ್ಲಿ ಎಂ.ಎ. ಈಗ ಇರುವುದು 'ಚಿತ್ರಕೂಟ' - ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ, ವೃತ್ತಿ - ವ್ಯವಸಾಯ, ಕನ್ನಡದ ಪ್ರಸಿದ್ಧ ಲೇಖಕ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಪಂಪ ಪ್ರಶಸ್ತಿ ಪುರಸ್ಕೃತರು. ಹೆಂಡತಿ - ಶ್ರೀಮತಿ ಆರ್. ರಾಜೇಶ್ವರಿ ಎಂ.ಎ.

ಮಕ್ಕಳು: ಶ್ರೀಮತಿ ಸುಸ್ಮಿತಾ ದೀಪಕ್ ಬಿ.ಇ. (ಜನನ - ಮೈಸೂರು ೧೯೭೧) ಇಂಜಿನಿಯರಿಂಗ್ ಪದವೀಧರೆ. ಬೆಂಗಳೂರಿನಲ್ಲಿ ಸಾಫ್ಟ್ ವೇರ್ ಇಂಜಿನಿಯರ್ ಕೆಲಸ.

ಗಂಡ: ಶ್ರೀ ದೀಪಕ್ ಶಣೈ. ಬಿ.ಇ. ಸಾಫ್ಟ್ ವೇರ್ ಇಂಜಿನಿಯರ್ ಬೆಂಗಳೂರು. ಶ್ರೀಮತಿ ಈಶಾನ್ಯೆ ಜ್ಞಾನೇಶ್ ಎಮ್.ಎಸ್. (ಜನನ - ಮೈಸೂರು ೧೯೭೩) ಇಂಜಿನಿಯರಿಂಗ್ ಪದವೀಧರೆ, ಬೆಂಗಳೂರಿನಲ್ಲಿ ಸಾಫ್ಟ್ ವೇರ್ ಇಂಜಿನಿಯರ್ ಕೆಲಸ. ಗಂಡ: ಶ್ರೀ ಜ್ಞಾನೇಶ್ ಎಮ್.ಎಸ್. ಸಾಫ್ಟ್ ವೇರ್ ಇಂಜಿನಿಯರ್ ಬೆಂಗಳೂರು.

೩. ಶ್ರೀ ಕೋಕಿಲೋದಯ ಚೈತ್ರ, ಎಂ.ಇ. (ಜನನ - ಶಿವಮೊಗ್ಗ ೧೯೪೧), ಈಗ ಇರುವುದು ಮೆಲ್ಬೋರ್ನ್, ಆಸ್ಟ್ರೇಲಿಯಾ, ವೃತ್ತಿ - ಡಿಸೈನ್ ಇಂಜಿನಿಯರಿಂಗ್. ಹೆಂಡತಿ; ಮರ್ಲಿನ್. ಮಗಳು: ಕು. ಸಿಮೋನ್ ಶಿವಾಣಿ (ಜನನ - ಮೆಲ್ಬೋರ್ನ್ ೧೯೮೮)

೪. ಶ್ರೀಮತಿ ಕೆ.ಪಿ. ಇಂದುಕಲಾ ಸುರೇಂದ್ರ ಎಂ.ಎ. (ಜನನ - ಬೆಂಗಳೂರು ೧೯೪೩ ನಿಧನ ೧೯೯೮) ಬೆಂಗಳೂರು.

ಗಂಡ: ಡಾ. ಕೆ.ಟಿ. ಸುರೇಂದ್ರ, ಅರ್ಥೋಸರ್ಜನ್, ಮುಖ್ಯಸ್ಥರು, ಆರ್ತೋಪೀಡಿಕ್ ವಿಭಾಗ, ಮಾರ್ತಾ ಆಸ್ಪತ್ರೆ, ಬೆಂಗಳೂರು.

ಮಕ್ಕಳು: ಡಾಕ್ಟರ್ ಕೆ.ಎಸ್. ತಮಾಲ ಸುಧೀರ್, ಎಮ್ .ಬಿ.ಬಿ.ಎಸ್. ಎಮ್.ಡಿ. (ಜನನ - ಲಿವರ್ ಪೂಲ್ , ಇಂಗ್ಲೆಂಡ್ ೧೯೭೦) ಕು.ಕೆ.ಎಸ್. ಶಾದ್ವಲ ಎಂ.ಬಿ.ಬಿ.ಎಸ್. ಎಮ್.ಡಿ. (ಜನನ - ಲಿವರ್ ಪೂಲ್. ಇಂಗ್ಲೆಂಡ್ ೧೯೭೪)

೫. ಶ್ರೀಮತಿ ಕೆ.ಪಿ. ತಾರಿಣಿ ಚಿದಾನಂದ ಗೌಡ ಎಂ.ಎ, (ಜನನ - ಶಿವಮೊಗ್ಗ ೧೯೪೫) ಈಗ ಇರುವುದು - ಮೈಸೂರು. ಗಂಡ - ಪ್ರೊ. ಕೆ.ಚಿದಾನಂದ ಗೌಡ, ಎಮ್.ಇ. ಕಂಪ್ಯೂಟರ್ ಪ್ರೊಫೆಸರ್, ಜೆ.ಸಿ. ಕಾಲೇಜು, ಮೈಸೂರು. ಕುಲಪತಿ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ (೨೦೦೨). ಮಗಳು: ಶ್ರೀಮತಿ ಕೆ.ಸಿ. ಪ್ರಾರ್ಥನ ಕಿಶೋರ್ ಎಮ್ ಟೆಕ್ (ಜನನ - ಮೈಸೂರು ೧೯೭೪) ಸಾಫ್ಟಾವೇರ್ ಇಂಜಿನಿಯರ್ ಬೆಂಗಳೂರು. ಗಂಡ: ಶ್ರೀ ಕಿಶೋರ್ ಸಾಫ್ಟ್ ವೇರ್ ಇಂಜಿನಿಯರ್ ಬೆಂಗಳೂರು.

o o

೩

# ಕುವೆಂಪು ಕೃತಿಗಳು

**ಕವನಸಂಕಲನ, ಮಹಾಕಾವ್ಯ, ಖಂಡಕಾವ್ಯ, ಕವನ ಸಂಕಲನ**

೧೯೨೨ - Beginner's Muse - ಪ್ರಾರಂಭದ ಇಂಗ್ಲಿಷ್ ಕವನ ಸಂಕಲನ.

೧೯೨೪ - ಅಮಲನ ಕಥೆ - ಮಕ್ಕಳಿಗಾಗಿ ಬರೆದ ಲಘು ಕಾಲ್ಪನಿಕ ಕಾವ್ಯ.

೧೯೨೬ - ಹಾಳೂರು - ನೀಳ್ಗವನ.

೧೯೨೮ - ಬೊಮ್ಮನಹಳ್ಳಿಯ ಕಿಂದರಿಜೋಗಿ; ಬ್ರೌನಿಂಗ್ ಕವಿಯ The pide Peper of Hamelin ಕವಿತೆಯ ಪ್ರಭಾವದಿಂದ ರಚಿತವಾದ ನೀಳ್ಗಾವ್ಯ. ಮೊದಲು 'ಕಿರಿಯರ ಕಾಣಿಕೆ' ೧೯೨೮ರಲ್ಲಿ ಪ್ರಕಟವಾಯಿತು. ಪ್ರತ್ಯೇಕವಾಗಿ ಕಾವ್ಯಾಲಯ, ಮೈಸೂರಿನಲ್ಲಿ ೧೯೪೨ರಲ್ಲಿಯೂ, ೧೯೪೫ರಲ್ಲಿ ಆರ್.ಕೆ. ಲಕ್ಷ್ಮಣ್ ರ ಚಿತ್ರಗಳನ್ನು ಒಳಗೊಂಡು ಪ್ರಕಟವಾಯಿತು.

೧೯೩೦ - ಕೊಳಲು - ಕುವೆಂಪು ಅವರ ಮೊದಲನೆಯ ಪ್ರಾತಿನಿಧಿಕ ಕವನ ಸಂಕಲನ.

೧೯೩೩ - ಪಾಂಚಜನ್ಯ - ಕ್ರಾಂತಿಕವನಗಳು

೧೯೩೪ - ನವಿಲು - ಪ್ರಕೃತಿ ಪ್ರಧಾನವಾದ ಕವನಗಳು. (ನವಿಲು ಗರಿ - ೧, ಗರಿ - ೨ ಎಂಬುದಾಗಿ ಒಂದೇ ಸಂಪುಟವಾಗಿ ಕರ್ನಾಟಕ ಸಂಘ ಶಿವಮೊಗ್ಗದಿಂದ ಪ್ರಕಟವಾಗಿತ್ತು. ಅನಂತರ ನವಿಲು, ಕಲಾಸುಂದರಿ ಎಂದು ಬೇರೆಬೇರೆಯಾಗಿ ಪ್ರಕಟವಾಯಿತು.)

೧೯೩೪ - ಕಲಾಸುಂದರಿ - ಪ್ರಕೃತಿ ಪ್ರಧಾನವಾದ ಕವಿತೆಗಳು

೧೯೩೬ - ಕಿಂದರಿಜೋಗಿ ಮತ್ತು ಇತರ ಕಥನಕವನಗಳು - ಕಥನ ಕವನಗಳ ಸಂಗ್ರಹ.

೧೯೩೬ - ಚಿತ್ರಾಂಗದಾ - ಸರಳ ರಗಳೆಯ ಖಂಡ ಕಾವ್ಯ; ಮಹಾಛಂದಸ್ಸಿನ ಕೃತಿ.

೧೯೪೪ - ಕೋಗಿಲೆ ಮತ್ತು ಸೋವಿಯಟ್ ರಷ್ಯಾ - ಕ್ರಾಂತಿ ಕವನಗಳು

೧೯೪೬ - ನನ್ನ ಮನೆ - ಶಿಶುಗೀತೆಗಳು

೧೯೪೬ - ಕೃತ್ತಿಕೆ - ಪ್ರಕೃತಿ, ವ್ಯಕ್ತಿ - ಪ್ರಧಾನವಾದ ಸಾನೆಟ್ಟುಗಳ ಕವನ ಸಂಕನಲ

೧೯೪೬ - ಪಕ್ಷಿಕಾಶಿ - ಪ್ರಕೃತಿ ಪ್ರಧಾನವಾದ ಕವನಗಳು

೧೯೪೬ - ಪ್ರೇಮ ಕಾಶ್ಮೀರ - ಪ್ರೇಮಗೀತೆಗಳು

೧೯೪೬ - ಅಗ್ನಿಹಂಸ - ಅನುಭಾವ ಪ್ರಧಾನವಾದ ಕವನಗಳು.

೧೯೪೬ - ಕಿಂಕಣಿ - ವಚನ ಕವನಗಳು

೧೯೪೬ - ಶಿಶು ಗೀತಾಂಜಲಿ (ಮರಿವಿಜ್ಞಾನಿ, ನನ್ನ ಮನೆ, ಮೇಘಪುರ)

೧೯೪೭ - ಮೇಘಪುರ - ಶಿಶುಗೀತೆಗಳು

೧೯೪೭ - ಮರಿ ವಿಜ್ಞಾನಿ - ಶಿಶುಗೀತೆಗಳು

೧೯೪೭ - ಷೋಡಶಿ - ಪ್ರೇಮಗೀತೆಗಳು

೧೯೪೭ - ಶ್ರೀಸ್ವಾತಂತ್ರ್ಯೋದಯ ಮಹಾಗಾಥಾ, ದೀರ್ಘಕವಿತೆ.

೧೯೪೮ - ಬಾಪೂಜಿಗೆ ಬಾಷ್ಪಾಂಜಲಿ - ಏಳು ಕವಿತೆಗಳು ಮತ್ತು ಎರಡು ಭಾಷಣಗಳು.

೧೯೪೯ - ಶ್ರೀ ರಾಮಾಯಣ ದರ್ಶನಂ - ಸಂಪುಟ -೧ ಮಹಾಛಂದಸ್ಸಿನ ಮಹಾಕಾವ್ಯ

೧೯೫೧ - ಶ್ರೀ ರಾಮಾಯಣ ದರ್ಶನಂ - ಸಂಪುಟ -೨ ಮಹಾಛಂದಸ್ಸಿನ ಮಹಾಕಾವ್ಯ
೧೯೫೨ - ಜೇನಾಗುವಾ - ಪ್ರೇಮಗೀತೆಗಳು
೧೯೫೪ - ಚಂದ್ರಮಂಚಕೆ ಬಾ, ಚಕೋರಿ! - ಪ್ರೇಮ ಕವನಗಳು
೧೯೫೭ - ಇಕ್ಷುಗಂಗೋತ್ರಿ - ದೇಶ - ಸಮಾಜವನ್ನು ಕುರಿತ ಕವನಗಳು
೧೯೬೩ - ಅನಿಕೇತನ - ಅನುಭಾವ ಪ್ರಧಾನವಾದ ಕವಿತೆಗಳು
೧೯೬೫ - ಅನುತ್ತಾರಾ - ಪ್ರೇಮ ಕವಿತೆಗಳು
೧೯೬೬ - ಮಂತ್ರಾಕ್ಷತೆ - ಸಂಕೀರ್ಣ ಪುಡಿ ಕವನಗಳು
೧೯೬೭ - ಪ್ರೇತ - ಕ್ಯೂ - ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳನ್ನು ಕುರಿತ ಕವನಗಳು
೧೯೬೭ - ಕುಟೀಚಕ - ಅನುಭಾವ ಪ್ರಧಾನವಾದ ಕವನ ಸಂಕಲನ
೧೯೬೭ - ಕದರಡಕೆ - ಪ್ರಕೃತಿ ಪ್ರಧಾನವಾದ ಕವನಗಳು
೧೯೭೬ - ಹೊನ್ನ ಹೊತ್ತಾರೆ - ಕವಿತೆಗಳ ಸಂಕಲನ
೧೯೭೩ - ಎಲಿಯನ್ ಹಾಪ್ ೯ - ಇಂಗ್ಲಿಷ್ ಕವನಗಳು
೧೯೮೧ - ಕೊನೆಯ ತೆನೆ ಮತ್ತು ವಿಶ್ವಮಾನವ ಸಂದೇಶ
೧೯೮೧ - ಸಮುದ್ರಲಂಘನ - ಸರಳರಗಳೆಯ ಖಂಡ್ಯಕಾವ್ಯ
೧೯೮೫ - ಮಹಾದರ್ಶನ ಮತ್ತು ಪ್ರಾಯಶ್ಚಿತ್ತ: ಸರಳ ರಗಳೆಯ ಎರಡು ಖಂಡಕಾವ್ಯಗಳು
೧೯೯೭ - ಶ್ರೀ ರಾಮಾಯಣದರ್ಶನಂ - ಹಸ್ತಾಕ್ಷರದ ಮೂಲಪ್ರತಿಯ ಪ್ರತಿಕೃತಿ ಪ್ರಕಟಣೆ

## ನಾಟಕಗಳು

೧೯೨೬ - ಮೋಡಣ್ಣನ ತಮ್ಮ - ಮಕ್ಕಳ ನಾಟಕ
೧೯೨೮ - ಯಮನ ಸೋಲು - ಸಾವಿತ್ರಿ - ಸತ್ಯವಾನರ ಜನಪ್ರಿಯ ಕಥೆಯ ಆಧಾರಿತ ನಾಟಕ
೧೯೨೮ - ಜಲಗಾರ - ಎರಡು ದೃಶ್ಯಗಳನ್ನುಳ್ಳ ನಾಟಕ
೧೯೩೦ - ನನ್ನ ಗೋಪಾಲ: ಮಕ್ಕಳ ನಾಟಕ
೧೯೩೦ - ಬಿರುಗಾಳಿ - ಶೇಕ್ಸ್ ಪಿಯರ್ ಮಹಾಕವಿಯ ಟೆಂಪೆಸ್ಟ್ ನಾಟಕದ ರೂಪಾಂತರ
೧೯೩೧ - ಮೂರು ನಾಟಕಗಳು. ಮಹಾಶಿವರಾತ್ರಿ, ಶ್ಮಶಾನ ಕುರುಕ್ಷೇತ್ರ, ಜಲಗಾರ
೧೯೩೧ - ಮಹಾಶಿವರಾತ್ರಿ - ಸಿದ್ಧಾರ್ಥನು ಬುದ್ಧನಾಗಲು ಹೊರಡುವ ಮಹಾಶಿವರಾತ್ರಿಯ ಕಥೆಯ ಆಧಾರಿತ ನಾಟಕ
೧೯೩೧ - ಎರಡು ನಾಟಕಗಳು (ಯಮನ ಸೋಲು ಮತ್ತು ಬಿರುಗಾಳಿ. ಟಿ.ಎಸ್. ವೆಂಕಣ್ಣಯ್ಯನವರ ಮುನ್ನುಡಿ ಸಹಿತ)
೧೯೩೧ - ವಾಲ್ಮೀಕಿಯ ಭಾಗ್ಯ - ಸೀತಾವನವಾಸದ ವಸ್ತುವನ್ನು ಆಧರಿಸಿ ರಚಿತವಾದ ನಾಟಕ
೧೯೩೧ - ಶ್ಮಶಾನ ಕುರುಕ್ಷೇತ್ರಂ - ಯುದ್ಧ ದುರಂತತೆ, ಅನ್ಯಾಯ, ವಿನಾಶನ, ಕ್ರೌರ್ಯ, ಅವಿವೇಕತನಗಳಿಂದ ಒಂದು ಯುಗದ ನಾಶವನ್ನು ಪ್ರತಿಮಾದೃಷ್ಟಿಯಿಂದ ರಚಿಸಿರುವ ದೃಶ್ಯರೂಪಕ
೧೯೩೨ - ರಕ್ತಾಕ್ಷಿ - ಶೇಕ್ಸ್ ಪಿಯರ್ ಮಹಾಕವಿಯ ಹ್ಯಾಮ್ಲೆಟ್ ನಾಟಕಕ್ಕೆ ಬಿದನೂರಿನ ಇತಿಹಾಸವನ್ನು ಅಳವಡಿಸಿ ರಚಿಸಿರುವ ಸರಳ ರಗಳೆಯ ನಾಟಕ
೧೯೪೪ - ಶೂದ್ರತಪಸ್ವಿ - ಶಂಬೂಕನ ಕಥೆಯ ಸಾಮಗ್ರಿಯನ್ನು ಹೊಸರೀತಿಯಿಂದ ಅಳವಡಿಸಿ ಬರೆದ ನಾಟಕ
೧೯೪೪ - ಎರಡು ನಾಟಕಗಳು - ಯಮನ ಸೋಲು ಮತ್ತು ವಾಲ್ಮೀಕಿಯ ಭಾಗ್ಯ ೧೯೪೭ - ಬೆರಳ್ ಗೆ ಕೊರಳ್ - ಏಕಲವ್ಯನ ಕಥೆಯನ್ನು ಆಧರಿಸಿ ಬರೆದ ನಾಟಕ
೧೯೪೭ - ಬಲಿದಾನ - ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಮೂರು ದೃಶ್ಯಗಳ ನಾಟಕ
೧೯೬೩ - ಚಂದ್ರಹಾಸ - ಕವಿತಾ ನಾಟಕ
೧೯೭೪ - ಕಾನೀನ - ನಾಟಕ
೧೯೯೫ - ಶ್ಮಶಾನ ಕುರುಕ್ಷೇತ್ರಂ ಮತ್ತು ಮಹಾಶಿವರಾತ್ರಿ (ಒಟ್ಟಾಗಿ ಪ್ರಕಟಣೆ)
೧೯೯೫ - ಶ್ಮಶಾನ ಕುರುಕ್ಷೇತ್ರಂ ಮತ್ತು ಬೆರಳ್ಗೆ ಕೊರಳ್ (ಒಟ್ಟಾಗಿ ಪ್ರಕಟಣೆ)

## ಕಾದಂಬರಿ, ಕಥೆ, ಗದ್ಯಚಿತ್ರ

೧೯೩೦ - ನರಿಗಳಗೇಕೆ ಕೋಡಿಲ್ಲ - ಮಕ್ಕಳ ಕಥೆ
೧೯೩೩ - ಮಲೆನಾಡಿನ ಚಿತ್ರಗಳು - ಗದ್ಯ ಚಿತ್ರಗಳ ಸಂಕಲನ
೧೯೩೬ - ಸಂನ್ಯಾಸಿ ಮತ್ತು ಇತರ ಕಥೆಗಳು - ಸಣ್ಣ ಕಥೆಗಳ ಸಂಕಲನ

೧೯೩೬ - ಕಾನೂರು ಹೆಗ್ಗಡಿತಿ - ಕುವೆಂಪು ಅವರ ಪ್ರಥಮ ಮಹಾಕಾದಂಬರಿ
೧೯೪೦ - ನನ್ನ ದೇವರು ಮತ್ತು ಇತರ ಕಥೆಗಳು - ಕಥಾ ಸಂಕಲನ
೧೯೬೭ - ಮಲೆಗಳಲ್ಲಿ ಮದುಮಗಳು - ಕುವೆಂಪು ಅವರ ಎರಡನೆಯ ಮಹಾಕಾದಂಬರಿ
೧೯೮೫ - ಕತೆಗಳೊಡನೆ ಆರಂಭದಲ್ಲಿ - ಕಥಾ ಸಂಕಲನ

## ಕಾವ್ಯಮೀಮಾಂಸೆ, ಸಾಹಿತ್ಯ ವಿಮರ್ಶೆ, ಭಾಷಣ, ಪತ್ರಗಳು

೧೯೪೪ - ಸಾಹಿತ್ಯ ಪ್ರಚಾರ - ಭಾಷಣಗಳ ಸಂಗ್ರಹ
೧೯೪೪ - ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ - ಭಾಷಣಗಳ ಸಂಕಲನ
೧೯೪೬ - ಕಾವ್ಯವಿಹಾರ - ವಿಮಾರ್ಶಾತ್ಮಕ ಲೇಖನಗಳು
೧೯೫೦ - ತಪೋನಂದನ - ದಾರ್ಶನಿಕ ವಿಮರ್ಶೆ
೧೯೫೩ - ವಿಭೂತಿ ಪೂಜೆ - ವಿಮರ್ಶೆಯ ಲೇಖನಗಳು
೧೯೫೯ - ವಿಶ್ವವಿದ್ಯಾನಿಲಯದ ಪ್ರಸಾರಾಂಗ, ಕುಲಪತಿ ಭಾಷಣಗಳ ಆಯ್ದ ಭಾಗಗಳು
೧೯೬೦ - ದ್ರೌಪದಿಯ ಶ್ರೀಮುಡಿ - ಸಾಹಿತ್ಯ ವಿಮರ್ಶೆ ಮತ್ತು ಕಾವ್ಯ ಮೀಮಾಂಸೆ
೧೯೬೨ - ರಸೋ ವೈ ಸಃ - ಸಾಹಿತ್ಯ ವಿಮರ್ಶೆ ಮತ್ತು ಕಾವ್ಯ ಮೀಮಾಂಸೆ
೧೯೬೪ - ಷಷ್ಠಿನಮನ - ಭಾಷಣ, ಲೇಖನ, ಮುನ್ನುಡಿಗಳ ಸಂಗ್ರಹ
೧೯೬೬ - ಶ್ರೀ ಕುವೆಂಪು ಭಾಷಣಗಳು - ಭಿನ್ನವತ್ತಳೆಗಳು
೧೯೭೦ - ಇತ್ಯಾದಿ - ವಿಮರ್ಶಾ ಸಂಕಲನ
೧೯೭೧ - ಮನುಜಮತ ವಿಶ್ವಪಥ - ಭಾಷಣಗಳ ಲೇಖನ ಸಂಗ್ರಹ
೧೯೭೬ - ವಿಚಾರ ಕ್ರಾಂತಿಗೆ ಆಹ್ವಾನ - ಭಾಷಣ ಸಂಕಲನ
೧೯೭೬ - ರಾಷ್ಟ್ರಕವಿ ಭಾಷಣಗಳು
೧೯೭೮ - ಜನತಾಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ - ಭಾಷಣ ಸಂಗ್ರಹ
೧೯೮೩ - ದಾರ್ಶನಿಕ ಕಾವ್ಯ ಮೀಮಾಂಸೆ - ಆಯ್ದು ವಿಮರ್ಶಾ ಲೇಖನಗಳ ಸಂಕಲನ
೧೯೮೯ - ಮುನ್ನುಡಿ ತೋರಣ
೧೯೭೪ - ಕುವೆಂಪು ಪತ್ರಗಳು
೧೯೯೩ - ಶ್ರೀ ರಾಮಕೃಷ್ಣವಚನವೇದ ನುಡಿನಮನ - ಕಿರು ಪುಸ್ತಿಕೆ

## ಜೀವನ ಚರಿತ್ರೆ, ಆತ್ಮಚರಿತ್ರೆ

೧೯೩೨ - ಸ್ವಾಮಿ ವಿವೇಕಾನಂದ - ಜೀವನ ಚರಿತ್ರೆ
೧೯೩೪ - ಶ್ರೀ ರಾಮಕೃಷ್ಣ ಪರಮಹಂಸ - ಜೀವನ ಚರಿತ್ರೆ
೧೯೮೦ - ನೆನಪಿನ ದೋಣಿಯಲ್ಲಿ ಭಾಗ -೧ - ಆತ್ಮಕಥೆ
೧೯೮೫ - ನೆನಪಿನ ದೋಣಿಯಲ್ಲಿ ಭಾಗ -೨ - ಆತ್ಮಕಥೆ

## ಭಾಷಾಂತರ

೧೯೩೩ - ವಿವೇಕವಾಣಿ - ವಿವೇಕಾನಂದರ ಬರಹಗಳಿಂದ ಆಯ್ದ ಭಾಗಗಳ ಭಾಷಾಂತರ, ಹಾಗೂ ಪ್ರೇರಿತ ಕವನ, ಗದ್ಯ ಚಿತ್ರಗಳು
೧೯೩೪ - ವೇದಾಂತ - ಸ್ವಾಮಿ ವಿವೇಕಾನಂದರ ಭಾಷಣದ ಅನುವಾದ ಪುಸ್ತಿಕೆ
೧೯೫೦ - ಜನಪ್ರಿಯ ವಾಲ್ಮೀಕಿ ರಾಮಾಯಾಣ - ಮೂಲ ರಾಮಾಯಣದ ಕಥೆ
೧೯೫೪ - ಗುರುವಿನೊಡನೆ ದೇವರಡಿಗೆ ಭಾಗ -೧ - ಶ್ರೀ ಸ್ವಾಮಿ ಶಿವಾನಂದರ ಮಾತುಕತೆಗಳು
೧೯೬೪ - ಗುರುವಿನೊಡನೆ ದೇವರಡಿಗೆ ಭಾಗ - ೨ - ಶ್ರೀ ಸ್ವಾಮಿ ಶಿವಾನಂದರ ಮಾತುಕತೆಗಳು

## ಸಂಪಾದಿತ

೧೯೫೮ - ಕರ್ಣಾಟಕ ಭಾರತ ಕಥಾಮಂಜರಿ (ಮಾಸ್ತಿಯವರೊಂದಿಗೆ ಸಹ ಸಂಪಾದಿತ ಕೃತಿ)

## ಆಯ್ದ ಕವನ ಸಂಕಲನಗಳು

೧೯೬೫ - ಕಾವ್ಯರ್ಷಿ ಕುವೆಂಪು ಕೊಟ್ಟ ಕನ್ನಡ ದೀಕ್ಷೆ

೧೯೬೮ - ಕನ್ನಡ ಡಿಂಡಿಮ

೧೯೭೨ - ಪ್ರಾಥನಾ ಗೀತಾಂಜಲಿ

೧೯೭೩ - ಕಬ್ಬಿಗನ ಕೈಬುಟ್ಟಿ

೧೯೭೭ - ಕ್ರಾಂತಿ ಕಹಳೆ

೧೯೮೪ - ಆಯ್ದ ಕುವೆಂಪು ಕವನಗಳು

೦ ೦

೪

# ಕುವೆಂಪು ಕಥೆಗಳಲ್ಲಿನ ಸ್ಥಳಗಳು, ಜಾತಿಗಳು ಮತ್ತು ಜೀವ ಸಂಕುಲಗಳು

## ೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ

| | | |
|---|---|---|
| ೧. | ಸ್ಥಳ (ಊರುಗಳು) | ಕಾನೂರು, ಕೆಳಕಾನೂರು, ಕಾನುಬೈಲ, ಕೊಪ್ಪ, ಮುತ್ತಳ್ಳಿ, ಸೀತೆಮನೆ, ನೆಲ್ಲುಹಳ್ಳಿ, ತೀರ್ಥಹಳ್ಳಿ, ಬಾಳೂರು, ಮೇಗ್ರಳ್ಳಿ, ಮೈಸೂರು, ಎಂಟೂರು, ಮದ್ದೂರು, ಬೈಂದೂರು, ಅಗ್ರಹಾರ, ದಕ್ಷಿಣಕನ್ನಡ, ಚಿಕ್ಕಮಗಳೂರು, ಅತ್ತಿಗದ್ದೆ, ನುಗ್ಗಿಮನೆ, ಹುಂಚದಕಟ್ಟೆ, ಸಿಬ್ಬಲು ಗುಡ್ಡೆ, ಸೋಮೇಶ್ವರ, ಸಂಪಿಗೆ ಹಳ್ಳಿ, ಸಿದ್ದರ ಮಠ, ಮೇಳಿಗೆ, ಕೂಳೂರು, ಆಗುಂಬೆ, ಕುರುವಳ್ಳಿ, ಕುಕ್ಕನಹಳ್ಳಿ, ಕಾಶಿ, ರಾಮೇಶ್ವರ, ತಿರುಪತಿ, ಧರ್ಮಸ್ಥಳ. |
| ೨. | ಜಾತಿಗಳು: | ಒಕ್ಕಲಿಗರು, ಬ್ರಾಹ್ಮಣರು, ಕುಂಬಾರ, ದಲಿತರು, ಬಿಲ್ಲವರು, ಹಳೆಪೈಕದವರು (ದೀವರು), ಬೇಲರು, ಮಾರಾಟಿಗರು, ಸೆಟ್ಟರು, ಕ್ಷೌರಿಕರು (ಬಜಂತ್ರಿ), ಕಿಲಿಸ್ತರ, ಕೆಂದಾರೆ. |
| ೩. | ಮನುಷ್ಯ ಸಂಕುಲ | ಚಂದ್ರಯ್ಯಗೌಡ, ಹೂವಯ್ಯ, ರಾಮಯ್ಯ, ಬೈಂದೂರು ಬಸವೇಗೌಡ್ರು, ಗಾಡಿಯಾಳು ನಿಂಗ, ನುಗ್ಗಿಮನೆ ತಮ್ಮಣ್ಣಗೌಡ, ಎಂಟೂರು ಶೇಷೇಗೌಡ, ಪುಟ್ಟಣ್ಣ, ಚಿನ್ನಯ್ಯ, ಸಂಪಿಗೆ ಪುಟ್ಟಯ್ಯಗೌಡ, ಅತ್ತಿಗದ್ದೆ ಹಿರಿಯಣ್ಣಗೌಡ, ಸಿಂಗಪ್ಪಗೌಡ, ವಾಸು, ಶಾಮಯ್ಯಗೌಡ, ಮೇಗ್ರಳ್ಳಿ ನಾಗಪ್ಪ ಹೆಗ್ಗಡೆ, ಲಚ್ಚ ಮುದ್ದೂರು ಭರ್ಮೇಗೌಡ, ಸೇರೆಗಾರ ರಂಗಪ್ಪಶೆಟ್ಟಿ, ನಂಜ, ಪುಟ್ಟ, ಓಬಯ್ಯ, ಗಂಗಾ, ತಿಮ್ಮಾ, ಅಣ್ಣಯ್ಯಗೌಡ, ವೆಂಕಪ್ಪಜೋಯಿಸ, ಬಚ್ಚ, ಶಂಕರಯ್ಯ, ರಮೇಶ, ಮಾಧೂ, ಸಿದ್ದ, ಬೇಲರ ಭೈರ, ಕಾಳ, ಡೊಳ್ಳುಹೊಟ್ಟೆಯ ಸೋಮ, ಕೃಷ್ಣಪ್ಪ, ಕಿಲಸ್ತರ ಜಾಕಿ, ಕೃಷ್ಣಯ್ಯ ಶೆಟ್ಟಿ, ತಿಮ್ಮಯ್ಯಶೆಟ್ಟಿ, ಬಾಳೂರು ಸಿಂಗೇಗೌಡ, ಮಾರ್ಕ್, ಸುಕ್ರಾ, ಮಂಜ, ನಲ್ಲುಹಳ್ಳಿ ಪೆದ್ದೇಗೌಡ, ಗುತ್ತಿ, ಕೆಂಚ, ದೊಡ್ಡರುದ್ರ, ಸಣ್ಣರುದ್ರ, ವೀರಭದ್ರ, ಸಿಂಗಾಜೋಯಿಸ, ಸೀತೆ, ಸುಬ್ಬಮ್ಮ, ನಾಗಮ್ಮ, ಪುಟ್ಟಮ್ಮ, ರಂಗಮ್ಮ, ಲಕ್ಷ್ಮಿ, ಸೇಸಿ, ಗಂಗೆ, ಲಲಿತೆ, ರಂಗಿ, ಗೌರಮ್ಮ, ರಾಮಕ್ಕ. |
| ೪. | ಸಸ್ಯ ಸಂಕುಲ | ಹಲಸಿನ ಮರ, ನೇರಲೆಮರ, ಮಾವಿನಮರ, ಕದಳಿ, ನೂಲೆಗೆಣಸು, ಕಿತ್ತಳೆ, ಪೇರಲುಮರ, ಪನ್ನೇರಲು ಮರ, ಹುಣಸೆಮರ, ಆಲದಮರ, ಮುಳುಗಾಯಿ (ಬದನೆಕಾಯಿ), ಮುತ್ತುಗದಮರ, ಖರ್ಜೂರದ ಮರ, ಗುಲಾಬಿ, ಅಡಿಕೆ, ವಿಳ್ಯದೆಲೆ, ಮೆಣಸಿನಗಿಡ, ತೆಂಗು, ಹರುವೆಸೊಪ್ಪು, ಮೇಲು ಸೊಪ್ಪು, ಬಸರಿಮರ, ಕೆಂಪುದಾಸವಾಳ, ತುಳಸಿಗಿಡ, ಬಗಿನಮರ, ಬಿದಿರು, ಕಲ್ಲು ಸಂಪಿಗೆ, ಹುಳಿಚೊಪ್ಪು, |

ಕೊತ್ತಂಬರಿಸೊಪ್ಪು, ಬೆಮ್ಮೂರಲ, ಉತ್ತುತ್ತಿಯ ಮರ, ಧೂಪದ ಮರ, ಮಂಗನಬಳ್ಳಿ, ತಿಂಗಳವರೆಕಾಯಿಗಿಡ, ಹಾಲಿವಾಣದಮರ, ಲಾಂಟಾನ, ತೇನೆಮರ, ಜೊಂಡುಹುಲ್ಲು, ಮುಂಡುಗ, ಕೇದಗೆ, ಬೆತ್ತ, ವಾಟೆ, ಕೆಸು, ನಂದಿಮರ, ಕಬ್ಬು, ಭತ್ತ, ಗುಲಾಬಿ, ಸೌತೆಕಾಯಿ, ನಿಂಬೆ, ಕುಂಬಳಕಾಯಿಗಿಡ.

| | | |
|---|---|---|
| ೫. | ಪ್ರಾಣಿಸಂಕುಲ | ದನಗಳು (ಹಸು, ಕರು, ಎತ್ತು), ನಾಯಿ (ಶುನಕ) ಕೋಳಿ (ಹೇಂಟೆ, ಹುಂಜ), ಬೆಕ್ಕು, ಹುಲಿ, ಹಲ್ಲಿ, ಹಂದಿ, ಕಾಡುಕೋಣ, ಕಡವೆ, ಮೇಕೆ, ಕರಡಿ, ಕುರಿ, ಚಿರತೆ, ತೋಳ, ಹಾವುಗಳು (ದಾಸರ, ಕಾಳಿಂಗ, ನಾಗರ, ಕೇರೆ), ಕಣೆಹಂದಿ (ಮುಳ್ಳುಹಂದಿ), ಜಿಂಕೆ, ಮೊಸಳೆ. |
| ೬. | ಇತರೆ ಪ್ರಾಣಿಸಂಕುಲ | ಮೀನು, ಕಪ್ಪೆ, ಏಡಿ, ಕಾರೇಡಿ, ಇಂಬಳ (ಜಿಗಣೆ), ನೊಣ, ಹಲ್ಲಿ, ಗಿರಲು, ಬಸವನಹುಳು, ಸಗಣಿಹುಳು, ಕೊಚ್ಚಲಿ, ಇರುವೆ, ಚಿಟ್ಟೆ, ಜೇಡ, ಸೊಳ್ಳೆ. |
| ೭. | ಪಕ್ಷಿ ಸಂಕುಲ | ಕಾಜಾಣ, ಕೋಗಿಲೆ, ಪಿಕಳಾರ, ಮಡಿವಾಳ, ಗಿಳಿ, ಹೊರಸಲಕ್ಕಿ, ಉರುಳಿಹಕ್ಕಿ, ಕಾಗೆ, ಚೋರೆ, ಕುರುಡುಗಪ್ಪಟೆ, ಮಿಂಚುಳ್ಳಿ, ಕಾಮಳ್ಳಿ, ಕುಟುರ, ಪುರಳಿ, ಮರಕುಟಿಗ, ತೇನೇ ಹಕ್ಕಿ, ಗೂಬೆ, ನವಿಲು. |

## ೨. ಮಲೆಗಳಲ್ಲಿ ಮದುಮಗಳು

| | | |
|---|---|---|
| ೧. | ಸ್ಥಳಗಳು | ಸಿಂಬಾವಿ, ಲಕ್ಕುಂದ, ಸೀತೂರು (ಗುಡ್ಡ), ಮೇಗರಹಳ್ಳಿ, ತೀರ್ಥಹಳ್ಳಿ, ಆಗುಂಬೆ, ಕಲ್ಲೂರು, ಹೂವಳ್ಳಿ, ಕೋಣೂರು, ಹಳೆಮನೆ, ಬೆಟ್ಟಳ್ಳಿ, ಹುಲಿಕಲ್ಲುಗುಡ್ಡ, ಬಾವಿಕೊಪ್ಪ, ಧರ್ಮಸ್ಥಳ, ತಿರುಪತಿ, ಮೂಗುರು, ದುರ್ಗ, ಕೊಪ್ಪ, ಕಾಗಿನಹಳ್ಳಿ, ಹೊಸಕೇರಿ, ಅತ್ತಿಗದ್ದೆ, ತೂದೂರು, ದೇವಂಗಿ, ಬೀರೂರು, ಮತ್ತಿಗೇರಿ, ಮಾಳೂರು, ಮುಂಡಕಾರು, ಮುತ್ತೂರು, ಶೃಂಗೇರಿ, ಸಿಂಧುವಳ್ಳಿ ಸಿದ್ದರಮಠ, ಹೊನ್ನಳ್ಳಿ, ಕಾನೂರು, ಸೀತೆಮನೆ. |
| ೨. | ಜಾತಿಗಳು | ಒಕ್ಕಲಿಗರು, ಬ್ರಾಹ್ಮಣರು (ಹಾರುವರು), ಹೊಲೆಯರು, ಬೇಲರು, ಮಾದಿಗರು, ಬಿಲ್ಲವರು, ಹಸಲವರು, ಕಿರಾದಿಯವರು, ಹಳೆಪೈಕದವರು (ದೀವರು), ಸೆಟ್ಟರು, ಪಾಳೆಗಾರರು, ನಾಯಕರು, ಇಸ್ಲಾಂ, ಮರಾಟ, ಕ್ರಿಶ್ಚಿಯನ್, ಮಲೆಯಾಳಿ, ಅಂಬಿಗ, ಕಂಬಾರ, ಕಾಡುಕೊಂಕಣಿ. |
| ೩. | ಮನುಷ್ಯ ಸಂಕುಲ | ಸಿಂಬಾವಿ ಭರಮ್ಮೈಹೆಗ್ಗಡೆ, ಗುತ್ತಿ (ನಾಯಿಗುತ್ತಿ), ಮರಾಟಮಂಜ, ಹಳೆಪೈಕದ ಸೇಸನಾಯ್ಕ, ರಂಗ, ಸೀತೂರು ತಿಮ್ಮನಾಯ್ಕ, ಲಕ್ಕುಂದದ ಪುಟ್ಟನಾಯ್ಕ, ಮೇಗ್ರಳ್ಳಿ ಕಣ್ಣಾಪಂಡಿತರು, ತಿಮ್ಮಪ್ಪಹೆಗ್ಗಡೆ, ಸುಬ್ಬಣ್ಣಹೆಗ್ಗಡೆ, ಶಂಕರಹೆಗ್ಗಡೆ, ಹಮಿರನಾಯ್ಕ, ಕಲ್ಲಯ್ಯಗೌಡ, ದೊಡ್ಡಬೀರ, ಮಾಪಿಳ್ಳೆ ಕರಿಮೀನುಸಾಬಿ, ಬಚ್ಚ, ಹೂವಳ್ಳಿ ವೆಂಕಟಣ್ಣ, ಕೋಣೂರುರಂಗಪ್ಪಗೌಡ, ನಾಗಣ್ಣ, ಅನಂತಯ್ಯ ಐಗಳು, ಸಾಹುಕಾರ್ಜು ಮಂಜಾಭಟ್ಟರು, ಮುಕುಂದಯ್ಯ, ಕುದುಕ, ರಂಗಪ್ಪಗೌಡ, ಚೀಂಕ್ರ, ಪಿಜಣ, ಐತ, ಮೊಡಂಕಿಲ, ದೇವಯ್ಯ, ರಾಮು, ಕಿಲಸ್ತರ ಪಾದ್ರಿ ಜೀವರತ್ನಯ್ಯ, ಮೂಗೂರಗಣಮಗ, ದೊಳ್ಳ, ಬುಲ್ಡ, ಬುರುಡ, ಮಂಜ, ಸಿದ್ದ, ಕರಿಸಿದ್ದ, ಬಚ್ಚ, ದುಗ್ಗಣ್ಣ, ಮಾಯಿಂದಪ್ಪ (ಪೋಲೀಸ್), ದೊಡ್ಡಣ್ಣ ಹೆಗ್ಗಡೆ, ನಾರಾಯಣಭಟ್ಟ, ಸಣ್ಣತಿಮ್ಮ, ಪುಟ್ಟ, ಬೈರ, ಕುಳವಾಡಿ ಸಣ್ಣ, ಕಿಟ್ಟಿಐತಾಳ, ಗಂಗ, ಹೊಸಕೇರಿ ಬಸಪ್ಪನಾಯಕ, ಮಾನನಾಯಕ, ಸಣ್ಣಬೀರ, ಪುಟ್ಟಬೀರ, ದೊಡ್ಡಬೀರ, ಸುಬ್ಬಯ್ಯ ಸೆಟ್ಟಿ, ರಾಮಭಟ್ಟ, ಬಗ್ರ, ಸದಿಯ, ಕೊರಗ, ಅಪ್ಪಯ್ಯಣ್ಣ, ಲೇಕ್‌ಹಿಲ್, ಲಚ್ಚಾಚಾರಿ, ಅಂಬಿಗ ತಮ್ಮಯ್ಯಣ್ಣ, ಪುಡೀಸಾಬು, ಅಜ್ಜೀಸಾಬು, ಲುಂಗೀಸಾಬು, ಇಜಾರದ ಸಾಬು, ಜಟ್ಟಮ್ಮ, ಲಕ್ಕಮ್ಮ, ಕಾಡಿ, ಚೌಡಿ, ಮಂಜಮ್ಮ, ತಿಮ್ಮಿ, ಸೇಸಿ, ಸೆಟ್ಟಗಿತ್ತಿ ಅಂತಕ್ಕ, ಹಳೇಪೈಕದ ಹೂಮೀ, ಕಾವೇರಿ, ನಾಗತ್ತೆ, ನಾಗಕ್ಕ, |

| | | |
|---|---|---|
| | | ಚಿನ್ನಮ್ಮ, ದೇಯಿ, ಅಕ್ಕಣಿ, ಪೀಂಚಲು, ಬಾಗಿ, ಕೆಂಪೀ, ದುಗ್ಗಮ್ಮ ಹಳೆಪೈಕದ ಯಂಕಿ, ಜೋತಿರ್ಮಣಿಯಮ್ಮ, ಪುಟ್ಟಿ, ಮಂಜನಹೆಂಡತಿ ಸಿದ್ದಿ, ತಿಮ್ಮನ ಹೆಂಡತಿ ಗಿಡ್ಡಿ, ದಾನಮ್ಮಹೆಗ್ಗಡಿತಿ, ಚಿಕ್ಕಪುಟ್ಟಿ, ಲಕ್ಕಿ, ಸುಬ್ಬಿ, ರಂಗಮ್ಮ, ದೇವಮ್ಮ. |
| ೪. | ಸಸ್ಯ ಸಂಕುಲ | ಅಡಿಕೆ, ಕರಿಬಾಳೆ, ಬಗನಿ, ಭತ್ತ, ತೆಂಗು, ಹಾಲಿವಾಣ, ಹಲಸಿನಮರ, ತುಳಸಿ, ಅಂಕೋಲೆ ಮುಳ್ಳಿನಗಿಡ. |
| ೫. | ಪ್ರಾಣಿ ಸಂಕುಲ | ನರಿ, ಹುಲಿ, ಹಾವು, ಸಿಂಹ, ನಾಯಿ (ಹುಲಿಯ), ಕುರ್ಕ, ಚಿರತೆ, ಕುದುರೆ, ಕೋಳಿ (ಹೇಂಟೆ, ಹುಂಜ), ಕುರಿ (ಕಾಡುಕುರಿ), ದನ (ಹಸು, ಕರು, ಎತ್ತು), ಕತ್ತೆ, ಹಂದಿ, ಮೇಕೆ, ಹೋತ, ಸಲಗ, ಗೂಳಿ, ಬರ್ಕ, ಮೊಲ, ಬೆಕ್ಕು, (ಬಾಡುಬೆಕ್ಕು), ಮುಸಿಯ, ಕಡ, ಮೊಸಳೆ, ಜಿಂಕೆ. |
| ೬. | ಇತರೆ ಪ್ರಾಣಿ ಸಂಕುಲ | ಮಿಣುಕುಹುಳು, ಜೀರುಂಡೆ, ಇಂಬಳ, ಹಲ್ಲಿ, ಜೀರ್ಮಟಿ, ಓಡುಹುಳು, ಓತಿಕ್ಯಾತ, ಹಾವುರಾಣಿ, ಅಳಿಲು, ಮೀನು, ಏಡಿ, ಸೀಗಡಿ, ಚಟ್ಟಂಗಿ, ಕಾವೇಟಿ, ಅವಲುಮೀನು, ಚಿಗಳಿ ಇರುವೆ, ಕಾಡುಚೇಡ. |
| ೭. | ಪಕ್ಷಿ ಸಂಕುಲ | ಹಂಡ ಹಕ್ಕಿ, ಕಾಜಾಣ, ಮರುಕುಟಿಗ, ಪಿಕಳಾರ, ಹೊರಸಲುಹಕ್ಕಿ, ಗಿಳಿ, ಕಾಮಳ್ಳಿ, ನವಿಲು, ಕಾಗೆ, ಕೋಗಿಲೆ, ಮಂಗಟ್ಟೆಹಕ್ಕಿ, ಮಿಂಚುಳ್ಳಿ, ಕಾಡುಕೋಳಿ, ಚೋರೆ, ಕುಟರ, ಲಲನಾಕಂಟದ, ಮಡಿವಾಳಹಕ್ಕಿ, ಚಿಟ್ಟೆಕೋಳಿ, ಗಿಜಗಾರ್ಲು ಹಕ್ಕಿ, ಉರುಳಿಹಕ್ಕಿ, ತೇನೆಹಕ್ಕಿ, ಶಕುನಿಹಕ್ಕಿ, ಕುರುಡುಗಪ್ಪಟೆ ಹಕ್ಕಿ. |

೦ ೦

೫

# ಕುವೆಂಪು ಕಾದಂಬರಿಗಳ ಮತ್ತು ಕಥಾಸಂಕಲನಗಳ ಆವೃತ್ತಿಗಳು

## ೧. ಕಾನೂರು ಹೆಗ್ಗಡಿತಿ

೧. ಕಾನೂರು ಹೆಗ್ಗಡಿತಿ, ಮೊದಲನೆಯ ಮುದ್ರಣ, ೧೯೩೬,ಕಾವ್ಯಾಲಯ (ನಾಲ್ಕು ಭಾಗಗಳಲ್ಲಿ), ಶಿವಮೊಗ್ಗ.
೨. ಕಾನೂರು ಹೆಗ್ಗಡಿತಿ, ಎರಡನೆಯ ಮುದ್ರಣ
೩. ಕಾನೂರು ಹೆಗ್ಗಡಿತಿ, ಮೂರನೆಯ ಮುದ್ರಣ
೪. ಕಾನೂರು ಹೆಗ್ಗಡಿತಿ, ನಾಲ್ಕನೆಯ ಮುದ್ರಣ, ೧೯೬೦, ಉದಯರವಿ ಪ್ರಕಾಶನ, ಮೈಸೂರು - ೯
೫. ಕಾನೂರು ಹೆಗ್ಗಡಿತಿ, ಐದನೆಯ ಮುದ್ರಣ, ೧೯೭೦, ಉದಯರವಿ ಪ್ರಕಾಶನ, ಮೈಸೂರು - ೯
೬. ಕಾನೂರು ಹೆಗ್ಗಡಿತಿ, ಆರನೆಯ ಮುದ್ರಣ, ೧೯೮೬, ಉದಯರವಿ ಪ್ರಕಾಶನ, ಮೈಸೂರು - ೯
೭. ಕಾನೂರು ಹೆಗ್ಗಡಿತಿ, ಏಳನೆಯ ಮುದ್ರಣ, ೧೯೯೨, ಉದಯರವಿ ಪ್ರಕಾಶನ, ಮೈಸೂರು - ೯
೮. ಕಾನೂರು ಹೆಗ್ಗಡಿತಿ, ಎಂಟನೆಯ ಮುದ್ರಣ, ೧೯೯೫, ಉದಯರವಿ ಪ್ರಕಾಶನ, ಮೈಸೂರು - ೯
೯. ಕಾನೂರು ಹೆಗ್ಗಡಿತಿ, ಒಂಬತ್ತನೆಯ ಮುದ್ರಣ, ೧೯೯೭, ಉದಯರವಿ ಪ್ರಕಾಶನ, ಮೈಸೂರು - ೯

## ೨. ಮಲೆಗಳಲ್ಲಿ ಮದುಮಗಳು

೧. ಮಲೆಗಳಲ್ಲಿ ಮದುಮಗಳು, ೧೯೬೭, ಮೊದಲನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೨. ಮಲೆಗಳಲ್ಲಿ ಮದುಮಗಳು, ೧೯೭೪, ಎರಡನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೩. ಮಲೆಗಳಲ್ಲಿ ಮದುಮಗಳು, ೧೯೮೫, ಮೂರನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೪. ಮಲೆಗಳಲ್ಲಿ ಮದುಮಗಳು, ೧೯೯೨, ನಾಲ್ಕನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೫. ಮಲೆಗಳಲ್ಲಿ ಮದುಮಗಳು, ೧೯೯೫, ಐದನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೬. ಮಲೆಗಳಲ್ಲಿ ಮದುಮಗಳು, ೧೯೯೭, ಆರನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೭. ಮಲೆಗಳಲ್ಲಿ ಮದುಮಗಳು, ೧೯೯೮, ಏಳನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯

## ೩. ನನ್ನ ದೇವರು ಮತ್ತು ಇತರ ಕಥೆಗಳು

೧. ನನ್ನ ದೇವರು ಮತ್ತು ಇತರ ಕಥೆಗಳು, ೧೯೪೦, ಮೊದಲನೆಯ ಮುದ್ರಣ, ಕಾವ್ಯಾಲಯ ಪ್ರಕಾಶನ, ಶಿವಮೊಗ್ಗ
೨. ನನ್ನ ದೇವರು ಮತ್ತು ಇತರ ಕಥೆಗಳು, ೧೯೪೫, ಎರಡನೆಯ ಮುದ್ರಣ.
೩. ನನ್ನ ದೇವರು ಮತ್ತು ಇತರ ಕಥೆಗಳು, ೧೯೫೪, ಮೂರನೆಯ ಮುದ್ರಣ.
೪. ನನ್ನ ದೇವರು ಮತ್ತು ಇತರ ಕಥೆಗಳು, ೧೯೬೩, ನಾಲ್ಕನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೫. ನನ್ನ ದೇವರು ಮತ್ತು ಇತರ ಕಥೆಗಳು, ೧೯೭೨, ಐದನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೬. ನನ್ನ ದೇವರು ಮತ್ತು ಇತರ ಕಥೆಗಳು, ೧೯೭೪, ಆರನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೭. ನನ್ನ ದೇವರು ಮತ್ತು ಇತರ ಕಥೆಗಳು, ೧೯೮೬, ಏಳನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯

೮. ನನ್ನ ದೇವರು ಮತ್ತು ಇತರ ಕಥೆಗಳು, ೧೯೯೦, ಎಂಟನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೯. ನನ್ನ ದೇವರು ಮತ್ತು ಇತರ ಕಥೆಗಳು, ೧೯೯೩, ಒಂಭತ್ತನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೧೦. ನನ್ನ ದೇವರು ಮತ್ತು ಇತರ ಕಥೆಗಳು, ೧೯೯೬, ಹತ್ತನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೧೧. ನನ್ನ ದೇವರು ಮತ್ತು ಇತರ ಕಥೆಗಳು, ೧೯೯೭, ಹನ್ನೊಂದನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯

## ೪. ಸಂನ್ಯಾಸಿ ಮತ್ತು ಇತರ ಕಥೆಗಳು

೧. ಸಂನ್ಯಾಸಿ ಮತ್ತು ಇತರ ಕಥೆಗಳು, ೧೯೩೬, ಮೊದಲನೆಯ ಮುದ್ರಣ, ಕಾವ್ಯಾಲಯ ಪ್ರಕಾಶನ, ಶಿವಮೊಗ್ಗ
೨. ಸಂನ್ಯಾಸಿ ಮತ್ತು ಇತರ ಕಥೆಗಳು, ೧೯೬೩, ಮೊದಲನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೩. ಸಂನ್ಯಾಸಿ ಮತ್ತು ಇತರ ಕಥೆಗಳು, ೧೯೭೦, ಎರಡನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೪. ಸಂನ್ಯಾಸಿ ಮತ್ತು ಇತರ ಕಥೆಗಳು, ೧೯೮೪, ಮೂರನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯
೫. ಸಂನ್ಯಾಸಿ ಮತ್ತು ಇತರ ಕಥೆಗಳು, ೧೯೯೧, ನಾಲ್ಕನೆಯ ಮುದ್ರಣ, ಉದಯರವಿ ಪ್ರಕಾಶನ, ಮೈಸೂರು - ೯

o o

೬

# ಕುವೆಂಪು ಕಾಂದಬರಿಗಳಲ್ಲಿ ಬರುವ ಕೌಟುಂಬಿಕ ನಕ್ಷೆಗಳು

## ೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ




ಪುಟ್ಟಣ್ಣ (ಚಂದ್ರೇಗೌಡರ ಒಕ್ಕಲು)

ರಂಗಪ್ಪಸೆಟ್ಟಿ (ಸೇರೆಗಾರ)

ಗಂಗೆ (ರಂಗಪ್ಪಸೆಟ್ಟಿಯ ಪ್ರೇಯಸಿ)

ಹಳೆಪೈಕದ ತಿಮ್ಮ (ಕಳ್ಳು ಕಾಯಿಸುವವ)

ಡೊಳ್ಳುಹೊಟ್ಟೆ ಸೋಮ (ಗಟ್ಟದ ಕೆಳಗಿನ ಆಳು)

ಜೀತದಾಳುಗಳು

ಸಿದ್ದ, ಬೇಲರ ಬೈರ, ಕಾಳ, ಮಂಜ, ಕೆಂಚ, ಗುತ್ತಿ (ಸಣ್ಣಕುಳ-ಜೀತದಾಳುಗಳು)

ದೊಡ್ಡರುದ್ರ, ಸಣ್ಣರುದ್ರ, ಸುಕ್ರಾ, ಸೇಸಿ, ಗಂಗ, ನಿಂಗ, ಪುಟ್ಟ

೨. ಮುತ್ತಳ್ಳಿ

ಶಾಮಯ್ಯಗೌಡ




೩. ಕೆಳಕಾನೂರು

ಅಣ್ಣಯ್ಯಗೌಡ (ಚಂದ್ರಯ್ಯಗೌಡನ ಒಕ್ಕಲು)




೪. ಸೀತೆಮನೆ

ಸಿಂಗಪ್ಪಗೌಡ



೫. ಅಗ್ರಹಾರ

- ವೆಂಕಪ್ಪ ಜೋಯಿಸ
- ವೆಂಕಪ್ಪ ಜೋಯಿಸರ ಹೆಂಡತಿ
- ವೆಂಕಪ್ಪ ಜೋಯಿಸರ ಮಗ

೬. ಇತರೆ ಪಾತ್ರಗಳು

- ಕಿಲಿಸ್ತರ ಮಾರ್ಕ
- ಕಳ್ಳಂಗಡಿಯವನು
- ಕೃಷ್ಣಯ್ಯ ಸೆಟ್ಟಿ
- ತಿಮ್ಮಯ್ಯ ಸೆಟ್ಟಿ (ಗಂಗೆಯ ಗಂಡ)
- ಮುದ್ದೂರು ಧರ್ಮೇಗೌಡ
- ಮೇಗರವಳ್ಳಿ ನಾಗಪ್ಪಗೌಡ
- ಅತ್ತಿಗದ್ದೆ ಹಿರಿಯಣ್ಣಗೌಡ
- ಎಂಟೂರು ಶೇಷೇಗೌಡ
- ಬೈಂದೂರು ಬಸವೇಗೌಡ
- ನೆಲ್ಲುಹಳ್ಳಿ ಪೆದ್ದೇಗೌಡ (ಸುಬ್ಬಮ್ಮನ ತಂದೆ)

## ೨. ಮಲೆಗಳಲ್ಲಿ ಮದುಮಗಳು

೧. ಸಿಂಬಾವಿ

ಭರಮೈ ಹೆಗ್ಗಡೆ

- ಜಟ್ಟಮ್ಮ (ಹೆಂಡತಿ - ಹಳೆಮನೆ ಶಂಕರಪ್ಪ ಹೆಗ್ಗಡೆಯ ತಂಗಿ)
- ಲಕ್ಕಮ್ಮ (ತಂಗಿ)
- ಮಂಜಮ್ಮ (ಎರಡನೆಯ ಹೆಂಡತಿಯಾಗಿ ಬರುವ ಹಳೆಮನೆ ಸುಬ್ಬಣ್ಣ ಹೆಗ್ಗಡೆಯ ಮಗಳು)

ಜೀತದಾಳುಗಳು

- ಕರಿಸಿದ್ದ
- ಗುತ್ತಿ (ಕರಿಸಿದ್ದನ ಮಗ - ಬೆಟ್ಟಳ್ಳಿ ತಿಮ್ಮಿಯೊಡನೆ ವಿವಾಹ)
- ಮರಾಟಿ ಮಂಜ
- ದೊಳ್ಳ
- ಸಣ್ಣ ತಿಮ್ಮ
- ಬುಲ್ಡ

೨. ಕೋಣೂರು

ರಂಗಪ್ಪಗೌಡ

- ದಾನಮ್ಮ (ತಾಯಿ, ಕಾಗಿನಹಳ್ಳಿಯ ಅಮ್ಮ)
- ಮುಕುಂದಯ್ಯ (ತಮ್ಮ - ಹೂವಳ್ಳಿ ಚಿನ್ನಮ್ಮನೊಡನೆ ವಿವಾಹ)
- ರಂಗಮ್ಮ (ಅಕ್ಕ - ಹಳೆಮನೆ ದೊಡ್ಡಣ್ಣಹೆಗ್ಗಡೆ ಪತ್ನಿ)
- ತಿಮ್ಮು (ಮಗ)

ಆಳುಗಳು

- ಚೀಂಕ್ರ
  - ದೇಯಿ (ಹೆಂಡತಿ)
  - ಮೂವರು ಮಕ್ಕಳು
- ಪಿಜಣ
  - ಅಕ್ಕಣಿ (ಹೆಂಡತಿ)
- ಐತ
  - ಪೀಂಚಲು (ಹೆಂಡತಿ)
- ಮೊಡಂಕಿಲ
  - ಬಾಗಿ (ಹೆಂಡತಿ)

೩. ಹಳೆಮನೆ

ರಂಗಪ್ಪಗೌಡ

- ಸುಬ್ಬಣ್ಣ ಹೆಗ್ಗಡೆ
- ದೊಡ್ಡಣ್ಣ ಹೆಗ್ಗಡೆ (ಹಿರಿಮಗ)
  - ರಂಗಮ್ಮ (ಹೆಂಡತಿ)
  - ಧರ್ಮು (ಮಗ)
- ತಿಮ್ಮಪ್ಪ ಹೆಗ್ಗಡೆ (ಕಿರಿಮಗ)
- ಮಂಜಮ್ಮ (ಮಗಳು ಸಿಂಬಾವಿ ಭರಮೈಹೆಗ್ಗಡೆ ಜೊತೆ ವಿವಾಹ)

ಶಂಕರಪ್ಪ ಹೆಗ್ಗಡೆ

- ಸೀತಮ್ಮ (ಹೆಂಡತಿ)
- ರಾಮು (ಮಗ)
- ಕೆಂಪಿ (ಆಳು)

ಆಳುಗಳು

- ಮಂಜ
- ತಿಮ್ಮ
  - ಸಿದ್ದಿ (ಹೆಂಡತಿ)
- ಕುಳುವಾಡಿ ಸಣ್ಣ
  - ಪುಟ್ಟಿ (ಮಗಳು)
    - ಗಂಗ (ಮಗ)
- ಭೈರ
- ಬಚ್ಚ
- ಸಣ್ಣ ತಿಮ್ಮ
- ಪುಟ್ಟ

೪. ಬೆಟ್ಟಳ್ಳಿ

ಕಲ್ಲಯ್ಯಗೌಡ

- ಕಲ್ಲಯ್ಯಗೌಡರ ಹೆಂಡತಿ (ದೊಡ್ಡಮ್ಮ ಹೆಗ್ಗಡತಿ)
- ದೇವಯ್ಯ (ಮಗ)
  - ದೇವಮ್ಮ (ಹೆಂಡತಿ - ಕೋಣೂರು ಮುಕುಂದಯ್ಯನ ತಂಗಿ)
  - ಚಲುವಯ್ಯ (ಮಗು)
- ಕಾಡು (ಕಿರಿಯ ಮಗ)

ಆಳುಗಳು

- ದೊಡ್ಡಬೀರ
  - ಸೇಸಿ (ಹೆಂಡತಿ)
  - ಸಣ್ಣಬೀರ (ದೊಡ್ಡಮಗ)
  - ಪುಟ್ಟಬೀರ (ಕಿರಿಮಗ)
    - ಚಿಕ್ಕಪುಟ್ಟಿ (ಹೆಂಡತಿ)
  - ತಿಮ್ಮಿ (ಮಗಳು - ಗುತ್ತಿಯೊಡನೆ ಮದುವೆ)
- ಬಚ್ಚ

೫. ಮೇಗರವಳ್ಳಿ

- ಕಣ್ಣಾಪಂಡಿತ
- ಇಜಾರದ ಸಾಬು
- ಕರೀಂಸಾಬು (ಕರಿಮೀನು ಸಾಬಿ)
- ಲುಂಗಿ ಸಾಬು
- ಪುಡಿ ಸಾಬಿ (ಅಜ್ಜಿ ಸಾಬು)
- ಅಂತಕ್ಕ ಸೆಡ್ತಿ
  - ಕಾವೇರಿ (ಮಗಳು)
  - ಸುಬ್ಬಯ್ಯ ಸೆಟ್ಟಿ (ಗಂಡ)
  - ಕಿಟ್ಟಯ್ಯ ಸೆಟ್ಟಿ (ಸೋದರಳಿಯ)
- ಜೀವರತ್ನಯ್ಯ (ಪಾದ್ರಿ)
  - ಜ್ಯೋತಿರ್ಮಣಿಯಮ್ಮ (ಮಗಳು)

೬. ಲಕ್ಕುಂದ

- ಸೇಸಾನಾಯ್ಕ
  - ಹಮೀರ ನಾಯ್ಕ (ಮಗ)
- ರಂಗಾ
  - ಚೌಡಿ (ಹೆಂಡತಿ)
- ಪುಟ್ಟನಾಯ್ಕ
  - ಕಾಡಿ (ಅತ್ತೆ)
- ಸೀತೂರ ತಿಮ್ಮಾನಾಯ್ಕ (ಸೇಸಾನಾಯ್ಕನ ಸಂಬಂಧಿ)

೭. ಕಲ್ಲೂರು

- ಸಾಹುಕಾರ ಮಂಜಾಭಟ್ಟ
  - ನಾರಾಯಣ ಭಟ್ಟ (ಮಗ)
- ಕಿಟ್ಟೈತಾಳ

೮. **ಹೂವಳ್ಳಿ**

ವೆಂಕಟಣ್ಣ

- ಚಿನ್ನಮ್ಮ (ಮಗಳು)
- ಅಜ್ಜಿ (ಚಿನ್ನಮ್ಮನ ತಾಯಿಯ ತಾಯಿ)

೯. **ಇತರೆ ಪಾತ್ರಗಳು**

- ಗಡ್ಡದಯ್ಯ
- ಕಾನೂರು ಚಂದ್ರಯ್ಯಗೌಡ
- ಸೀತೆಮನೆ ಸಿಂಗಪ್ಪಗೌಡ
- ಮಾಯಿಂದಪ್ಪ (ಪೊಲೀಸಿನವನು)
- ಪೊಲೀಸಿನವನು
- ಹಳೆಪೈಕದ ವೆಂಕಿ
- ಹೊಸಕೇರಿ ಬಸಪ್ಪನಾಯಕ
- ಐಗಳು ಅನಂತಯ್ಯ
- ಮೂಗೂರು ಗಣಮಗ

೦ ೦

## ೭

# ಕಾದಂಬರಿಗಳ ಸ್ಥಳಗಳನಕ್ಷೆ

### ೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ



## ೨. ಮಲೆಗಳಲ್ಲಿ ಮದುಮಗಳು

(ಗುತ್ತಿಯ ಯಾತ್ರೆಗೆ ಸಂಬಂಧಿಸಿದಂತೆ)





೮

# ಆಕರ ಗ್ರಂಥಗಳು


೧ ಕುವೆಂಪು, ಕಾನೂರು ಹೆಗ್ಗಡಿತಿ, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೯೮

೨ ಕುವೆಂಪು, ಮಲೆಗಳಲ್ಲಿ ಮದುಮಗಳು, ಉದಯ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೯೮

೩ ಕುವೆಂಪು, ಮಲೆನಾಡಿನ ಚಿತ್ರಗಳು, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦

೪ ಕುವೆಂಪು, ನೆನಪಿನ ದೋಣಿಯಲ್ಲಿ ಭಾಗ - ೧, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೮೦

೫ ಕುವೆಂಪು, ನನ್ನ ದೇವರು ಮತ್ತು ಇತರೆ ಹತ್ತು ಕಥೆಗಳು, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೯೧

೬ ಕುವೆಂಪು, ಜಲಗಾರ, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೮೯

೭ ಕುವೆಂಪು, ಸನ್ಯಾಸಿ ಮತ್ತು ಇತರ ಕಥೆಗಳು, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೯೧

೮ ಕುವೆಂಪು, ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೯೮

೯ ಕುವೆಂಪು, ಸಾಹಿತ್ಯ ಪ್ರಚಾರ, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೩೦

೧೦ ಕುವೆಂಪು, ಷಷ್ಠಿನಮನ, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೬೪

೧೧ ಕುವೆಂಪು, ತಪೋನಂದನ, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೯೫

೧೨ ಕುವೆಂಪು, ಕಾವ್ಯವಿಹಾರ, ಉದಯರವಿ ಪ್ರಕಾಶನ, ವಾಣೀವಿಲಾಸಪುರಂ, ಮೈಸೂರು - ೨, ೧೯೯೨

೧೩ ಕುವೆಂಪು, ಯುಗಯಾತ್ರೀ ಭಾರತೀಯ ಸಂಸ್ಕೃತಿ, ೧,೨,೩, (ಪ್ರ.ಸಂ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦, ೧೯೭೧, ೧೯೭೨

೧೪ ಕುವೆಂಪು, ಎ.ಆರ್.ಕೃ. ಜೀವನ ಮತ್ತು ಸಾಧನೆ, (ಸಂ), ಹಾ.ಮಾ.ನಾ, ಎಚ್. ತಿಪ್ಪೇರುದ್ರಸ್ವಾಮಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೧

೧೫ ಕುವೆಂಪು, ಪ್ರೇತ - ಕ್ಯೂ, ಉದಯರವಿ ಪ್ರಕಾಶನ, ಮೈಸೂರು, ೧೯೬೭

೧೬ ಕುವೆಂಪು, ಮಂತ್ರ ಮಾಂಗಲ್ಯ, ಉದಯರವಿ ಪ್ರಕಾಶನ, ಮೈಸೂರು, ೧೯೬೭

೧೭ ಕುವೆಂಪು, ವಿಚಾರಕ್ರಾಂತಿಗೆ ಆಹ್ವಾನ, ಉದಯರವಿ ಪ್ರಕಾಶನ, ಮೈಸೂರು, ೧೯೯೮


o o

